|| ಶ್ರೀ ಗುರುಭ್ಯೋನಮಃ ||

# ಕರ್ನಾಟಕ ಗುರುಕಥಾಕಲ್ಪತರು



(ಪೂರ್ವಾರ್ಧ.)





ಹೊನ್ನಾಳಿ ಮಿಡಲ್ ಸ್ಕೂಲ್ ಮಾಸ್ಟರ್
ತೀರ್ಥಹಳ್ಳಿ ಕೆ. ಲಕ್ಷ್ಮೀನಾರಾಯಣಭಟ್ಟರಿಂದ ರಚಿಸಲ್ಪಟ್ಟುದು.

೧೦೦೦ ಪ್ರತಿಗಳು.

ಬೆಂಗಳೂರು
ವೆ. ಬಿ. ಸುಬ್ಬಯ್ಯ ಅಂಡ್ ಸನ್ಸ್, ಪ್ರಿಂಟರ್ಸ್,
1924.



PRICE Rs. 2-0-0] [ಬೆಲೆ ರೂ. ೨-೦-೦

# ಪೀಠಿಕೆ.

---

ಈ ಕಲಿಯುಗದಲ್ಲಿ ವರ್ಣಾಶ್ರಮಧರ್ಮಗಳೂ, ಗುರುದೇವ ಭಕ್ತಿಯೂ, ಸದಾಚಾರವೂ ಕಡಮೆಯಾಗುತ್ತಿರುವುದು. ಇದಕ್ಕಾಗಿ ಆಗಾಗ ಶ್ರೀ ದೇವರು ಅವತರಿಸಿ "ಸಂಭವಾಮಿಯುಗೇಯುಗೇ" ಎಂಬ ಗೀತೋಕ್ತಿಯಂತೆ ಧರ್ಮಸದಾಚಾರಗಳನ್ನು ಸ್ಥಾಪಿಸುತ್ತಲೇ ಇರುವನಲ್ಲವೇ ? ಹೀಗೆಯೇ ಶ್ರೀ ಗುರು ದತ್ತಾತ್ರೇಯರು ಈ ಭೂಮಿಯಲ್ಲಿ ಅನೇಕಾವತಾರಗಳನ್ನೆತ್ತಿ ಮಹಿಮಾತಿಶಯವನ್ನು ವ್ಯಕ್ತಪಡಿಸಿರುವರು. ಈ ದತ್ತಾತ್ರೇಯರ ಚರಿತ್ರೆಯನ್ನು ಕನ್ನಡ ದಲ್ಲಿ ಯಾರೂ ಬರೆದಿರುವುದಿಲ್ಲ ಈ ಚರಿತ್ರೆಯು ಮರಾಠಿ ಯಲ್ಲಿಯೂ, ಗೀರ್ವಾಣಭಾಷೆಯಲ್ಲಿಯೂ ರಚಿಸಲ್ಪಟ್ಟಿರುವದು. ಮರಾಠಾ ಗುರುಚರಿತ್ರೆಯಲ್ಲಿ ೭೩೦೦ ಶ್ಲೋಕಗಳುಳ್ಳ ೫೩ ಅಧ್ಯಾಯಗಳಿವೆ. ಇದು ಉತ್ತರದೇಶದಲ್ಲಿ ಅತ್ಯಂತ ಪ್ರಾಸಾದಿಕ ಗ್ರಂಥವಾಗಿ ಪ್ರಸಿದ್ಧವಾಗಿರುವುದು. ಇದರಲ್ಲಿ ವರ್ಣಾಶ್ರಮ ಧರ್ಮ ಗಳೂ, ನೀತಿಯೂ, ಸದಾಚಾರವೂ ಶ್ರೀ ಗುರುಗಳಿಂದಲೇ ಉಕ್ತವಾ ಗಿವೆ. ಅನೇಕ ಭಕ್ತರು ಇದನ್ನು ನಿತ್ಯವೂ ಪಠಿಸಿ ಜ್ಞಾನಿಗಳಾಗಿ ಇಷ್ಟಾರ್ಥವನ್ನು ಹೊಂದಿಯೂ ಹೊಂದುತ್ತಲೂ ಇರುವರು. ಈ ಚರಿತ್ರೆಯನ್ನು ಕನ್ನಡಭಾಷೆಯಲ್ಲಿ ಭಾಷಾಂತರಿಸಿರುವೆನು. ಇದ ನ್ನು ಮುದ್ರಿಸಬೇಕಾಗಿ ಅನೇಕ ಮಠಾಧಿಪತಿಗಳಾದ ಯತಿವರ್ಯರೂ, ಆಸ್ತಿಕ ಮಹನೀಯರೂ ನನ್ನನ್ನು ಪ್ರೇರಿಸಿದರು. ಮರಾಠಾ ಭಾಷೆಯ ಪರಿಚಯವು ನನಗೆ ಹೆಚ್ಚಾಗಿಲ್ಲದುದರಿಂದ ಈ ಗ್ರಂಥ ಪರಿವರ್ತನೆಯಲ್ಲಿ ಲೋಪದೋಷಗಳಿರಬಹುದು. ಆಸ್ತಿಕ ಮಹ

ನೀಯರಾದ ವಾಚಕರು ಹಂಸಕ್ಷೀರನ್ಯಾಯದಂತೆ ಗುಣಗ್ರಾಹಿಗಳಾಗಬೇಕಾಗಿ ಬೇಡುತ್ತೇನೆ. ವಾಚಕರ ಉಪಯೋಗಕ್ಕಾಗಿ ಈ ಗ್ರಂಥವನ್ನು ಎರಡು ಭಾಗಗಳಾಗಿ ಮಾಡಿ ಇದರ ಪೂರ್ವಾರ್ಧವನ್ನು ಈಗ ಮುದ್ರಿಸಿರುವೆನು. ಉದಾರಿಗಳಾದ ವಾಚಕರ ಆಶ್ರಯ ದೊರೆತರೆ ಉತ್ತರಾರ್ಧವನ್ನು ಕ್ಷಿಪ್ರದಲ್ಲಿಯೇ ಮುದ್ರಿಸುವೆನು.

ಕಂದ || ವರಗುರುಚರಿತೆಯನಿದನಾಂ |
ಪರಮೇಶನ ಕರುಣದಿಂದ ಬರೆದಿಹೆನೊಲವಿಂ ||
ಪರಿಪರಿದೋಷಗಳಿರ್ದೊಡೆ |
ಪರಮಾದರದಿಂದತಿದ್ದುತೋದಲಿಸುಜನರ್ || ೧ ||

ಪರಿಪರಿಧರ್ಮವನೀತಿಯ |
ನೊರೆದಿರುತಿಹಚರಿತೆಯಿದನುರಸಿಕರುಮುದದಿಂ ||
ಮರೆಯದೆಪಠಿಸುತನಿರುತಂ |
ಪರಮಾರ್ಥವಪೊಂದಿಸುಖಿಸಲನಿಶಂಧರೆಯೊಳ್ || ೨ ||

ವರಲಕ್ಷ್ಮೀನಾರಾಯಣ |
ಕರುಣದೊಳಾನಿದನುಬರದುಕೊಂಡಿಹೆನೊಲವಿಂ ||
ವರರಸಿಕರ್ಮನವೊಪ್ಪುತೆ |
ಬರೆದಿರುವೀಕೃತಿಯನೋದಿಮುಚ್ಚಲಿಭುವಿಯೊಳ್ || ೩ ||

ಭಾಷಾಂತರ ಕರ್ತ,
ತೀರ್ಥಹಳ್ಳಿ ಕೆ. ಲಕ್ಷ್ಮೀನಾರಾಯಣಭಟ್ಟ,
ಮಿಡಲ್ ಸ್ಕೂಲ್ಮಾಸ್ಟರ್,
ಹೊನ್ನಾಳಿ, ಶಿವಮೊಗ್ಗಾ ಡಿಸ್ಟ್ರಿಕ್ಟ್.

ರಕ್ತಾಕ್ಷಿ ಸಂವತ್ಸರ
ಜ್ಯೇಷ್ಠಮಾಸ,
ತಾ|| 15-6-1924.

# ಗುರುಚರಿತ್ರೆಯ ಪೂರ್ವಾರ್ಧದ

## ವಿಷಯಾನುಕ್ರಮಣಿಕೆ.



ಶ್ರೀ ಗಣೇಶಾಯನಮಃ ॥ ಶ್ರೀ ಸರಸ್ವತ್ಯೈನಮಃ ॥ ಶ್ರೀ ಗುರುಭ್ಯೋನಮಃ ॥
ಶ್ರೀ ಕುಲದೇವತಾಯೈನಮಃ ॥ ಶ್ರೀ ಪಾದವಲ್ಲಭಾಯನಮಃ ॥
ಶ್ರೀ ನೃಸಿಂಹ ಸರಸ್ವತ್ಯೈನಮಃ ॥

## ಶ್ರೀ ಗು ರು ಕ ಥಾ ಕ ಲ್ಪ ತ ರು

ಎಂಬ

# ಗು ರು ಚ ರಿ ತ್ರೆ



## ೧ ನೆಯ ಅಧ್ಯಾಯ.

ವಿಘ್ನಹರನೇ, ಗಜಾನನೇ, ಗಿರಿಜಾಕುವರನೇ, ಲಂಬೋದರನೇ ಏಕದಂತನೇ, ಶೂರ್ಪಕರ್ಣನೇ, ನಿನ್ನನ್ನು ವಿಘ್ನಹರನೆನ್ನುವರಲ್ಲವೇ ? ನಿನ್ನ ಮುಖವು ಕಾಂಚನದಂತೆ ಪ್ರಕಾಶವುಳ್ಳದ್ದಾಗಿದೆ. ವಿಘ್ನವೆಂಬ ಕಾನನವನ್ನು ಛೇದಿಸುವುದಕ್ಕಾಗಿ ಪರಶುವನ್ನು ಧರಿಸಿದ್ದೀಯೆ. ನಾಗ ಬಂಧದ ಕಟಭಾಗವುಳ್ಳವನಾಗಿಯೂ, ಉರಗಯಜ್ಞೋಪವೀತ ಧರಿಸಿದವ ನಾಗಿಯೂ,ಚತುರ್ಭುಜಗಳುಳ್ಳವನಾಗಿಯೂ ಇರುವವನೇ,ವಿನಾಯಕನೇ, ನಿರ್ವಿಘ್ನದಿಂದ ರಕ್ಷಿಸುವವನೇ, ನಿನ್ನನ್ನು ಚಿಂತಿಸುವವರಿಗೆ ವಿಘ್ನವು ಬಾಧಿ ಸದು. ಸಕಲೇಷ್ಟದಾತನೇ ! ಕಾರ್ಯಾರಂಭದಲ್ಲಿ ನಿನ್ನನ್ನು ವಂದಿಸಬೇಕು. ಲಂಬೋದರನೇ ! ಚತುರ್ದಶ ವಿದ್ಯೆಗಳಿಗೆ ಅಧಿಪತಿಯೇ, ಬ್ರಹ್ಮಾದಿಗಳೂ ನಿನ್ನನ್ನು ಸ್ತುತಿಸಿದ್ದಾರೆ ಶಂಕರನೂ ತ್ರಿಪುರ ಸಂಹಾರ ಕಾಲದಲ್ಲಿ ನಿನ್ನನ್ನು ಸ್ತುತಿಸಿದ್ದಾನೆ. ತ್ರಿಮೂರ್ತಿಗಳೂ ಕಾರ್ಯಾರಂಭದಲ್ಲಿ ನಿನ್ನನ್ನು ವಂದಿಸಿ ನಿನ್ನ ದಯೆಯಿಂದ ಇಷ್ಟಾರ್ಥಗಳನ್ನು ಪಡೆದರು. ಕರುಣಾ

ಕರನೇ, ಗಣನಾಥನೇ, ಸುರರ ವಿಘ್ನಗಳನ್ನು ಹರಿಸುವವನೇ, ಅಭಯ ದಾತನೇ, ನನಗೆ ಬುದ್ಧಿಪ್ರಕಾಶವಂ ಕೊಡು. ಗಣಪತಿಯೇ, ವಿಘ್ನಾಂತಕನೇ, ನಿನ್ನನ್ನು ವಂದಿಸಿದವರ ಕಾರ್ಯವು ಸಿದ್ಧಿಯಾಗುವುದು, ಕಾರ್ಯಾಧಾರನೇ, ನನ್ನ ಬುದ್ಧಿಯನ್ನು ಪ್ರಕಾಶಿಸು ನನ್ನ ಮನೋಭೀಷ್ಟವನ್ನು ಪೂರ್ಣಮಾಡು. ನನಗೆ ವಿದ್ಯೆಯನ್ನು ಕೊಡು ನಿನ್ನನ್ನು ವಂದಿಸುವೆನು ಶರಣಾಗತ ವರದಾಯಕನೇ, ಮತಿಹೀನನಾದ ನಾನು ನಿನ್ನ ಚರಣಗಳಿಗೆ ವಂದಿಸುವೆನು. ನನ್ನ ಅಂತಃಕರಣದಲ್ಲಿದ್ದು ಪೂರ್ಣದೃಷ್ಟಿಯಿಂದ ಈ ಗುರುಚರಿತ್ರೆಯನ್ನು ಪೂರ್ಣಮಾಡು.





ಹಂಸವಾಹಿನಿಯಾದ ವಾಗೀಶ್ವರಿಯೇ ! ನಿನ್ನ ಪಾದಂಗಳಿಗೆ ವಂದಿಸುವೆನು ಪ್ರಸನ್ನಳಾಗು. ವೇದಶಾಸ್ತ್ರಗಳಿಗೆ ಒಡೆಯಳಾದ ಶಾರದೆಯೇ, ನಿನ್ನನ್ನು ವಂದಿಸುವವರಿಗೆ ಜ್ಞಾನವನ್ನು ಕೊಡುತ್ತೀಯೆ. ನನ್ನ ವಿನಂತಿಯನ್ನು ಕೇಳು—ಈ ಗುರುಚರಿತ್ರೆಯ ರಚನೆಯಲ್ಲಿ ಮತಿಪ್ರಕಾಶವನ್ನು ಮಾಡು. ಜಯಜಗನ್ಮಾತೆ, ವಾಗ್ದೇವಿಯೇ, ನಿನ್ನ ವಾಕ್ಯದಿಂದಲೇ ವೇದಶಾಸ್ತ್ರ ಪುರಾಣಗಳು ಉಂಟಾದುವು ಸೂತ್ರಧಾರನು ಗೊಂಬೆಯನ್ನಾಡಿಸುವಂತೆ ನನ್ನ ಜಿಹ್ವೆಯಲ್ಲಿ ನೆಲಸಿ ಬಾಲನಾದ ನನ್ನನ್ನು ಪ್ರೇರಿಸು, ಪ್ರಸನ್ನಳಾಗು.

ಸೃಷ್ಟಿಕರ್ತನಾದ ಚತುರ್ಮುಖನೇ ! ವೇದಗಳು ನಿನ್ನ ವದನದಿಂದ ಉದಿಸಿದುವು. ನಿನ್ನ ಪಾದಗಳಿಗೆ ವಂದಿಸುವೆನು

ಹೃಷೀಕೇಶನೇ, ವಿಶ್ವನಾಯಕನೇ, ಲಕ್ಷ್ಮೀದೇವಿಯಿಂದ ಕೂಡಿ ಕ್ಷೀರಸಮುದ್ರದಲ್ಲಿ ಸದಾ ವಾಸಿಸುವವನೇ, ಚತುರ್ಬಾಹುವೇ ಶಂಖ ಚಕ್ರ ಗದಾ ಪದ್ಮಧಾರಿಯೇ, ಮುರಾರಿ ಪದ್ಮನಾಭನೇ, ಪೀತಾಂಬರ

ಧಾರಿಯೇ, ವೈಜಯಂತೀ ಮಾಲೆಯನ್ನು ಧರಿಸಿದವನೇ, ಶರಣಾಗತವರ ದಾಯಕನೇ, ಸಿದ್ಧ ಸಾಧ್ಯ ಯಕ್ಷ ಕಿನ್ನರ ಋಷೀಶ್ವರರಿಂದ ವಂದಿಸಲ್ಪಡುವ ವನೇ, ನಿನಗೆ ನಮಸ್ಕಾರವು

ಪರಾಶರ, ವ್ಯಾಸ, ವಾಲ್ಮೀಕಿಗಳೇ ಮುಂತಾದವರಿಗೆ ನಮಸ್ಕಾರವು. ದಾಸನಾದ ನನಗೆ ಜ್ಞಾನವನ್ನು ಪಾಲಿಸಿರಿ ನಾನು ಗ್ರಂಥರೀತಿಯನ್ನೂ ಶಾಸ್ತ್ರವಿಚಾರವನ್ನೂ ಭಾಷಾಜ್ಞಾನವನ್ನೂ ಅರಿಯೆನು ದಯೆಯಿಂದ ನನ್ನ ವಚನದಲ್ಲಿ ಸಹಾಯಮಾಡಿರಿ ಶಬ್ದಮಾಧುರ್ಯವನ್ನು ಕೊಟ್ಟು ನನ್ನನ್ನು ರಕ್ಷಿಸಿರಿ, ಎಂದು ಗ್ರಂಥಕರ್ತೃವು ಪ್ರಾರ್ಥಿಸಿ ತನ್ನ ವಂಶದ ಚರಿತ್ರೆ ಯನ್ನು ಹೇಳುವನು, ಅದೆಂತೆಂದರೆ —

ಆಪಸ್ತಂಭಶಾಖೆಯ ಕೌಂಡಿನ್ಯಗೋತ್ರದ ಸಾಖರೆಸಾಯಂದೇವನೆಂಬವನು ಪ್ರಸಿದ್ಧನಾಗಿದ್ದನು ಈತನ ಪುತ್ರನು ನಾಗನಾಥನೆಂಬವನು. ಇವನ ಸುತನಾದ ಸದ್ಗುರು ಚರಣಾರಾಧಕನಾದ ಗಂಗಾಧರನೆಂಬುವನು ನನ್ನ ಜನಕನು ಆಶ್ವಲಾಯನಶಾಖೆಯ ಕಾಶ್ಯಪಗೋತ್ರದ ಚೌಡೇಶ್ವರನೆಂಬವನು ಇದ್ದನು ಈತನ ಮಗಳಾದ ಪುಣ್ಯವಂತೆಯಾದ ಚಂಪಾ ಎಂಬುವಳು ನನ್ನ ಜನನಿಯು ಈ ಜನನೀ ಜನಕರಂ ವಂದಿಸಿ, ಶ್ರೀ ಗುರುವರ್ಯರನ್ನು ವಂದಿಸಿ, ಈ ಗ್ರಂಥಕರ್ತನಾದ ಸರಸ್ವತೀ ಗಂಗಾಧರನು ಸಾಧುವರ್ಯರನ್ನು ವಂದಿಸಿ, ಶ್ರೋತೃಗಳಂ ಕುರಿತು ಕ್ಷಮಿಸಿರೆಂದು ವಿಜ್ಞಾಪಿಸುವನು

ವೇದರತನಾದ ಯೋಗೀಶ್ವರನು ಶ್ರೀ ಗುರುವನ್ನು ಧ್ಯಾನಿಸುವನು. ಇಂಥಾ ಯತಿಗಳಿಗೆ ನಮಸ್ಕಾರವು ಅಲ್ಪಮತಿಯಾದ ನಾನು ಹೇಳುವ ಮಾತನ್ನು ಅಂಗೀಕರಿಸಿರಿ. ಶ್ರೀ ಗುರುವರ್ಯರು ನಿರೂಪಿಸಿದಂತೆ ನಾನು ಇದನ್ನು ಹೇಳುವೆನು ನಮ್ಮ ವಂಶಸ್ಥರಿಗೆ ಸದಾ ಶ್ರೀ ಗುರುಗಳು ಪ್ರಸನ್ನರಾಗಿರುವರು. ಈ ಚರಿತ್ರೆಯನ್ನು ವಿಸ್ತಾರವಾಗಿ ಹೇಳಬೇಕೆಂದಾಜ್ಞೆಯಾಗಿರುವುದು. ಈ ಚರಿತ್ರೆಯನ್ನು ಕೇಳುವುದರಿಂದ ಪುರುಷಾರ್ಥಗಳು ಸಿದ್ಧಿಸುವುವು. ಗುರುವಾಕ್ಯವೇ ನನಗೆ ಕಾಮಧೇನುವು. ಇದಕ್ಕೆ ಸಂಶಯವಿಲ್ಲ. ತ್ರಿಮೂರ್ತಿಗಳೇ ನೃಸಿಂಹ ಸರಸ್ವತಿಗಳಾಗಿ ಅವತರಿಸಿದ್ದಾರೆ. ಈ ಚರಿತ್ರೆಯನ್ನು ವರ್ಣಿಸಲು ನಾನು ಶಕ್ತನಲ್ಲ. ಈ ಚರಿತ್ರೆ

ಯನ್ನು ಓದುವವರಿಗೆ ಪುತ್ರ ಪೌತ್ರರೂ ಅಖಂಡೈಶ್ವರ್ಯವೂ ಉಂಟಾಗುವುವು. ಇವರಿಗೆ ರೋಗಭಯವಿಲ್ಲ ಏಳು ದಿನಗಳಲ್ಲಿ ಈ ಗುರುಚರಿತ್ರೆಯನ್ನು ಓದುವುದರಿಂದ ಬಂಧನವು ಪರಿಹಾರವಾಗುವುದು ಇದು ನಿಸ್ಸಂದೇಹವು. ಈ ಪುಣ್ಯಕಥೆಯನ್ನು ವಿಸ್ತಾರವಾಗಿ ಹೇಳುವೆನು ಇದನ್ನು ಕೇಳಲು ಆಯಾಸವಿಲ್ಲದೆ ಸದ್ಯಃ ಫಲವುಂಟಾಗುವುದು. ಕಷ್ಟ ಪರಿಹಾರವಾಗುವುದು.

ಶ್ರೋತೃಗಳಿರಾ ! ಏಕಚಿತ್ತದಿಂದ ಕೇಳಿರಿ ಗುರುಸ್ಮರಣೆಯು ಸರ್ವರಿಗೂ ಶ್ರೇಯಸ್ಕರವು ಊಟವಾದಬಳಿಕ ತೃಪ್ತಿಯಾಗಿ ತೇಗುವಂತೆ ಅನುಭವಸಿದ್ಧವಾದ ಗುರುಮಹಿಮೆಯನ್ನ ಈ ಚರಿತ್ರೆಯನ್ನು ಹೇಳುವೆನು ಸಾಮಾನ್ಯಪುರುಷನೆಂದು ನನ್ನಮಾತಿನಲ್ಲಿ ಉದಾಸನ ಮಾಡದೆ ನೊಣವು ಮುಖದಿಂದ ಮಧುವಂ ಗ್ರಹಿಸುವಂತೆಯೂ, ಮುತ್ತಿನ ಚಿಪ್ಪಿನಲ್ಲಿದ್ದ ಮುತ್ತುಗಳನ್ನು ಗ್ರಹಿಸುವಂತೆಯೂ, ಎಳೆಲೆ ಬಾಳೆಯ ಗಿಡಗಳಲ್ಲಿ ಪಚ್ಚ ಕರ್ಪೂರವನ್ನು ಹೊಂದುವಂತೆಯೂ ಈ ಚರಿತ್ರೆಯನ್ನು ಗ್ರಹಿಸಿರಿ ಕರಿಯಕಬ್ಬು ಡೊಂಕಾಗಿದ್ದರೂ ಅದರ ರಸವು ಸೀಯಾಗಿರದೇ ? ಇದರಂತೆಯೇ ಈ ಗ್ರಂಥರಸವನ್ನು ಗ್ರಹಿಸಿರಿ. ಗುರುಸ್ಮರಣೆಯಿಂದ ನಾನು ಹೇಳುವುದನ್ನು ಏಕಚಿತ್ತದಿಂದ ಕೇಳಿರಿ. ಇದನ್ನು ಕೇಳುವುದರಿಂದ ಬ್ರಹ್ಮಜ್ಞಾನ ಉಂಟಾಗುವುದು

ಶ್ರೀ ನೃಸಿಂಹಸರಸ್ವತಿಗಳು ಗಾಣಗಾಪುರದಲ್ಲಿದ್ದರು. ಅಲ್ಲಿ ಇವರ ಮಹಿಮೆಯು ಅದ್ಭುತವಾಗಿದೆ ಅನೇಕರು ಅಲ್ಲಿಗೆ ಯಾತ್ರೆಗೆ ಹೋಗುವರು. ಅಲ್ಲಿ ಗುರುಗಳನ್ನು ಆರಾಧಿಸಿದರೆ ಇಷ್ಟಾರ್ಥಗಳು ಸಿದ್ಧಿಸುವುವು.

ನಾಮಧಾರಕನೆಂಬ ಶಿಷ್ಯೋತ್ತಮನು ಶ್ರೀ ಗುರುಗಳನ್ನು ಧ್ಯಾನಿಸುತ್ತಾ ಗಾಣಗಾಪುರಕ್ಕೆ ಹೊರಟನು ಈತನು ಶ್ರೀ ಗುರುಗಳನ್ನು ಧ್ಯಾನಿಸುತ್ತಾ ಹೋಗುವನು. ಗುರುವರ್ಯರೇ, ದಯಾನಿಧಿಗಳೇ ನನ್ನ ಮನಸ್ಸನ್ನು ಸ್ಥಿರಗೊಳಿಸಿರಿ ಗುರುವೆ ! ನೀನೇ ನನಗೆ ತಂದೆಯೂ ತಾಯಿಯೂ ಸಹೋದರನೂ ಕುಲದೇವತೆಯೂ ಆಗಿದ್ದೀರಿ. ನನ್ನ ಕಷ್ಟವನ್ನು ಪರಿಹರಿಸಿರಿ. ಜಗನ್ನಾಥನೇ, ವಿಶ್ವರಕ್ಷಕನೇ, ತ್ರಿಮೂರ್ತಿಸ್ವರೂಪನೇ, ದಾತಾರನೇ, ಸರ್ವಜ್ಞನೇ ರಕ್ಷಿಸು. ಕೊಟ್ಟ ಹೊರತು

ಕೊಡವುದಿಲ್ಲವೆನ್ನುವಿಯಾ ? ನಿನ್ನ ಮನಸ್ಸಿನಲ್ಲಿ ಏನು ಇದೆ ? ಹೇಳು ಬಲಿಚಕ್ರವರ್ತಿಯು ಭೂಮಿಯನ್ನೆಲ್ಲವನ್ನೂ ಕೊಡಲು ಅವನಿಗೆ ನೀನು ಪಾತಾಳ ರಾಜ್ಯವನ್ನು ಕೊಟ್ಟೆ ಧೃವನು ನಿನಗೇನನ್ನು ಕೊಟ್ಟನು ? ನೀನು ಅವನಿಗೆ ಸದ್ಗತಿಯನ್ನಿತ್ತೆಯಲ್ಲವೇ ? ಪರಶುರಾಮಾವತಾರದಲ್ಲಿ ಭೂಮಿಯನ್ನೆಲ್ಲಾ ಕಶ್ಯಪರಿಗೆ ಕೊಡಲಿಲ್ಲವೇ ? ಅಲ್ಪನಾದ ನಾನು ನಿನಗೇನು ಕೊಡಲಿ ? ಶ್ರೀ ನರಹರಿಯೇ ! ಲಕ್ಷ್ಮಿಯು ಸದಾ ನಿನ್ನ ಮನೆಯಲ್ಲಿ ವಾಸವಾಗಿರುವಳು ಹೃಷೀಕೇಶನೇ, ನನ್ನನ್ನು ಕೇಳುವಿಯೇಕೆ ? ಬಾಲಕನು ಸ್ತನ್ಯದ ಆಶೆಗಾಗಿ ತಾಯಿಯ ತೊಡೆಯನ್ನು ಏರುವನು. ಆಗ ತಾಯಿಯು ಏನನ್ನು ಕೇಳುವಳು. ಗುರುನಾಥನೆ ! ನಾನು ಏನನ್ನು ಕೊಡಲಿ ? ನಿನಗೆ ದಾತನ್ಯಾರು ? ನೀನು ದಯಾನಿಧಿಯಲ್ಲವೆ ? ಹದಿನಾಲ್ಕು ಲೋಕಗಳಿಗೂ ನೀನೇ ದಾತನು ನಿನ್ನನ್ನು ನಾನು ಸೇವಿಸಲಿಲ್ಲ. ನನ್ನಿಂದ ಸೇವೆಯನ್ನು ತೆಗೆದುಕೊಂಡು ನನ್ನ ಇಷ್ಟವನ್ನು ಕೊಡುವುದು ದಾತೃತ್ವಕ್ಕೆ ಭೂಷಣವಲ್ಲ ಮೇಘವು ಭೂಮಿಯಲ್ಲಿರುವ ಭಾವಿಗಳಿಗೆ ತಾನು ಸೇವಿಸಿಕೊಳ್ಳದೆ ಬಹು ಜಲವನ್ನು ಕೊಡುವುದಿಲ್ಲವೇ" ನೀನು ನನ್ನ ಸೇವೆಯನ್ನಪೇಕ್ಷಿಸುವಿಯಾದರೆ ನಿನ್ನನ್ನು ದಯಾನಿಧಿಯೆಂದು ಹೇಗೆ ಹೇಳಬೇಕು ? ನಮ್ಮ ಕುಲದಲ್ಲಿ ಎಲ್ಲರೂ ನಿನ್ನ ದಾಸರು ತಂದೆಯು ತನ್ನ ಸುತನನ್ನು ಮುಂದೆ ತನ್ನ ಸೇವೆಗಾಗಿ ಸಲಹುವಂತೆ ನೀನು ನನ್ನನ್ನು ಪಾಲಿಸು. ನಿನ್ನನ್ನು ಪೂರ್ವಜನ್ಮದಲ್ಲಿ ಸೇವಿಸಿ ಸಂಪಾದಿಸಿದ್ದ ಪೂರ್ವ ಸುಕೃತವೆಂಬ ಧನಋಣವನ್ನು ಈಗ ಇಷ್ಟಾರ್ಥರೂಪವಾಗಿ ಕೊಡು ನಿನಗೆ ನನ್ನಲ್ಲಿ ಏಕೆ ಕರುಣವಿಲ್ಲ ? ನರಹರಿಯೇ ! ನನ್ನ ಪೂರ್ವ ಸುಕೃತಫಲವನ್ನು ನಾನು ಹೊಂದಬೇಡವೇ ? ಆದುದರಿಂದ ನನಗೆ ನಿನ್ನ ದರ್ಶನವನ್ನು ಕೊಡು ಗುರುನಾಥನೇ, ಕಠಿಣಚಿತ್ತನಾಗಿ ತೋರುವಿ. ಕಿಂಕರನಲ್ಲಿದು ಚೆನ್ನಾಗಿರದು. ನಾನು ಅಪರಾಧಿಯಾದರೂ ಸಿಟ್ಟಾಗದಿರು. ಬಾಲಕನು ಅಜ್ಞಾನದಿಂದ ತನ್ನನ್ನು ಹೊಡೆದರೂ ಆಕೆಯು ಪ್ರೀತಿಯಿಂದ ಮಗನನ್ನು ತಬ್ಬಿಕೊಂಡು ಆನಂದಿಸುವುದಿಲ್ಲವೇ ? ಗುರುವೇ, ನನ್ನ ತಪ್ಪೇನು ? ಬಾಲಕನು ತನ್ನ ತಾಯಿಯು ಕೋಪಿಸಿದರೆ ತನ್ನ ತಂದೆಯೊಡನೆ ಹೋಗಿ ಹೇಳಿಕೊಳ್ಳುವನು. ಆಗ ತಂದೆಯು ದಯೆಯನ್ನು ತೋರಿಸುವನು. ನೀನೇ ನನಗೆ ತಂದೆಯೂ ತಾಯಿಯೂ ಆಗಿದ್ದೀಯೆ. ಕೋಪಿಸದಿರು,

ಮನ್ನಿಸು ದಾಸನಾನ ನನ್ನನ್ನು ಸಲಹು ಅನಾಥರಕ್ಷಕನೇ ! ಪುರಾಣಗಳು ನಿನ್ನನ್ನು ದಯಾಮಯನೆಂದು ಹೇಳುವುವು ನನ್ನ ಮಾತನ್ನು ಕೇಳುವು ದಿಲ್ಲವೇ ? ಗುರುರಾಜನೇ' ನನ್ನ ಕರುಣಾವಚನವು ನಿನಗೆ ಕೇಳಿಸದೆ ? ನನ್ನಲ್ಲೇಕೆ ದಯೆಬಾರದು ? ಎಂದೀ ಪರಿಯಿಂದ ನಾಮಧಾರಕನು ಸ್ತುತಿ ಸುತ್ತಾ ಗುರುವಿನ ಮಾನಸಪೂಜೆಯನ್ನು ಮಾಡುತ್ತಾ ಆನಂದಿಸುತಿದ್ದನು. ಈತನಿಗೆ ಗುರುವಿನ ಅನುಗ್ರಹವಾಯಿತು ಎಂಬಲ್ಲಿಗೆ ಗುರುಚರಿತ್ರೆಯೆಂಬ ಪರಮಕಥಾಕಲ್ಪತರುವಿನಲ್ಲಿ ಪ್ರಥಮೋಧ್ಯಾಯವು ಸಮಾಪ್ತವಾದುದು

|| ಶ್ರೀಗುರು ದತ್ತಾತ್ರೇಯಾಯನಮಃ ||

---

## ೨ನೆಯ ಅಧ್ಯಾಯ.

---

ಶ್ರೀ ಗಣೇಶಾಯನಮಃ || ನಾಮಧಾರಕನು—ತ್ರಿಮೂರ್ತಿರಾಜನೆ! ನೀನು ಕೃಷ್ಣಾ ತೀರದಲ್ಲಿ ವಾಸಿಸುತ್ತಾ ಭಕ್ತರಿಗಾನಂದವನ್ನುಂಟುಮಾಡು ತ್ತಿರುವೆಯಲ್ಲವೆ ? ಆ ಸ್ಥಳವು ಭೂಸ್ವರ್ಗ ಸದೃಶವಾಗಿದೆ ಎಂದು ನುತಿ ಸುತ್ತಾ ಬಳಲಿ ಬಂದು ಮರದ ಬುಡದಲ್ಲಿ, ಗುರುವನ್ನು ಚಿಂತಿಸುತ್ತಾ ಮಲಗಿ ನಿದ್ರಿಸಿದನು ಆತನ ಸ್ವಪ್ನದಲ್ಲಿ ಶ್ರೀ ಗುರುವು ಜಟಾಧಾರಿಯಾಗಿ ಯೂ ಭಸ್ಮಾಂಕಿತನಾಗಿಯೂ ವ್ಯಾಘ್ರಚರ್ಮಧಾರಿಯಾಗಿಯೂ ದರ್ಶನ ವಿತ್ತನು. ಶ್ರೀ ಗುರುವು ಬಂದು ಈತನ ಲಲಾಟದಲ್ಲಿ ಭಸ್ಮವಂ ಲೇಪಿಸಿ ಸಂತೈಸಿ ಅಭಯಹಸ್ತವಂ ತೋರಿಸಿದಂತೆ ಸ್ವಪ್ನವಂ ಕಂಡು, ನಾಮಧಾರ ಕನು ಎಚ್ಚತ್ತು ನಾಲ್ಕು ದಿಕ್ಕುಗಳನ್ನೂ ನೋಡಿ ಆಶ್ಚರ್ಯಪಟ್ಟು ಗುರು ಮೂರ್ತಿಯನ್ನು ಧ್ಯಾನಿಸುತ್ತಾ ಹೋಗುತ್ತಿದ್ದನು ಆಗ ತನ್ನೆದುರಿನಲ್ಲಿ ಸಿದ್ಧರೆಂಬ ಮುನಿಗಳು ಬರಲು, ಅವರನ್ನು ಕಂಡು ಸಾಷ್ಟಾಂಗ ನಮಸ್ಕಾರ ಮಾಡಿ ಅವರನ್ನು ಕುರಿತು ಸ್ವಾಮಿ ನೀವು ನನಗೆ ತಾಯಿ ತಂದೆಗಳಾಗಿ ದ್ದೀರಿ. ಜಯಯೋಗೀಶರೇ! ಅಜ್ಞಾನವೆಂಬ ಕತ್ತಲೆಯನ್ನು ಹೋಗಲಾಡಿಸು ವವರೇ, ಕರುಣಾನಿಧಿಗಳೇ, ತಮ್ಮ ದರ್ಶನದಿಂದ ನನ್ನ ಪಾಪವೆಲ್ಲವೂ ಹೋಯಿತು. ಭಕ್ತನಲ್ಲಿ ಕೃಪೆಯುಳ್ಳವರಾಗಿ. ಎಲ್ಲಿಂದ ದಯಮಾಡಿಸಿದಿರಿ ?

ಎಂದು ಕೇಳಿದನು. ಆಗ ಸಿದ್ಧರು ಆತನನ್ನು ಕುರಿತು ನಾಮಧಾರಕನೇ, ನಮ್ಮ ಗುರುವರ್ಯರಾದ ಶ್ರೀ ನೃಸಿಂಹಸರಸ್ವತಿಗಳ ಆವಾಸ ಕ್ಷೇತ್ರವಾದ ಭೂಸ್ವರ್ಗ ಸಮವಾದ ಕ್ಷೇತ್ರಗಳಲ್ಲಿ ತೀರ್ಥಯಾತ್ರೆ ಮಾಡುತ್ತಾ ಬಂದೆನು. ಆ ಕ್ಷೇತ್ರಗಳಲ್ಲಿ ಅಮರುಜಾ ಸಂಗಮದಲ್ಲಿರುವ ಗಾಣಗಾಪುರವೆಂಬುದು ಆ ಗುರುವರ್ಯರ ವಾಸಸ್ಥಾನವು ಭಕ್ತರನ್ನು ಭವಸಾಗರದಿಂದ ಸಲಹು ವುದಕ್ಕಾಗಿ ತ್ರಿಮೂರ್ತಿಗಳ ಅವತಾರರಾದ ನೃಸಿಂಹ ಸರಸ್ವತಿಗಳವರು ದಯೆಯಿಂದ ಭಕ್ತರಿಗೆ ವರವನ್ನು ಕೊಡುತ್ತಾ ಸುಖ ಸಂಪದಗಳನ್ನು ಕೊಡುತ್ತಿರುವರು ಇವರ ಭಕ್ತರಿಗೆ ಬಡತನವೆಲ್ಲಿರುವುದು ? ಅಖಂಡೈ ಶ್ವರ್ಯವು ಪೂರ್ಣವಾಗಿ ಧನಧಾನ್ಯಾದಿಗಳಿಂದ ತೃಪ್ತರಾಗಿರುವರು, ಎಂದು ಹೇಳಿದರು. ಆಗ ನಾಮಧಾರಕನು ಸ್ವಾಮಿ ! ನನ್ನ ವಿನಂತಿಯನ್ನು ಕೇಳಿರಿ. ನಾನು ಶ್ರೀಗುರುವನ್ನು ಧ್ಯಾನಿಸುತ್ತಿರುವೆನು. ನಮ್ಮ ವಂಶ ದಲ್ಲಿ ಸರ್ವರೂ ಸದ್ಗುರುಗಳ ಭಕ್ತರಾಗಿದ್ದೇವೆ , ಆದರೆ ನನಗೆ ಸದಾ ಶ್ರೀ ಗುರುಸಂದರ್ಶನವು ಆಗುವುದಿಲ್ಲವೇಕೆ ? ಈ ಸಂಶಯವನ್ನು ಪರಿಹರಿಸಿರಿ, ಎಂದು ವಿಜ್ಞಾಪಿಸಿದನು ಆಗ ಸಿದ್ಧರು ಅವನನ್ನು ಕುರಿತು—ನಾಮಧಾರ ಕನೇ ! ಯಾರಿಗೆ ಗುರುಕೃಪೆಯುಂಟಾಗುವುದೋ ಅವರಿಗೆ ಬಡತನವಿಲ್ಲ. ಅವರು ದೇವತೆಗಳನ್ನು ಗೆಲ್ಲುವರು ಇಂಥಾ ಗುರುವನ್ನು ಪೂಜಿಸಿದರೂ ನಿನಗೀಕಷ್ಟವೇಕೆ ಬಂದಿತು ? ನಿನಗೆ ಮನಸ್ಸು ಸ್ಥಿರವಾಗಿಲ್ಲವೆಂದು ತೋರುವುದು ಶ್ರೀಗುರುವನ್ನು ತ್ರಿಮೂರ್ತಿ ಸ್ವರೂಪರೆಂದು ತಿಳಿದು ಏಕಭಾವದಿಂದ ಭಜಿಸಬೇಕು ಗುರುಗಳು ಸಕಲ ವರಗಳನ್ನೂ ಕೊಡು ವರು ಶ್ರೀಹರಿಯು ಒಂದುವೇಳೆ ಕೋಪಿಸಿದರೂ ಶ್ರೀಗುರುಗಳು ತಮ್ಮ ಭಕ್ತರನ್ನು ಸಲಹುವರು ಗುರುವು ಕೋಪಿಸಲು ಹರಿಯಾಗಲೀ ಹರ ನಾಗಲೀ ರಕ್ಷಿಸಲಾರರು ಎಂದರು.

ಆಗ ನಾಮಧಾರಕನು ಸಿದ್ಧರನ್ನು ವಂದಿಸಿ ಕೈಗಳನ್ನು ಜೋಡಿಸಿ ಸ್ವಾಮಿ ! ಶ್ರೀಗುರುವರ್ಯರು ತ್ರಿಮೂರ್ತಿಗಳ ಸ್ವರೂಪರೆಂದು ಹೇಳಿದಿ ರಷ್ಟೆ. ಅದು ಹೇಗೆ ? ಯಾವ ಶಾಸ್ತ್ರಪುರಾಣಗಳಿಂದ ಈ ಸಂದೇಹವು ನಿವೃತ್ತಿಯಾದೀತು, ಎಂದು ಪ್ರಶ್ನೆಗೈದನು ಆಗ ಅವರು—ಶಿಷ್ಯನೇ, ವೇದವಾಕ್ಯ ಸಾಕ್ಷಿಯಾಗಿ ಹೇಳುವುದನ್ನು ಏಕಚಿತ್ತದಿಂದ ಕೇಳು.

ಬ್ರಹ್ಮನ ಮುಖಗಳಿಂದ ವೇದಗಳು ಹುಟ್ಟಿದವು ಇವುಗಳಿಂದಲೇ ಪುರಾಣ ಗಳುಂಟಾದುವು. ಇವುಗಳಲ್ಲಿ ಬ್ರಹ್ಮವೈವರ್ತ ಪುರಾಣವೆನ್ನುವುದು ಪ್ರಸಿದ್ಧವು. ದ್ವಾಪರಯುಗದಲ್ಲಿ ಶ್ರೀಹರಿಯೇ ವ್ಯಾಸನಾಗಿ ಹುಟ್ಟಿದನು. ಈ ವ್ಯಾಸರೇ ಬ್ರಹ್ಮವೈವರ್ತ ಪುರಾಣವನ್ನು ಈ ಭೂಮಿಯಲ್ಲಿ ಪ್ರಸಿದ್ಧಿಪಡಿಸಿದರು. ಈ ವ್ಯಾಸರು ಇದನ್ನು ಅನೇಕ ಋಷಿಗಳಿಗೆ ಹೇಳಿದರು ಅದನ್ನು ನಾನು ನಿನಗೆ ವಿಸ್ತಾರವಾಗಿ ಹೇಳುವೆನು, ಏಕಚಿತ್ತದಿಂದ ಕೇಳು.

ಕಲಿಯು ಬ್ರಹ್ಮದೇವನನ್ನು ಕುರಿತು ಗುರುಮಹಿಮೆಯು ಯಾವ ರೀತಿಯಾಗಿರುವುದು ? ಎಂದು ಕೇಳಿತು ಆಗ ಬ್ರಹ್ಮನು ಗುರುಮಹಿಮೆಯನ್ನು ಕಲಿಗೆ ಹೇಳುವನಾದನು ಎಂದರು ಆಗ ನಾಮಧಾರಕನು ವಂದಿಸಿ, ಸ್ವಾಮಿ, ನೀವು ಭವಸಾಗರ ತಾರಕರಾಗಿದ್ದೀರಿ. ಬ್ರಹ್ಮನು ಕಲಿಗೆ ಏತಕ್ಕೋಸ್ಕರ ಗುರುಮಹಿಮೆಯನ್ನುಹೇಳಿದನು ಎಂಬುದನ್ನು ವಿಶದವಾಗಿ ನಿರೂಪಿಸಿರಿ ಎಂದು ಬೇಡಿಕೊಂಡನು ಆಗ ಸಿದ್ಧರು ಶಿಷ್ಯನೇ ಕೇಳು— ಮಹಾ ಪ್ರಳಯದಲ್ಲಿ ಶ್ರೀಮನ್ನಾರಾಯಣನು ವಟಪತ್ರಶಾಯಿಯಾಗಿರುವಾಗ ಸೃಷ್ಟಿಯನ್ನು ಮಾಡಲು ಇಚ್ಛೆಯುಂಟಾಯಿತು. ಆಗ ನಾಭೀ ಕಮಲದಿಂದ ಬ್ರಹ್ಮನು ಹುಟ್ಟಿದನು ನಾಲ್ಕು ದಿಕ್ಕುಗಳನ್ನೂ ನೋಡಲು ನಾಲ್ಕು ಮುಖಗಳು ಉಂಟಾದುವು. ಆಗ ಬ್ರಹ್ಮನು ತಾನೇ ಸಕಲರಲ್ಲಿ ಶಕ್ತನೆಂದೂ ತನಗಿಂತಲೂ ಬಲಶಾಲಿಗಳು ಯಾರೂ ಇಲ್ಲವೆಂದೂ ಹೇಳುತ್ತಿದ್ದನು. ಆಗ ನಾರಾಯಣನು ನಕ್ಕು ಎಲೈ ಬ್ರಹ್ಮನೇ, ನಾನು ಮಹಾವಿಷ್ಣುವು ನನ್ನನ್ನು ಭಜಿಸು ಎಂದನುಜ್ಞೆಯಿತ್ತನು ಆಗ ಬ್ರಹ್ಮನು ಶ್ರೀ ವಿಷ್ಣುವನ್ನು ವಂದಿಸಿ ಅನೇಕಕಾಲ ಸ್ತುತಿಸುತ್ತಿದ್ದನು ನಾರಾಯಣನು ಸಂತೋಷಿಸಿ ಬ್ರಹ್ಮನನ್ನು ಕುರಿತು ಸಕಲ ವಸ್ತುಗಳನ್ನೂ ಸೃಷ್ಟಿಸು ಎಂದು ಆಜ್ಞಾಪಿಸಿದನು ಆಗ ಬ್ರಹ್ಮನು ವಿಷ್ಣುವಿನಿಂದ ವೇದಗಳನ್ನು ಹೊಂದಿ ಅದರಲ್ಲಿ ಹೇಳಿದಂತೆ ಸೃಷ್ಟಿಯನ್ನು ಮಾಡತೊಡಗಿದನು. ಅನೇಕ ಪ್ರಜೆಗಳನ್ನೂ ಸ್ಥಾವರ ಜಂಗಮ ಸ್ವೇದಜ ಅಂಡಜ ಉದ್ಭಿಜಗಳಾದ ವಸ್ತುಗಳನ್ನೂ ನಿರ್ಮಿಸಿದನು. ವೇದವ್ಯಾಸರು ಅನೇಕ ಪುರಾಣಗಳನ್ನು ಬರೆದರು. ಇದರಲ್ಲಿ ಬ್ರಹ್ಮವೈವರ್ತ ಪುರಾಣವು ಪ್ರಸಿದ್ಧವಾಗಿದೆ ಇದನ್ನು ಸೂತರು ಅನೇಕ ಋಷಿಗಳಿಗೆ ನಿರೂಪಿಸಿದರು. ಬ್ರಹ್ಮನು

ಚತುರ್ಯುಗಗಳನ್ನು ನಿರ್ಮಿಸಿ ಭೂಲೋಕಕ್ಕೆ ಕಳುಹಿಸಿದನು ಆಗ ಕೃತ ಯುಗವನ್ನು ಕರೆದು ನೀನು ಹೋಗಿ ಭೂಮಿಯಲ್ಲಿ ಪ್ರಕಾಶಿಸುತ್ತಿರು ಎಂದು ಅನುಜ್ಞೆಯಿತ್ತನು ಆಗ ಕೃತಯುಗವು ಬ್ರಹ್ಮನ ಆಜ್ಞೆಯಂತೆ ಬಹು ಸಂತೋಷದಿಂದ ಬಂದಿತು.

ಶ್ರೋತೃಗಳಿರಾ, ಏಕಚಿತ್ತದಿಂದ ಕೇಳಿರಿ. ಈ ಕೃತಯುಗವು ಅಸತ್ಯವಚನವುಳ್ಳದ್ದಲ್ಲ. ವೈರಾಗ್ಯ ಪೂರ್ಣವಾದ ಜ್ಞಾನವುಳ್ಳದ್ದು ಯಜ್ಞೋಪವೀತವನ್ನೂ ರುದ್ರಾಕ್ಷಮಾಲೆಯನ್ನೂ ಧರಿಸಿರುವುದು. ಬ್ರಹ್ಮನ ವಚನವನ್ನು ಕೇಳಿ ಕೃತಯುಗವು ಸ್ವಾಮಿಾ, ಭೂಮಿಗೆ ನಾನು ಹೇಗೆ ಹೋಗಲಿ? ಭೂಲೋಕದ ಜನರು ಅಸತ್ಯ ವಚನವುಳ್ಳವರು. ಅಪವಾದವುಳ್ಳವರು ಆದುದರಿಂದ ನಾನು ಅಲ್ಲಿಗೆ ಹೇಗೆ ಹೋಗಲಿ ? ಎಂದು ಬಿನ್ನಹಮಾಡಿತು ಬ್ರಹ್ಮನು ಈ ಮಾತನ್ನು ಕೇಳಿ ಕೃತಯುಗವೇ ಸತ್ವಗುಣವುಳ್ಳ ನೀನು ಕೆಲವುಕಾಲ ಭೂಮಿಯಲ್ಲಿರು. ಬೇರೆ ಯುಗವನ್ನು ನಾನು ಕಳುಹಿಸುವೆನು ಜಾಗರೂಕನಾಗಿರು, ಎಂದು ಕಳುಹಿಸಿದನು ಕೃತಯುಗದ ಅವಧಿಯು ಮುಗಿಯುತ್ತಾ ಬರಲು ಬ್ರಹ್ಮನು ತ್ರೇತಾಯುಗವನ್ನು ಕರೆದು ಆಜ್ಞಾಪಿಸಿದನು. ಈ ತ್ರೇತಾ ಯುಗದ ಲಕ್ಷಣವು ಏನೆಂದರೆ —

ಇದು ಸ್ಥೂಲತನುವುಳ್ಳದ್ದು ಯಜ್ಞವಸ್ತುಗಳನ್ನು ಕೈಯಲ್ಲಿ ಹಿಡಿದಿರುವುದು ಈ ಯುಗದಲ್ಲಿ ಸಕಲರೂ ಯಾಗಗಳನ್ನು ಮಾಡುವರು. ಜನರು ಧರ್ಮಶಾಸ್ತ್ರ ಪ್ರವರ್ತಕರಾಗಿರುವರು ವಿಪ್ರರು ಕರ್ಮಮಾರ್ಗ ನಿರತರಾಗಿರುವರು ಈ ತ್ರೇತಾಯುಗವು ಕರದಲ್ಲಿ ದರ್ಭೆಯನ್ನೂ ಸಮಿತ್ತುಗಳನ್ನೂ ಧರಿಸಿ ಬ್ರಹ್ಮಾಜ್ಞೆಯಂತೆ ಭೂಲೋಕಕ್ಕೆ ಬಂದಿತು

ಕೆಲವು ಕಾಲಾನಂತರದಲ್ಲಿ ಬ್ರಹ್ಮನು ದ್ವಾಪರಯುಗವನ್ನು ಕರೆದು ನಿರೂಪಿಸಿದನು ಈ ದ್ವಾಪರನು ಕರದಲ್ಲಿ ಖಡ್ಗ ಖಟ್ವಾಂಗ ಧನುರ್ಬಾಣಗಳನ್ನು ಧರಿಸಿ ಉಗ್ರ ಮತ್ತು ಶಾಂತಗುಣವುಳ್ಳದ್ದಾಗಿಯೂ ನಿಷ್ಠುರವೂ ದಯೆಯೂ ಪಾಪಪುಣ್ಯವೂ ಇವುಗಳನ್ನು ಸಮವಾಗಿ ತಿಳಿಯುತ್ತಾ ಕುತೂಹಲದಿಂದ ಭೂಮಿಗೆ ಬಂದಿತು ಇದರ ಕಾಲವೂ ಕಳೆದ

ಬಳಿಕ ವಿಧಾತನು ಕಲಿಯುಗವನ್ನು ಕರೆದು ಆಜ್ಞಾಪಿಸಿದನು. ಈ ಕಲಿಯು ಬ್ರಹ್ಮನೆದುರಿಗೆ ಹೇಗೆ ಹೋಯಿತೆಂದರೆ;—ವಿಚಾರ ಹೀನವಾದ ಅಂತಃಕರಣವುಳ್ಳದ್ದಾಗಿಯೂ ಪಿಶಾಚಿಯಂತೆ ಮುಖವುಳ್ಳದ್ದಾಗಿಯೂ ಕೆಳಮುಖವುಳ್ಳದ್ದಾಗಿಯೂ ನಿರ್ವೈರಾಗ್ಯದಿಂದ ಕಲಹದ್ವೇಷಗಳಿಂದ ಕೂಡಿ ಎಡಗೈಯಲ್ಲಿ ಶಿಶ್ನವಂಧರಿಸಿ, ಬಲಗೈಯಲ್ಲಿ ನಾಲಿಗೆಯನ್ನು ಹಿಡಿದು ಕುಣಿಯುತ್ತಾ ಪುಣ್ಯಪಾಪ ಮಿಶ್ರವುಳ್ಳದ್ದಾಗಿ ಹಾಸ್ಯಮಾಡುತ್ತಾ ಅಳುತ್ತಾ ವಕ್ರಮುಖದಿಂದ ಬೈಯ್ಯುತ್ತಾ ಅಜನೆದುರಿಗೆ ಬಂದಿತು. ಆಗ ವಿಧಿಯು ಇದರ ಲಕ್ಷಣವನ್ನು ನೋಡಿ ನಗುತ್ತಾ ಕಲಿಯೇ, ಲಿಂಗವನ್ನೂ ನಾಲಿಗೆಯನ್ನೂ ಏಕೆ ಹಿಡಿದಿರುವೆ, ಎಂದು ಕೇಳಿದನು. ಆಗ ಕಲಿಯು ಸ್ವಾಮಿ, ಲಿಂಗವನ್ನೂ ನಾಲಿಗೆಯನ್ನೂ ರಕ್ಷಿಸುವ ನರರನ್ನು ಹರಣ ಮಾಡಬೇಕೆಂದು ಇವುಗಳನ್ನು ಹಿಡಿದು ಕುಣಿಯುತ್ತಿದ್ದೇನೆ ನಾನು ಸಹಜವಾಗಿ ಎಲ್ಲಿಯೂ ಹೆದರುವುದಿಲ್ಲ ಎಂದಿತು ಬ್ರಹ್ಮನು, ಎಲೈ ಕಲಿಯೇ ನೀನು ಭೂಮಿಗೆ ಹೋಗಿ ನಿನ್ನ ಗುಣವನ್ನು ಪ್ರಕಾಶಿಸು ಎಂದನು ಆಗ ಕಲಿಯು, ಸ್ವಾಮಿ, ನನ್ನ ಗುಣವನ್ನು ಲಾಲಿಸಿರಿ ನಾನು ಧರ್ಮವನ್ನು ನಾಶಮಾಡುವೆನು. ನಿರಾನಂದದಿಂದ ನಿಂದೆ ಕಲಹಗಳುಳ್ಳವನಾಗಿರುವೆನು ಪರಧನಹಾರಕ, ಪರಸ್ತ್ರೀರತರೆಂಬುವರಿಬ್ಬರೂ ನನ್ನ ಸಹೋದರರು ಮತ್ಸರವೂ ಡಂಭವೂ ನನ್ನ ಜೀವದ ಗೆಳೆಯರು ಇವರು ಬಕನಂತೆ ನಟಿಸುತ್ತಾ ನನ್ನನ್ನು ಸಲಹುತ್ತಾರ ಪುಣ್ಯವಂತರೇ ನನಗೆ ಹಗೆಗಳು ಎಂದಿತು. ಆಗ ಬ್ರಹ್ಮನು, ಕಲಿಯೇ, ನಿನ್ನ ಕಾಲದಲ್ಲಿ ನರರಿಗೆ ನೂರು ವರ್ಷಗಳು ಮಾತ್ರ ಆಯುಷ್ಯವಿರುವುದು ಪೂರ್ವಯುಗಗಳಲ್ಲಿ ನರರು ಬಹುಕಾಲ ತಪಸ್ಸನ್ನು ಮಾಡುತ್ತಿದ್ದುದರಿಂದ ಅತಿಯಾದ ಆಯುಷ್ಯವುಳ್ಳವರಾಗಿದ್ದರು. ಇದರಿಂದ ಭೂಮಿಯು ಬಹುದಿನಗಳು ಕಷ್ಟಪಟ್ಟಿತು. ಕಲಿಯುಗದಲ್ಲಿ ನರರ ಆಯುಷ್ಯವು ಸ್ವಲ್ಪವಾದರೂ ತಪಸ್ಸನ್ನು ಮಾಡಿದರೆ ಬೇಗ ಸಿದ್ಧಿಯನ್ನು ಹೊಂದುವರು ಯಾರು ಬ್ರಹ್ಮಜ್ಞಾನಿಗಳಾಗಿ ಪುಣ್ಯವಂತರಾಗಿರುವರೋ ಅವರಿಗೆ ನೀನು ಸಹಾಯಮಾಡು ಎಂದನು ಆಗ ಕಲಿಯು ಸ್ವಾಮಿ, ತಾವು ಹೇಳಿದವರೇ ನನಗೆ ಹಗೆಗಳು ಇವರಿರುವಲ್ಲಿಗೆ ಹೋಗಲು ಹೆದರುವೆನು ಈ ಭೂಮಿಯಲ್ಲಿ ಭರತಖಂಡವು ಪುಣ್ಯಕರವು. ಅಲ್ಲಿಗೆ ನಾನು ಹೋಗಲಾರೆನೆಂದಿತು ಆಗ ವಿಧಿಯು ಕಲಿಯೇ,

ನೀನು ಕಾಲಪುರುಷನೊಡನೆ ಸೇರಿ ಭೂಮಿಗೆ ಹೋಗು ಆ ಕಾಲಪುರು ಷನು ಧರ್ಮವಾಸನೆಯನ್ನು ಛೇಧಿಸುವನು. ಪುಣ್ಯವಂತರ ಬುದ್ಧಿಯನ್ನು ಪಾಪವಿಷಯದಲ್ಲಿ ತಿರುಗಿಸುವನು ಎಂದನು ಆಗ ಕಲಿಯು ಸ್ವಾಮಿ, ಭೂಮಿಯಲ್ಲಿ ಯಾರು ಹರಿಹರರನ್ನು ಧ್ಯಾನಿಸುವರೋ ಅವರೇ ನನಗೆ ಹಗೆಗಳಾಗಿಹರು ಇಂಥವರು ಶ್ರೀ ಕಾಶೀಕ್ಷೇತ್ರದಲ್ಲಿ ಧರ್ಮಿಷ್ಠರಾಗಿ ರುವರು ತೀರ್ಥಯಾತ್ರೆ ಮಾಡುತ್ತಾ ಪುರಾಣಗಳಂ ಕೇಳುತ್ತಾ ದಾನ ಮಾಡುತ್ತಾ ಇರುವವರೇ ನನಗೆ ಹಗೆಗಳು ಯಾರ ಮನಸ್ಸು ಶಾಂತಿ ಯುಳ್ಳದ್ದಾಗಿದೆಯೋ, ಯಾರು ಡಂಭವಿಲ್ಲದೆ ಪುಣ್ಯಮಾಡುವರೋ ಅಂಥ ವರನ್ನು ನೋಡಲು ಹೆದರುವೆನು ನಾಸಾಗ್ರ (ಮೂಗಿನಕೊನೆ) ದಲ್ಲಿ ದೃಷ್ಟಿಯಿಟ್ಟು ಜಪಮಾಡುವವರನ್ನು ನೋಡಿದರೆ ನನ್ನ ಜೀವವೇ ಹೋದೀತು ' ಸತೀಸುತರಲ್ಲಿ ಪ್ರೀತಿಯಿಟ್ಟು ಮೋಹಿತರಾಗಿರುವವರನ್ನು ಕಂಡರೆ ನನಗತಿಹಿತವು ವೇದಶಾಸ್ತ್ರಗಳಂ ನಿಂದಿಸುತ್ತಾ, ಹರಿಹರರಲ್ಲಿ ಭೇದವೆಣಿಸುತ್ತಾ, ದೂಷಿಸುತ್ತಾ ಇರುವವರೇ ನನಗೆ ಪರಮಾಪ್ತರು. ಜಿತೇಂದ್ರಿಯರಾಗಿ ಸದಾ ಹರಿಹರರನ್ನು ನೆನೆಯುತ್ತಾ ರಾಗದ್ವೇಷಗಳಿಲ್ಲದೆ ಧೀರರಾಗಿರುವವರನ್ನು ನೋಡಿದರೆ ನನಗೆ ಭಯವಾಗುವುದು, ಎಂದಿತು. ಆಗ ಬ್ರಹ್ಮನು ಕಲಿಯೇ, "ನೀಸಿರುವ ಭೂಮಿಯಲ್ಲಿ ಬಹುಕಾಲ ನಿನ್ನ ಇಷ್ಟವು ಸಿದ್ಧಿಸುವುದು" ಆದರೆ ಪುಣ್ಯವಂತರು ವಿರಳರಾಗಿರುವರು. ಅವರಿಗೆ ನೀನು ಸಹಾಯವಾಗಿರಬೇಕು ಎಂದನು. ಆಗ ಕಲಿಯು ಕರ ಗಳನ್ನು ಜೋಡಿಸಿ ಬಿನ್ನವಿಸುವುದು —

ಸ್ವಾಮಿ, ದುಸ್ವಭಾವವುಳ್ಳ ನಾನು ಯಾರಿಗೆ ಹೇಗೆ ಸಹಾಯ ಮಾಡಬೇಕು ಎಂಬುದನ್ನು ನನಗೆ ಹೇಳಬೇಕು, ಎಂದಿತು. ಇದನ್ನು ಕೇಳಿ ಬ್ರಹ್ಮನು ನಗುತ್ತಾ, ವಿಸ್ತಾರವಾಗಿ ಆ ಧರ್ಮವನ್ನು ಕಲಿಗೆ ಹೇಳು ವನು. ಕಲಿಯೇ, ಕಾಲವೂ ವೇಳೆಯೂ ನಿನಗೆ ಸಹಾಯಕರಾಗಿರು ವರು. ಇವು ನಿರ್ಗುಣದಿಂದ ನಿನಗೆ ದಾರಿಯಂ ತೋರಿಸುವುವು ಯಾರು ನಿರ್ಮಲರಾಗಿರುವರೋ ಅವರು ನಿನಗೆ ಹಗೆಗಳು. ಮಲಮೂತ್ರ ಸ್ಪರ್ಶವುಳ್ಳವರು ನಿನಗೆ ಇಷ್ಟರು ಪುಣ್ಯವಂತರು ಮಾತ್ರ ನಿನ್ನನ್ನು ಗೆಲ್ಲುವರು, ಆದರೆ ಇಂಥವರು ವಿರಳರು ನಿನ್ನ ತೊಂದರೆಯನ್ನು ಸಹ

ಸುವವರೇ ವಿವೇಕಿಗಳು. ಸಹಿಸದಿರುವವರೇ ನಿನಗಧೀನರು ಇವರಿಗೆ ಈ ಯುಗದಲ್ಲಿ ಈಶ್ವರಪ್ರಾಪ್ತಿಯಾಗದು ಸಾಧುಲಕ್ಷಣವೇನಂದರೆ,—ಮನೋಧೈರ್ಯವೂ ಶುದ್ಧಬುದ್ಧಿಯೂ ಅಲೋಭವೂ ಉಳ್ಳವರೇ ಸಾಧುಗಳು ಇವರಿಗೆ ದೋಷ ತಗಲದು. ಯಾರು ಹರಿಹರರಂ ಧ್ಯಾನಿಸುವರೋ ಅಥವಾ ಕಾಶಿಯಲ್ಲಿ ವಾಸಿಸುವರೋ, ಗುರುಸೇವೆಗೈವರೋ ಅವರಿಗೆ ನಿನ್ನ ಗೋಷವಿಲ್ಲ ತಾಯಿತಂದೆಗಳನ್ನೂ ವಿಪ್ರರನ್ನೂ ಕಪಿಲಾಧೇನುವನ್ನೂ ಸೇವಿಸುವವರಿಗೆ ನಿನ್ನ ದೋಷವಿಲ್ಲ ಶೈವ ವೈಷ್ಣವರನ್ನೂ, ತುಲಸಿಯನ್ನು ಸೇವಿಸುವವರನ್ನೂ ಬಾಧಿಸಬೇಡ ಗುರುಸೇವೆ ಮಾಡುವವರನ್ನೂ, ಪುರಾಣಗಳನ್ನು ಕೇಳುವವರನ್ನೂ, ಧರ್ಮಪರರನ್ನೂ ಬಾಧಿಸದಿರು. ಸುಕೃತಿಗಳಾಗಿಯೂ ಶಾಸ್ತ್ರಜ್ಞರಾಗಿಯೂ ಗುರುಸೇವಕರಾಗಿಯೂ ವಂಶಪರಂಪರೆಯಿಂದ ಧಾರ್ಮಿಕರಾಗಿಯೂ ಇರುವವರನ್ನು ಬಾಧಿಸದಿರು ಗುರುಮುಖಿಮುಯ ಕೇಳು ಗುರು ಶಬ್ದಾರ್ಥವೇನೆಂದರೆ —ಗು ಎಂದರೆ ಸಿದ್ಧ ಎಂದೂ ರೇಫಕ್ಕೆ ಪಾಪನಂ ಸುಡುವುದು ಎಂದೂ, ರೇಫಯ ಮುಂದಿನ ಉಕಾರಕ್ಕೆ ವಿಷ್ಣು ರೂಪ ಎಂದೂ ಅರ್ಥವು. ಶ್ರೀ ಗುರುವೇ ಸತ್ಯವೂ ಪರಬ್ರಹ್ಮರೂಪವೂ ಆಗಿರುವನು.

೧. ಗಣೇಶೋವಾಗ್ನಿನಾಯುಕ್ತೋ ವಿಷ್ಣುನಾನುಸಮುಸ್ಥಿತಃ ।
ವರ್ಣದ್ವಯಾತ್ಮಕೋಮಂತ್ರಃ ಚತುರ್ಮುಕ್ತಿಪ್ರದಾಯಕಃ ॥

ಗುರುವೆಂಬ ಶಬ್ದಕ್ಕೆ ಗಣೇಶನೂ ಅಗ್ನಿಯೂ ವಿಷ್ಣುವೂ ಎಂಬ ಅರ್ಥವು ಈ ಶಬ್ದವೇ ಮುಕ್ತಿಪ್ರದವು

೨. ಗುರುಃಪಿತಾಗುರುರ್ಮಾತಾ ಗುರುರೇವಪರಶ್ಶಿವಃ ।
ಶಿವೇರುಷ್ಟೇ ಗುರುಸ್ತ್ರಾತಾ ಗುರೌರುಷ್ಟೇನಕಶ್ಚನ ॥

ಗುರುವೇ ತಂದೆಯೂ ತಾಯಿಯೂ ಶಿವನೂ ಆಗಿದ್ದನೆ. ಶಿವನು ಕೋಪಿಸಿದರೆ ಗುರುವು ರಕ್ಷಿಸುತ್ತಾನೆ, ಗುರುವು ಕೋಪಿಸಿದರೆ ಶಿವನಾಗಲೀ ಯಾರೇ ಆಗಲೀ ರಕ್ಷಿಸರು.

೩. ಗುರುಃಬ್ರಹ್ಮಾಗುರುರ್ವಿಷ್ಣುಃ ಗುರುದೇವೋ ಮಹೇಶ್ವರಃ ।
ಗುರುರೇಕಃ ಪರಬ್ರಹ್ಮಾ ತಸ್ಮಾದ್ಗುರುಮುಪಾಶ್ರಯೇತ್ ॥

ಗುರುವೇ ಬ್ರಹ್ಮನೂ ವಿಷ್ಣುವೂ ಶಿವನೂ ಪರಬ್ರಹ್ಮನೂ ಆಗಿದ್ದಾನೆ ಆದುದರಿಂದ ಗುರುವನ್ನು ಆಶ್ರಯಿಸಬೇಕು

೪ ಹರೌಪ್ರಸನ್ನೇಪಿಚ ವೈಷ್ಣವಾಜನಾಃ |
ಸುಪ್ರಾರ್ಥಯಂತೋ ಗುರುಭಕ್ತಿ ಮವ್ಯಯಾಂ ||
ಗುರೌಪ್ರಸನ್ನೆ ಜಗದೀಶ್ವರ ಸ್ಸದಾ |
ಜನಾರ್ದನಸ್ತುಷ್ಯತಿ ಸರ್ವಸಿದ್ಧಿದಃ ||

ವೈಷ್ಣವರು ಹರಿಯು ಪ್ರಸನ್ನನಾದರೆ ಸ್ಥಿರವಾದ ಗುರುಭಕ್ತಿಯನ್ನು ಪ್ರಾರ್ಥಿಸುವರು ಗುರುವು ಮೆಚ್ಚಿದರೆ ಶ್ರೀಹರಿಯು ಆನಂದಿಸಿ ಸಿದ್ಧಿಯನ್ನು ಕೊಡುವನು

೫. ಗುರುಸ್ಸದಾದರ್ಶಯಿತಾಪ್ರವೃತ್ತಿಂ ತೀರ್ಥವ್ರತಂಯೋಗತಪಾದಿಧರ್ಮಾನ್ |
ಆಚಾರವರ್ಣಾದಿವಿವೇಕಯ ಜ್ಞಾನ್ ಜ್ಞಾನಂಪರಂಭಕ್ತಿವಿವೇಕಯುಕ್ತಂ||

ಗುರುವನ್ನು ಸೇವಿಸಿದರೆ ಶಾಸ್ತ್ರಮಾರ್ಗಪ್ರವರ್ತನೆಯನ್ನು ತೋರಿಸುವನು. ತೀರ್ಥ, ವ್ರತ, ಯೋಗ, ತಪಸ್ಸು ಮುಂತಾದವುಗಳ ಆಚಾರಗಳನ್ನೂ ಪರಮಭಕ್ತಿ ವಿವೇಕವನ್ನೂ ಉಂಟುಮಾಡುತ್ತಾನೆ. ಆದುದರಿಂದ ಗುರುವಿಲ್ಲದೆ ಗತಿಯಿಲ್ಲ

೬. ಗುರೋರ್ವಿನಾನಶ್ರವಣಂ ಭವೇತ್ಕಸ್ಯಾಪಿಕಸ್ಯಚಿತ್ |
ವಿನಾಕರ್ಣೇನಶಾಸ್ತ್ರಸ್ಯ ಶ್ರವಣಂತತ್ಕುತೋಭವೇತ್ ||

ಸರ್ವರಿಗೂ ಗುರುವಿಲ್ಲದೆ ಶ್ರವಣವು ಹೇಗಾದೀತು ? ಕರ್ಣವಿಲ್ಲದಿದ್ದರೆ ಶಾಸ್ತ್ರಶ್ರವಣವು ಹೇಗಾದೀತು ? ಶಾಸ್ತ್ರವನ್ನು ಕೇಳದರೆ ಸಂಸಾರವನ್ನು ದಾಟಬಹುದು.

ಗುರುವೇ ಜ್ಯೋತಿಸ್ಸ್ವರೂಪನು. ಗುರುವನ್ನು ಸೇವಿಸಿದರೆ ಸರ್ವಸಿದ್ಧಿಯುಂಟಾದೀತು. ಈ ವಿಷಯದಲ್ಲಿ ಅನಾದಿಯಾದ ಒಂದು ಕಥೆಯನ್ನು ಹೇಳುವೆನು — ಪೂರ್ವದಲ್ಲಿ ಗೋದಾವರೀ ತೀರದಲ್ಲಿ ಅಂಗೀರಸ ಋಷ್ಯಾಶ್ರಮದಲ್ಲಿ ವೃಕ್ಷಗಳೂ ಪುಣ್ಯಾಕರಗಳಾದ ಮೃಗಗಳೂ ಇದ್ದುವು. ಅಲ್ಲಿ ಅನೇಕ ಬ್ರಹ್ಮರ್ಷಿಗಳಿದ್ದರು. ಅವರಲ್ಲಿ ಪೈಲನೆಂಬ ಋಷಿಪುತ್ರನಾದ ವೇದಧರ್ಮನೆಂಬ ಬ್ರಾಹ್ಮಣನಿದ್ದನು. ಈತನಲ್ಲಿ ಅನೇಕ ಜನ ಶಿಷ್ಯರಿದ್ದರು. ಇವರಲ್ಲಿ ದೀಪಕನೆಂಬ ಶಿಷ್ಯನು ಜಾಣನಾಗಿ

ಶಾಸ್ತ್ರಪುರಾಣಗಳನ್ನು ಅಭ್ಯಾಸಮಾಡಿ ಅತಿ ನಿಪುಣನಾದನು ಒಂದು ದಿನ ವೇದಧರ್ಮನು ಶಿಷ್ಯರನ್ನು ಕರೆದು, ಶಿಷ್ಯರಿರಾ ನನ್ನ ಮಾತಿನಲ್ಲಿ ನಿಮಗೆ ಪ್ರೀತಿಯು ಇದೆಯೋ ? ಎಂದು ಕೇಳಿದನು. ಆಗ ಈ ಶಿಷ್ಯನು ಸ್ವಾಮಿ, ತಾವು ಈ ಸಂಸಾರವನ್ನು ದಾಟಿಸುವವರಾಗಿದ್ದೀರಿ ತಾವು ನಿರೂಪಿಸಿದುದನ್ನು ನಂಬಿ ಅಂಗೀಕರಿಸುವೆವು ಗುರುವಾಕ್ಯವನ್ನು ಯಾವನು ಮಾಡದಿರುವನೋ ಆತನು ರೌರವವೆಂಬ ನರಕವನ್ನು ಹೊಂದುವನು. ಆತನು ಅವಿದ್ಯಾರೂಪವಾದ ಮಾಯಾಸಾಗರದಲ್ಲಿ ಮುಳುಗುವನು ಅವನಿಗೆ ಗತಿಯಿಲ್ಲದೆ ನರಕದಲ್ಲಿ ಬೀಳುವನು ಗುರುವೇ ಸಂಸಾರತಾರಕನು ಎಂದು ವೇದಪುರಾಣಗಳು ಹೇಳುವುವು, ಎಂದನು ಇದನ್ನು ಕೇಳಿ ವೇದಧರ್ಮನು, ಸಂದೀಪಕನೇ ಕೇಳು ನಾನು ಪೂರ್ವಾರ್ಜಿತವಾದ ಪಾಪಸಹಸ್ರಗಳಿಗೆ ತಕ್ಕ ಫಲವನ್ನು ಅನುಭವಿಸುವೆನು, ತಪಸ್ಸು ಮಾಡುತ್ತಾ ಎಷ್ಟೋ ಪಾಪಗಳನ್ನು ತೊಳೆಯುತ್ತಾ ಬಂದೆನು ಈ ಘೋರಪಾಪಗಳ ಫಲವನ್ನು ಅನುಭವಿಸಲೇ ಬೇಕು ಇದಕ್ಕಾಗಿ ಶ್ರೀ ಕಾಶೀಕ್ಷೇತ್ರಕ್ಕೆ ಹೋದರೆ ಆ ಪಾಪವು ಪರಿಹರಿಸುವುದು ಇದು ಶಾಸ್ತ್ರದಲ್ಲಿ ಪ್ರಸಿದ್ಧವಾಗಿದೆ ಆದುದರಿಂದ ನನ್ನನ್ನಲ್ಲಿಗೆ ಕರೆದುಕೊಂಡು ಹೋಗಿರಿ ಅಲ್ಲಿ ಈ ದೇಹದಿಂದಲೇ ಆ ಪಾಪಶೇಷದ ಫಲವನ್ನು ಅನುಭವಿಸುವೆನು. ಆಗ ನನ್ನ ದೇಹವನ್ನು ರಕ್ಷಿಸಬೇಕು ಇದಕ್ಕೆ ಶಕ್ತನಾದ ಶಿಷ್ಯನು ಒಪ್ಪಲಿ ಎಂದನು. ಆಗ ಸಂದೀಪಕನು, ಗುರುವರ್ಯರೇ ! ಪಾಪಗಳಿಗಾಗಿ ದೇಹ ನಾಶಮಾಡಿಕೊಳ್ಳಬಾರದು. ಸಂಗ್ರಹೀತವಾದ ದುಃಖಗಳಿಗೆ ಬೇಗ ಪ್ರತೀಕಾರಮಾಡಿರಿ ಎಂದು ಬಿನ್ನವಿಸಿದನು. ಆಗ ವೇದಧರ್ಮನು ಶಿಷ್ಯನೇ, ನರನು ದೃಢಾಂಗನಾಗಿದ್ದಾಗ ಪಾಪವನ್ನು ತೊಳೆಯಬೇಕು. ಇಲ್ಲದಿದ್ದರೆ ಅದು ಮುಂದೆ ಬಹಳವಾಗಿ ಬೆಳೆಯುವುದು. ತೀರ್ಥ ಕ್ಷೇತ್ರಗಳಲ್ಲಿ ಪ್ರಾಯಶ್ಚಿತ್ತ ಮಾಡಿಕೊಂಡು ಈಗಲೇ ಪಾಪಫಲವನ್ನನುಭವಿಸಬೇಕು. ಇಲ್ಲದಿದ್ದರೆ ನನಗೆ ಮುಕ್ತಿಯಿಲ್ಲ. ಸುರರಿಗೂ ಮುನಿಗಳಿಗೂ ಜ್ಞಾನಿಗಳಿಗೂ ಸಹಾ ಪಾಪ ಫಲವನ್ನು ಅನುಭವಿಸಿದ ಹೊರತು ಪಾಪವು ಹೋಗದು ಎಂದನು ಆಗ ದೀಪಕನು ಸ್ವಾಮಿ, ನನಗೆ ಅನುಜ್ಞೆಕೊಡಿರಿ. ನಾನು ನನ್ನ ಶಕ್ತಿಯಿಂದ ಅನುಮಾನವಿಲ್ಲದೆ ತಮ್ಮನ್ನು ಸೇವಿಸುವೆನು ಎಂದನು. ಆಗ ಗುರುವು, ಶಿಷ್ಯನೇ, ನನಗೆ

ಕುಷ್ಠರೋಗವೂ ಅಂಗಹೀನತೆಯೂ ಕುರುಡತನವೂ ಹೆಳವತನವೂ ಉಂಟಾಗುವುವು. ೨೧ ವರ್ಷಗಳವರೆಗೂ ಈ ವಿಧವಾಗಿರುವ ನನ್ನನ್ನು ಸೇವಿಸುವ ದೃಢವ್ರತವನ್ನು ನೀನು ಅಂಗೀಕರಿಸುವಿಯಾ ಎಂದನು. ಆಗ ದೀಪಕನು ಸ್ವಾಮಿಾ, ತಮ್ಮ ಕುಷ್ಠರೋಗವನ್ನು ನನಗೆ ಕೊಡಿರಿ. ನಾನು ೨೧ ವರ್ಷಗಳು ಕುರುಡನಾಗಿದ್ದು ತಮ್ಮ ಪಾಪಕ್ಕೆ ನಿಷ್ಕೃತಿಯುನ್ನುಂಟು ಮಾಡುವೆನು, ಬೇಗ ನಿರೂಪಿಸಿರಿ ಎಂದು ಅವರ ಪಾದಗಳಿಗೆ ವಂದಿಸಿದನು. ಶಿಷ್ಯನ ಮಾತನ್ನು ಕೇಳಿ, ವೇದಧರ್ಮನು ಶಿಷ್ಯನೇ, ನನ್ನ ಪಾಪವು ನನಗೆ ಸೇರಿದುದು. ನಿನಗೆ ಗ್ರಾಹ್ಯವಲ್ಲ ನನ್ನ ಪಾಪದ ಫಲವನ್ನು ಈ ದೇಹ ದಲ್ಲಿಯೇ ಅನುಭವಿಸಬೇಕು. ಆದುದರಿಂದ ನನ್ನ ಪಾಪ ದ ೩೮ದ ಫಲ ವನ್ನು ೨೧ ವರ್ಷಗಳವರೆಗೂ ಅನುಭವಿಸುವೆನು ಆಗ ನೀನು ನನ್ನನ್ನು ರಕ್ಷಿಸು ರೋಗಿಯಾದ ನನ್ನನ್ನು ಪಾಲಿಸುವುದು ಬಹುಕಷ್ಟವು ನನ್ನ ದೆಸೆಯಿಂದ ನಿನಗೆ ಬಹುಕಷ್ಟವಾದೀತು ನನ್ನ ಪಾಪದ ಫಲವನ್ನು ಅನುಭವಿಸಲು ಕಾಶಿಗೆ ನನ್ನನ್ನು ಕರೆದುಕೊಂಡು ಹೋಗು. ಅಲ್ಲಿ ನನ್ನ ಪಾಪವು ಪರಿಹಾರವಾಗಿ ನಿನ್ನ ದೆಸೆಯಿಂದ ಸ್ಥಿರಪದವಿಯನ್ನು ಹೊಂದುವೆ ನೆಂದನು. ಆಗ ದೀಪಕನು, ಗುರುವರ್ಯರೇ! ಅವಶ್ಯಕವಾಗಿ ತಮ್ಮನ್ನು ಕಾಶೀಕ್ಷೇತ್ರಕ್ಕೆ ಕರೆದುಕೊಂಡು ಹೋಗಿ ಶ್ರೀ ವಿಶ್ವನಾಥಸ್ವಾಮಿಗೆ ಸದೃಶರಾದ ತಮ್ಮನ್ನು ೨೧ ವರ್ಷಕಾಲ ಸೇವಿಸುತ್ತೇನೆಂದನು. ಈ ರೀತಿಯಾಗಿ ದೀಪಕನು ಗುರುವನ್ನು ಕಾಶಿಗೆ ಕರೆದುಕೊಂಡು ಹೋದನು. ಅಲ್ಲಿ ಮಣಿಕರ್ಣಿಕಾ ಘಾಟಿನಲ್ಲಿ ಉತ್ತರಭಾಗದಲ್ಲಿರುವ ಕಂಬಳೇಶ್ವರ ಸ್ವಾಮಿಯ ಸನ್ನಿಧಿಯಲ್ಲಿ ಈ ಗುರುಶಿಷ್ಯರಿಬ್ಬರೂ ವಾಸವಾಗಿದ್ದರು ಆ ಮಣಿಕರ್ಣಿಕೆಯಲ್ಲಿ ಸ್ನಾನಮಾಡಿ ಶ್ರೀ ವಿಶ್ವನಾಥಸ್ವಾಮಿಯನ್ನು ಪೂಜಿಸಿ ಗುರುಗಳ ಪ್ರಾರಬ್ಧ ಭೋಗವನ್ನು ಅನುಭವಮಾಡಿಸುತ್ತಾ ಇದ್ದನು. ಕುಷ್ಠರೋಗಿಯಾಗಿಯೂ ಕುರುಡನಾಗಿಯೂ ಇರುವ ಗುರುವನ್ನು ದೀಪ ಕನು ಅತಿಭಕ್ತಿಯಿಂದ ಸೇವಿಸುತ್ತಿದ್ದನು ಆ ಗುರುವಿನ ದೇಹದಲ್ಲಿ ಕುಷ್ಠರೋಗವು ಬಲವಾಗಿ ಕ್ರಿಮಿಯುಂಟಾಗಿ ಕೀವುರಕ್ತಗಳುಳ್ಳವನಾಗಿ ದುಃಖವನ್ನು ಆ ಗುರುವು ಅನುಭವಿಸುತ್ತಿದ್ದನು ದೀಪಕನು ಭಿಕ್ಷೆ ಬೇಡಿತಂದು ನಿತ್ಯವೂ ಗುರುಗಳಿಗೆ ಕೊಡುತ್ತಾ ವಿಶ್ವನಾಥಸ್ವರೂಪರೆಂದು ಪೂಜಿಸುತ್ತಾ ಇದ್ದನು

ರೋಗಪೀಡಿತನಾದ ನರನು ಸಜ್ಜನನಾದರೂ ಕ್ರೂರನಾಗುತ್ತಾನೆ ಆ ಗುರುವು ಒಂದುಕಾಲದಲ್ಲಿ ಕ್ರೂರನಾಗಿ ಕೋಪಿಸಿ, ಅವನು ತಂದ ಭಿಕ್ಷಾನ್ನವನ್ನು ಸ್ವಲ್ಪವಾಗಿ ಏಕೆ ತಂದೆ ? ಎಂದು ಭೂಮಿಯಲ್ಲಿಸೆದನು ಈರೀತಿಯಿಂದ ಶಿಷ್ಯನನ್ನೂ ಕ್ಲೇಶಪಡಿಸುತ್ತಿದ್ದನು ನಾನಾವಿಧ ಪಕ್ವಾನ್ನ ಗಳನ್ನೇಕೆತರಲಿಲ್ಲವೆಂದು ಸಿಟ್ಟಾಗಿ ಕಾಯಿಪಲ್ಯಗಳನ್ನು ಬಹಳವಾಗಿ ಬೇಡುತ್ತಿದ್ದನು. ಎಷ್ಟು ತಂದುಕೊಟ್ಟರೂ ಸಿಟ್ಟಾಗದಿರುತ್ತಿರಲಿಲ್ಲ. ಒಂದು ಸಮಯದಲ್ಲಿ ಗುರುವು ಎಲೈ ಶಿಷ್ಯಶಿರೋಮಣಿಯೇ, ನನ್ನ ನಿಮಿತ್ತವಾಗಿ ನೀನು ಆಶಿಯಾಗಿ ಬಳಲಿದೆ, ಆದರೂ ನನ್ನ ಮಲಮೂತ್ರವನ್ನು ಸದಾ ತೊಳೆಯುವುದಿಲ್ಲ. ನನ್ನ ಮೈಯಲ್ಲಿ ಮುತ್ತಿರುವ ನೊಣಗಳನ್ನು ನಿವಾರಿಸುವುದಿಲ್ಲ. ಸರಿಯಾಗಿ ಸೇವಿಸುವುದಿಲ್ಲ ಬಹುಪಾಪವೆಲ್ಲಿರುವುದೋ ಅಲ್ಲಿ ದೈನ್ಯವೂ ಮತ್ಸರವೂ ಇರುವುವು. ಈ ರೀತಿಯಾದ ಅಪಸ್ಮಾರ ರೂಪವಾದ ದುಃಖವುಂಟಾದರೆ ಅದನ್ನು ಪಾಪರೂಪವೆಂದು ತಿಳಿ ಎಲ್ಲಾ ರೋಗಗಳೂ ಕುಷ್ಠರೋಗದ ಹದಿನಾರನೇ ಒಂದು ಭಾಗಕ್ಕಿಂತಲೂ ಕಮ್ಮಿಯಾಗಿದೆ ಎಂದರು. ಈ ರೀತಿಯಿಂದ ವೇದಧರ್ಮನು ಕಷ್ಟಪಡುತ್ತಿದ್ದನು ದೀಪಕನು ಗುರುಗಳ ದೋಷಗಳನ್ನು ಮನಸ್ಸಿಗೆ ತಾರದೆ ಒಂದೇ ಮನಸ್ಸಿನಿಂದ ಆ ಗುರುವನ್ನು ಈಶ್ವರ ಸಮಾನನೆಂದು ತಿಳಿದು ಭಿಕ್ಷಾನ್ನ ವನ್ನು ತಂದು ಕೊಡುವಾಗಲೆಲ್ಲಾ ಈ ಗುರುಗಳು ಶ್ರೀ ವಿಶ್ವೇಶ್ವರನಿಗೂ ನಾರಾಯಣನಿಗೂ ಸದೃಶರೆಂದು ಹೇಳುತ್ತಿದ್ದನು ಕಾಶೀಕ್ಷೇತ್ರವು ಶ್ರೇಷ್ಠವಾಗಿದ್ದರೂ ಗುರುಸೇವೆಯನ್ನು ಬಿಟ್ಟು ತೀರ್ಥಯಾತ್ರೆಗೂ ದೇವರ ದರ್ಶನಕ್ಕೂ ಯಾವಾಗಲೂ ಹೋಗುತ್ತಿರಲಿಲ್ಲ

ನತೀರ್ಥಯಾತ್ರಾ ನಚದೇವಯಾತ್ರಾ ನದೇಹಯಾತ್ರಾ ನಚಗೇಹಯಾತ್ರಾ |
ಅಹರ್ನಿಶಂ ಬ್ರಹ್ಮಹರಿಸ್ಸಬುದ್ಧ್ಯೋಗುರುಃ ಪ್ರಸೇವ್ಯೋನಪಿಸೇವ್ಯ ಮನ್ಯತ್ ||

(ತೀರ್ಥಯಾತ್ರೆಯನ್ನೂ ದೇವಯಾತ್ರೆಯನ್ನೂ ದೇಹಯಾತ್ರೆ ಯನ್ನೂ ಮಾಡದಿದ್ದರೂ ಗುರುವನ್ನು ತ್ರಿಮೂರ್ತಿಸ್ವರೂಪರೆಂದು ತಿಳಿದು ಸೇವಿಸಬೇಕು )

ತನ್ನ ದೇಹರಕ್ಷಣೆಯನ್ನು ಮಾತ್ರ ಮಾಡಿಕೊಳ್ಳುವವನು ಶಿಷ್ಯನಲ್ಲ ಗುರುವು ನಿಷ್ಠುರವಾದ ಮಾತನ್ನಾಡಿದರೂ ಮನಸ್ಸಿನಲ್ಲಿ ಸಂತೋಷದಿಂದ

ಆತನು ಸೇವಿಸುತ್ತಿದ್ದನು. ಇದನ್ನು ತಿಳಿದು ಪರಮೇಶ್ವರನೇ ಪ್ರತ್ಯಕ್ಷ
ನಾಗಿ ಬಂದು ದೀಪಕನನ್ನು ಕುರಿತು ವರವನ್ನು ಕೇಳೆಂದನು. ಆಗ ಆತನು
ಶಂಕರನೇ ! ಮೃತ್ಯುಂಜಯನೇ ! ಗುರುಗಳನ್ನು ಕೇಳದೆ ನಾನು ತಮ್ಮಲ್ಲಿ
ವರವನ್ನು ಕೇಳುವುದಿಲ್ಲ ಎಂದು ಹೇಳಿ ಗುರುಗಳ ಹತ್ತಿರ ಹೋಗಿ
ಸ್ವಾಮಿಾ, ವಿಶ್ವನಾಥಸ್ವಾಮಿಯು ನಮ್ಮಲ್ಲಿ ಪ್ರಸನ್ನನಾಗಿ ಬಂದಿದ್ದಾನೆ.
ತಮ್ಮನುಜ್ಞೆಯಾದರೆ ತಮ್ಮ ವ್ಯಾಧಿಯು ಉಪಶಮನವಾಗುವಂತೆ ವರ
ವನ್ನು ಕೇಳಬಹುದೇ ? ಎಂದು ಕೇಳಿದನು. ಆಗ ಗುರುವು ಶಿಷ್ಯನೇ,
ನನ್ನ ವ್ಯಾಧಿಯ ಕಾರಣವನ್ನು ತಿಳಿ. ಈ ವಿಷಯದಲ್ಲಿ ಶಂಕರನಲ್ಲಿ ವರ
ವನ್ನು ಕೇಳಬೇಡ. ಪಾಪದ ಫಲವನ್ನು ಭೋಗಿಸಿದ ಹೊರತು ನಿವೃತ್ತಿ
ಯಿಲ್ಲ. ಇದು ಜನ್ಮಾಂತರದಲ್ಲಿ ಬಾಧಿಸುವುದು ಇದು ಧರ್ಮಶಾಸ್ತ್ರದಲ್ಲಿ
ಉಕ್ತವಾಗಿದೆ. ಯಾರಿಗೆ ಮುಕ್ತಿಯ ಆಸೆಯಿರುವುದೋ ಅವರು ತಮ್ಮ
ಪಾಪವನ್ನು ಹೋಗಲಾಡಿಸಿಕೊಳ್ಳಬೇಕು. ಪಾಪವು ಉಳಿದರೆ ಮೋಕ್ಷಕ್ಕೆ
ವಿಘ್ನವುಂಟಾದೀತು ಎಂದು ಗುರುವು ಹೇಳಲು, ಆ ದೀಪಕನು ಶಿವನನ್ನು
ಕುರಿತು ಸ್ವಾಮಿಾ, ನಾನು ನಿಮ್ಮನ್ನು ವರವನ್ನು ಕೇಳಲು ನನಗೆ ಗುರು
ಗಳ ಅಪ್ಪಣೆಯಿಲ್ಲ. ಆದುದರಿಂದ ಹೇಗೆ ನಾನು ವರವನ್ನು ಕೇಳಲಿ ?
ಎಂದನು. ಶಂಕರನು ಅಚ್ಚರಿಯಿಂದ ಸರ್ವದೇವತೆಗಳೊಡನೆ ವಿಷ್ಣು
ಸವಿಾಪಕ್ಕೆ ಹೋಗಿ ಈ ಸಂಗತಿಯನ್ನರುಹಿದನು. ಇದನ್ನು ಕೇಳಿ
ಶ್ರೀಹರಿಯು ಶಂಕರನೇ ! ಎಂಥಾ ಗುರುಗಳು ? ಎಂಥಾ ಶಿಷ್ಯನು ? ಎಲ್ಲಿ
ದ್ದಾರೆ ? ಎಂದು ಕೇಳಿದನು ಆಗ ಈಶ್ವರನು ಹರಿಯೇ ! ಗುರುಭಕ್ತ
ನಾದ ದೀಪಕನೆಂಬ ಶಿಷ್ಯನನ್ನು ನೋಡಿ ಆಶ್ಚರ್ಯಪಟ್ಟೆನು. ಆ ದೀಪಕನು
ದಿವಾರಾತ್ರಿಯಲ್ಲಿಯೂ ಏಕಚಿತ್ತದಿಂದ ವೇದಧರ್ಮನೆಂಬ ತಪಸ್ವಿಯನ್ನು
ಸೇವಿಸುತ್ತಿರುವನು. ಇವನಂತೆ ಲೋಕತ್ರಯದಲ್ಲಿಯೂ ನಿಜವಾದ
ಗುರುಭಕ್ತಿಯುಳ್ಳವರು ಯಾರೂ ಇಲ್ಲವು. ನನಗತಿ ಪ್ರೀತಿಯುಂಟಾಗಿದೆ.
ನಾನವನ ಹತ್ತಿರಹೋಗಿ ವರವನ್ನು ಕೇಳೆಂದು ಹೇಳಲು, ಅವನು ಗುರು
ಗಳ ಅಪ್ಪಣೆಯಿಲ್ಲವೆಂದು ವರವನ್ನು ಕೇಳಲಿಲ್ಲ. ಸಾವಿರಾರು ವರ್ಷಗಳು
ತಪಸ್ಸನ್ನು ಮಾಡುತ್ತಾ ಹಗಲಿರುಳೂ ಕಷ್ಟಪಡುತ್ತಾ ನನ್ನನ್ನು ವರವನ್ನು
ಕೇಳುವ ಮಹರ್ಷಿಗಳು ಅನೇಕರಿರುವರು. ಇಂಥವರಿಗೆ ನಾನು ವರ
ವನ್ನು ಕೊಡಲಿಲ್ಲ. ಈ ದೀಪಕನಿಗೆ ವರವನ್ನು ಕೇಳೆಂದರೂ ಕೇಳಲಿಲ್ಲ.

ತನುಮನಗಳನ್ನರ್ಪಿಸಿ ಆ ಗುರುವನ್ನು ತ್ರಿಮೂರ್ತಿಸ್ವರೂಪರೆಂದು ತಿಳಿದು ನಿಶ್ಚಯವಾಗಿ ಸೇವಿಸುತ್ತಿರುವನು. ಗುರುವೇ ಎಲ್ಲ ದೇವತೆಗಳೂ ತಾಯಿ ತಂದೆಗಳೂ ಪರಮಾತ್ಮನೂ ಆಗಿರುವನೆಂದು ಚಿತ್ತದಲ್ಲಿ ನಿಶ್ಚಯಿಸಿರುವನು. ಅವಿದ್ಯೆಯೆಂಬ ಕತ್ತಲೆಯನ್ನು ಛೇದಿಸುವಂಥ ದೀಪಕನನ್ನು ಎಷ್ಟೆಂದು ವರ್ಣಿಸಲಿ ? ಕುಲದೀಪಕನೆಂಬ ನಾಮವು ಇವನಿಗೆ ಸಲ್ಲುವುದು. ಗುರುವೇ ಧರ್ಮಜ್ಞಾನಸ್ವರೂಪನು ಎಂದು ತಿಳಿದು ಆತನು ಭಕ್ತಿಯಿಂದ ಸೇವಿಸುವನು ಎಂದು ಶಂಕರನು ಹೇಳಲು, ಆಗ ಶ್ರೀ ಹರಿಯು ಇವನ್ನು ನೋಡಲು ಅಲ್ಲಿಗೆ ಹೋಗಿ ದೀಪಕನೇ, ನಿನ್ನ ಗುರುಸೇವೆಯಿಂದ ಸಂತುಷ್ಟನಾದೆನು ಬೇಕಾದ ವರವನ್ನು ಕೇಳು ಎಂದನು.

ಆಗ ದೀಪಕನು ಶ್ರೀಹರಿಯೇ ! ನನ್ನಲ್ಲಿ ಯಾವ ಭಕ್ತಿಯನ್ನು ನೋಡಿ ವರವನ್ನು ಕೊಡುವೆ ! ಇದರಿಂದಾಗುವ ಕಾರ್ಯವೇನು ? ಲಕ್ಷಾಂತರ ವರ್ಷಗಳು ಕಾಡಿನಲ್ಲಿ ತಪಸ್ಸನ್ನು ಮಾಡುತ್ತಾ ಇರುವವರಿಗೆ ನೀನು ವರವನ್ನು ಕೊಡದೆ ಉದಾಸೀನನಾಗಿರುತ್ತೀಯೆ. ನಾನಾದರೋ ನಿನ್ನನ್ನು ಭಜಿಸಲಿಲ್ಲ. ನೀನು ಬಲಾತ್ಕಾರದಿಂದ ಬಂದು ನನಗೆ ವರವನ್ನು ಕೊಡಲು ಬಂದೆಯಾ ? ಎಂದು ನುಡಿದನು. ಆಗ ನಾರಾಯಣನು ! ದೀಪಕನೇ ನಿನ್ನ ಗುರುಭಕ್ತಿಯನ್ನು ನೋಡಿ ಸಂತುಷ್ಟನಾದೆನು. ಗುರುಭಕ್ತನೇ ನನ್ನ ಪ್ರಾಣವು. ಅವನಿಗೆ ನಾನು ವಶನಾಗುತ್ತೇನೆ. ಅವನು ಕೇಳಿದುದನ್ನು ನಾನು ಕೊಡುವೆನು. ತಾಯಿ ತಂದೆಗಳನ್ನು ಸೇವಿಸಿದರೂ, ಸ್ತ್ರೀಯರು ಪತಿಯನ್ನು ಸೇವಿಸಿದರೂ, ಅದು ನನಗಿಷ್ಟವು. ಸಜ್ಜನನಾದ ಸನ್ಯಾಸಿಗೂ ಯೋಗಿಗೂ ವಂದಿಸಿದರೆ ಅದು ನನಗೆ ಸೇರುವುದು ಎಂದನು.

ದೀಪಕನು ವಂದಿಸಿ, ಸ್ವಾಮಿ, ನನ್ನ ಮನೋನಿಶ್ಚಯವನ್ನು ಕೇಳಿರಿ. ಗುರುವೇ ನಮಗೆ ವೇದ ಶಾಸ್ತ್ರ ಪುರಾಣಾದಿಗಳನ್ನು ಕೊಡತಕ್ಕವನು. ಗುರುಗಳಿಂದಲೇ ನಮಗ ಸರ್ವಜ್ಞಾನವೂ ತ್ರಿಮೂರ್ತಿಗಳ ಅಧೀನತೆಯೂ ಆಗುವುದು. ಇದು ಸತ್ಯವು. ಗುರುವಿದ್ದರೆ ಪರಮಾರ್ಥವು ಹತ್ತಿರದಲ್ಲಿಯೇ ಇರುವುದು. ಸಿದ್ಧರೂ ಯೋಗಿಗಳೂ ಗುರುಗಳಿಲ್ಲದೆ ಜ್ಞಾನಹೊಂದಲಿಲ್ಲ. ಜ್ಞಾನಿಯಾದಬಳಿಕ ಶಂಕರನು ದೂರದಲ್ಲಿರುವನೇ ? ನೀವು ಯಾವ ವರವನ್ನು ಕೊಡುವಿರೋ ಅದನ್ನು ನಮಗ ಗುರುಗಳು ಕೊಡುವುದು ಯಾವ

ಚಕೋರ್ದ್ಯವು ? ಆದುದರಿಂದ ಗುರುಗಳನ್ನು ಭಜಿಸುವೆನು ಎಂದನು. ಶ್ರೀ ಹರಿಯು ಸಂತುಷ್ಟನಾಗಿ ನನ್ನ ಪ್ರಾಣಸ್ವರೂಪನಾದ ಶಿಷ್ಯಶಿರೋರತ್ನನೇ, ನೀನು ನನ್ನ ಬಾಲಕನು. ಧನ್ಯನಾಗಿದ್ದೀಯೆ. ನಿನಗೆ ವರವನ್ನು ಕೊಡಲು ಬಂದೆನು. ಇದಕ್ಕಾಗಿಯೇ ಶಂಕರನೂ ಬಂದಿದ್ದನು. ಬೇಕಾದ ವರವನ್ನು ಕೇಳು, ಕೊಡುವೆನೆಂದನು. ಆಗ ದೀಪಕನು ಶ್ರೀಹರಿಯೇ, ನನ್ನ ಮನಸ್ಸಿನಲ್ಲಿ ಗುರುಭಕ್ತಿ ರೂಪವಾದ ಜ್ಞಾನವನ್ನು ನನಗೆ ಕೊಡ ಬೇಕು. ಗುರುರೂಪವನ್ನು ನಾನು ಗುರ್ತಿಸುವ ವರವನ್ನು ಕೊಡಬೇಕೆಂದು ವಂದಿಸಿದನು. ಶ್ರೀಹರಿಯು ಸಂತೋಷದಿಂದ ಈ ವರವನ್ನು ಕೊಟ್ಟು ನನ್ನ ಪ್ರಾಣಸಖನಾದ ದೀಪಕಶಿರೋಮಣಿಯೇ, ನೀನು ಗುರುವನ್ನು ಗುರ್ತಿಸಿ ಪರಬ್ರಹ್ಮದೃಷ್ಟಿಯಿಂದ ನೋಡಿ ನನ್ನನ್ನು ಕೇಳುವಿಯಷ್ಟೆ ? ಧಾರ್ಮಿಕ ಮನಸ್ಸಿನಿಂದ ಲೌಕಿಕ ಸುಬುದ್ಧಿಯುಕ್ತವನಾಗಿ ಸರ್ವದಾ ಉತ್ಕೃಷ್ಟವಾದ ಸ್ತುತಿಯನ್ನು ಮಾಡು. ನೀನು ಭಕ್ತಿಯಿಂದ ಸ್ತುತಿಸಿದರೆ ನಾನು ಸಂತುಷ್ಟ ನಾಗುವೆನು. ಆ ಸ್ತುತಿಯು ಸಮ್ಮತವೆಂದು ತಿಳಿ. ವೇದಗಳನ್ನೂ ವೇದಾಂತ ಭಾಷ್ಯಗಳನ್ನೂ ಪಠಿಸಿದರೆ ಅದು ನನ್ನನ್ನು ಸೇರುವುದು. ಗುರುವೇ ಬ್ರಹ್ಮನೆಂದು ವೇದಮತವು. ಗುರುವನ್ನು ಭಜಿಸಿದರೆ ಸತ್ಯವಾಗಿ ಸರ್ವ ದೇವತೆಗಳೂ ನಿನಗೆ ವಶ್ಯರಾಗುವರು. ಗುರುವೆಂಬೆರಡು ಅಕ್ಷರಗಳು ಅಮೃತದ ಸಮುದ್ರವಾಗಿರುವುವು. ಈ ಸಮುದ್ರದಲ್ಲಿ ಮುಳುಗಿ ಗುರು ವನ್ನು ನೆನೆದರೆ ಅವನು ತ್ರಿಲೋಕಗಳಲ್ಲಿ ಪೂಜ್ಯನಾಗಿ ಅಮೃತ ಪಾನ ಮಾಡಿದಂತೆ ಆತನು ಅಮರನಾಗುವನು.

ಮದುಮಾಶಿವಸ್ಯಾಪಿ ಬ್ರಹ್ಮಣೋ ಬ್ರಹ್ಮಣಸ್ಯಚ |
ಅನುಗ್ರಹೋಭವೇತ್ತೇಷಾಂ ಸೇವ್ಯತೇ ಸದ್ಗುರುಸ್ಸದಾ ||

ನಾನೂ ಈಶ್ವರನೂ ಬ್ರಹ್ಮನೂ ಸಹಾ ಗುರುಸೇವೆ ಮಾಡುವವರಿಗೆ ಪ್ರಸನ್ನರಾಗುವೆವು, ಎಂದು ವಿಷ್ಣುವು ದೀಪಕನಿಗೆ ವರವನ್ನು ಕೊಟ್ಟು ಹೊರಟನು. ಎಲೈ ಕಲಿಯೇ, ಕೇಳೆಂದು ಬ್ರಹ್ಮನು ಹೇಳಿದನು. ದೀಪಕನು ಈ ವರವನ್ನು ಹೊಂದಿ ಗುರುಸಮೀಪಕ್ಕೆ ಹೋದನು. ಆಗ ಗುರುವು ದೀಪಕನೇ, ವೈಕುಂಠನಾಯಕನು ಯಾವ ವರವನ್ನು ಕೊಟ್ಟನು ವಿಶದವಾಗಿ ಹೇಳೆಂದನು. ಆಗ ದೀಪಕನು ಸ್ವಾಮಿಾ ! ಶ್ರೀಹರಿಯನ್ನು ಕುರಿತು ಗುರುಭಕ್ತಿಯುಂಟಾಗಬೇಕೆಂದು ವರವನ್ನು ಕೇಳಿದೆನು.

ಗುರುಸೇವೆಯಲ್ಲಿ ತತ್ಪರನಾಗಿ ದೃಢವಾದ ಅಂತಃಕರಣವುಳ್ಳ ದೃಢ ಭಕ್ತಿಯು ತಮ್ಮ ಪಾದಗಳಲ್ಲಿರುವಂತೆ ಶ್ರೀಹರಿಯು ವರವನ್ನು ಕೊಡಲಿ ಎಂದನು. ಆಗ ಗುರುವು ಸಾಕ್ಷಾತ್ಕಾರದಿಂದ ಪ್ರಸನ್ನನಾಗಿ ಶಿಷ್ಯರತ್ನನೇ ನೀನು ಸ್ಥಿರಜೀವಿಯಾಗಿ ಕಾಶಿಯಲ್ಲಿ ವಾಸಿಸು. ನಿನಗೆ ವಾಕ್ಸಿದ್ಧಿಯುಂಟಾಗಲಿ. ನಿನ್ನ ಮನೆಯಲ್ಲಿ ನವನಿಧಿಗಳೂ ಸ್ಥಿರವಾಗಿರಲಿ. ವಿಶ್ವನಾಥನು ನಿನಗೆ ವಶನಾಗಲಿ ಎಂದು ಸಂತೋಷದಿಂದ ಹೇಳಿದನು. ನಿನ್ನ ಸ್ಮರಣೆ ಮಾಡಿದವರಿಗೆ ಕಷ್ಟ ನಿವಾರಣೆಯಾಗಲಿ. ಸಕಲೈಶ್ವರ್ಯವನ್ನೂ ಹೊಂದಲಿ ಎಂದು ವರವನ್ನು ಕೊಟ್ಟು ಗುರುವಾದ ವೇದಧರ್ಮನು ಪ್ರಸನ್ನನಾಗಿ ಆ ಕ್ಷಣದಲ್ಲಿ ದಿವ್ಯದೇಹಧಾರಿಯಾದನು. ಶಿಷ್ಯನ ಮನಸ್ಸನ್ನು ನೋಡು ವುದಕ್ಕಾಗಿ ಕಷ್ಟರೋಗಿಯಾಗಿ ಅತಿಯಾಗಿ ಬಾಧಿಸಿದನು. ಶ್ರೇಷ್ಠ ತಪಸ್ವಿಯಾದ ಈತನಿಗೆ ಪಾಪವೆಲ್ಲಿಯದು ? ಲೋಕಾನುಗ್ರಹಕ್ಕಾಗಿ ಶ್ರೀ ಕಾಶೀಕ್ಷೇತ್ರಕ್ಕೆ ಹೋಗಿದ್ದನು. ಅಲ್ಲಿ ಧಾರ್ಮಿಕನಾಗಲಿ, ಅಧಾರ್ಮಿಕನಾಗಲಿ ಸ್ವಲ್ಪಕಾಲ ವಾಸಿಸಿದರೆ ಅವರಿಗೆ ಪುನರ್ಜನ್ಮವಿಲ್ಲ ಎಂದು ಸೂತರು ಶೌನ ಕಾದಿಗಳಿಗೆ ಹೇಳಿದರೆಂದು ಬ್ರಹ್ಮನು ಕಲಿಗೆ ಈ ಕಥೆಯನ್ನು ಹೇಳಿದನು, ಎಂಬುದಾಗಿ ಸಿದ್ಧರು ನಾಮಧಾರಕನಿಗೆ ಹೇಳಿದರು.

ಯತ್ರಯತ್ರದೃಢಾಭಕ್ತಿಃ ಯದಾಕಸ್ಯಮಹಾತ್ಮನಃ ।
ತತ್ರತತ್ರಮಹಾದೇವಃ ಪ್ರಕಾಶಮುಪಗಚ್ಛತಿ ॥

ತ್ರಿಕರಣ ಶುದ್ಧಿಯಾದ ಮನಸ್ಸಿನಿಂದ ದೃಢಭಕ್ತಿಯುಂಟಾದವನಿಗೆ ಈಶ್ವರನು ವಶನಾಗುವನು. ಎಂದು ಗಂಗಾಧರ ನಂದನನು ಶ್ರೋತೃಗಳಂ ವಂದಿಸಿ ನನ್ನ ವಚನವು ಕಮ್ಮಿಯಾದುದಲ್ಲವೆಂದು ಹೇಳಿದನು. ಎಂಬಲ್ಲಿಗೆ ಶ್ರೀ ಗುರುಚರಿತ್ರೆ ಪರಮಕಥಾ ಕಲ್ಪತರುವಿನಲ್ಲಿ ದೀಪಕಾಖ್ಯಾನವೆಂಬ ಎರಡನೇ ಅಧ್ಯಾಯವು ಮುಗಿದುದು.

॥ ಶ್ರೀ ದತ್ತಾತ್ರೇಯಾರ್ಪಣಮಸ್ತು ॥

## ೩ ನೆಯ ಅಧ್ಯಾಯವು.

ಶ್ರೀ ಗಣೇಶಾಯ ನಮಃ ॥ ನಾಮಧಾರಕನು ಸ್ವಾಮಿಾ, ಸಿದ್ಧಮುನಿಗಳೇ, ನೀವು ನನ್ನ ಮನಸ್ಸಿನ ಸಂದೇಹವನ್ನು ಪರಿಹರಿಸತಕ್ಕವರಾಗಿದ್ದೀರಿ. ಈ ಚರಿತ್ರೆಯನ್ನು ಕೇಳಿ ಆನಂದ ಜಲಧಿಯಲ್ಲಿ ಮುಳುಗಿ ಪರತತ್ವವನ್ನು ತಿಳಿದೆನು. ತಮ್ಮ ವಾಸಸ್ಥಳವು ಯಾವುದು ? ತಮಗೆ ಆಹಾರವೇನು ? ನಾನು ತಮ್ಮ ದಾಸನಾಗಿರುವೆನು ಎಂದು ವಂದಿಸಿದನು. ಕೃಪಾಮಯನಾದ ಸಿದ್ಧಮುನಿಯು ಶಿಷ್ಯನನ್ನಾಲಿಂಗಿಸಿ, ಶಿಷ್ಯನೇ, ಎಲ್ಲಿ ಗುರುವಿರುವನೋ ಅಲ್ಲಿ ನಾನಿರುವೆನು. ನನ್ನ ಆಹಾರವು ಗುರುಸ್ಮರಣೆಯು. ಗುರುಚರಿತ್ರೆಯ ಮಹಿಮೆಯೇ ನನಗೆ ಅಮೃತಪಾನವು. ಗುರುಚರಿತ್ರೆಯನ್ನು ಕೇಳಿದರೆ ಮನದಲ್ಲಿ ಚಿಂತಿಸುವ ಭುಕ್ತಿ ಮುಕ್ತಿ ಪರಮಾರ್ಥಗಳು ಸಿದ್ಧಿಸುವುವು. ಧನಾರ್ಥಿಗಳಿಗೆ ಧನವು ಅಕ್ಷಯವಾಗುವುದು. ಪುತ್ರಪೌತ್ರರೂ ಗೋಧನಗಳೂ ಜ್ಞಾನಸಿದ್ಧಿಯೂ ಉಂಟಾಗುವುವು. ಯಾವನು ಭಕ್ತಿಯಿಂದ ಪೂರ್ಣವಾಗಿ ಗುರುಚರಿತ್ರೆಯನ್ನು ಕೇಳುವನೋ ಆತನು ಸಕಲೇಷ್ಟಗಳನ್ನೂ ತತ್ಕಾಲದಲ್ಲೇ ಹೊಂದುವನು. ಅಪುತ್ರರಿಗೆ ಪುತ್ರರಾಗುವರು. ಇದನ್ನು ಕೇಳಿದರೆ ಗ್ರಹ ರೋಗ ಪೀಡೆಗಳು ಉಂಟಾಗವು. ಬೇಗನೆ ಬಂಧನ ನಿವೃತ್ತಿಯಾದೀತು. ಜ್ಞಾನಿಯೂ ಶತಾಯುವೂ ಬ್ರಹ್ಮಹತ್ಯಾದಿ ಪಾಪಗಳಿಂದ ಬಿಡಲ್ಪಟ್ಟವನೂ ಆಗುವನು ಎಂದನು. ಆಗ ನಾಮಧಾರಕನು ಸ್ವಾಮಿಾ, ಈ ಭವಸಾಗರದಿಂದ ನನ್ನನ್ನು ದಾಟಿಸಿರಿ ಎಂದು ವಂದಿಸಿದನು. ಗುರುವರ್ಯರೇ, ಜಗಜ್ಜ್ಯೋತಿ ಸ್ವರೂಪರೇ, ಶ್ರೀಗುರು ಚರಿತ್ರೆಯನ್ನು ಕೇಳಲು ಬಯಸುವೆನು. ದಾಹಪೀಡಿತನಾದ ದಾರಿಗನಿಗೆ ಅಮೃತವನ್ನು ತಂದುಕೊಡುವಂತೆ ತಾವು ನನಗೆ ದರ್ಶನಕೊಟ್ಟಿರಿ. ಕತ್ತಲೆಯಾದ ರಾತ್ರಿಯಂತ್ಯದ ಸೂರ್ಯೋದಯವಾಗುವಂತೆ ಗುರುಮಹಿಮೆಯನ್ನು ನನ್ನ ಕಿವಿಗಳಿಗೆ ಪಾನಮಾಡಿಸಿರಿ ಎಂದನು. ಆಗ ಸಿದ್ಧಮುನಿಯು ಅಭಯವನ್ನು ಕೊಟ್ಟು ಸ್ವಸ್ಥಾನಕ್ಕೆ ಅವನನ್ನು ಕರೆದುಕೊಂಡು ಹೋದನು. ಜ್ಞಾನಮಾರ್ಗವಾದ, ಕಲ್ಪವೃಕ್ಷದಂತಿರುವ ಅಶ್ವತ್ಥವೃಕ್ಷದ ಮೂಲದಲ್ಲಿ ಕುಳಿತು ಶಿಷ್ಯನೇ, ಗುರುಸೇವೆಗೋಸುಗ ಬರುವ ನಿನಗೆ ಚಿಂತೆಯೂ ಕ್ಲೇಶವೂ

ಉಂಟಾದೀತು. ಗುರುಮೂರ್ತಿಯ ಪರಿಚಯವು ಉಂಟಾಗಲು ಸದಾಚಾರಿ ಗಳಾಗಿಯೂ, ಮನಸ್ಸಿನಲ್ಲಿ ದೃಢಭಕ್ತಿಯುಳ್ಳವರಾಗಿಯೂ ಇರಬೇಕೆಂ ದರು. ಇದನ್ನು ಕೇಳಿ ನಾಮಧಾರಕನು ಸಂತೋಷದಿಂದ ಪ್ರತಿಕ್ಷಣದ ಲ್ಲಿಯೂ ವಂದಿಸುತ್ತಾ ಸ್ವಾಮಿಾ, ನಾನು ತಾಪತ್ರಯಾಗ್ನಿಯಲ್ಲಿ ಸಿಲುಕಿ ಸಂಸಾರ ಸಾಗರದಲ್ಲಿ ಮುಳುಗಿದೆನು. ಮತ್ತು ಅಜ್ಞಾನಜಾಲದಲ್ಲಿ ಕ್ರೋಧಾದಿ ಜಲಚರವರ್ಗಗಳಿಂದ ಗಟ್ಟಿಯಾಗಿ ಸುತ್ತಲ್ಪಟ್ಟಿದ್ದೇನೆ. ಜ್ಞಾನವೆಂಬ ನಾವೆಯಲ್ಲಿ ಕುಳ್ಳಿರಿಸಿ, ಕರುಣವೆಂಬ ವಾಯುವನ್ನು ಬೀಸಿ, ಈ ದೇಹವನ್ನು ರಕ್ಷಿಸಬೇಕು ಎಂದು ವಂದಿಸಿದನು. ಆಗ ಸಿದ್ಧಮುನಿಯು ಶಿಷ್ಯನೇ ಕೇಳು. ನಿನ್ನ ಸಂಶಯ ನಿವೃತ್ತಿಮಾಡುವೆನು. ಅವಿದ್ಯಾಮಾಯೆ ಯಿಂದ ಮೋಹಿತರಾಗಿ ಗುರುವಿನಲ್ಲಿ ದೃಢಭಕ್ತಿಯಿಲ್ಲದೆ ನರರು ಕಷ್ಟಪಡು ತ್ತಿರುವರು. ಮನದಲ್ಲಿ ಸಂಶಯಪಟ್ಟು ನಮಗೆ ಗುರುವು ಏನನ್ನು ಕೊಡುವನು ? ಎಂದು ಹೇಳುವುದರಿಂದ ನಾನಾ ಕಷ್ಟಗಳನ್ನು ಅನು ಭವಿಸುವೆವು. ಗುರುವು ಅಪಾರಸುಖವನ್ನು ಕೊಡುವನು ಮತ್ತು ಸಂಶಯವನ್ನು ಪರಿಹರಿಸುವನು. ಗುರುವು ದಯಾಮಯನಾಗಿರುವನು ; ಆದುದರಿಂದ ಗುರುಚರಣಗಳಲ್ಲಿ ಮನಸ್ಸನ್ನಿಡು. ಮೇಘರಾಜನು ಭೂಮಿಯಲ್ಲೆಲ್ಲಾ ವರ್ಷಿಸುವಂತೆಯೂ, ಎಂದರೆ ಎತ್ತರ ಸ್ಥಳಗಳಲ್ಲಿ ಹೆಚ್ಚು ನೀರು ನಿಲ್ಲದೆ ತಗ್ಗಾದ ಸ್ಥಳದಲ್ಲಿ ನೀರು ನಿಲ್ಲುವಂತೆ ದಯಾನಿಧಿ ಯಾದ ಶ್ರೀಗುರುವು ಕರುಣಿಸುವನು. ಪ್ರಪಂಚವೇ ಬ್ರಹ್ಮಮಯವೆಂದು ತಿಳಿ, ಎಂದಾತನ ತಲೆಯಲ್ಲಿ ಹಸ್ತವನ್ನಿಟ್ಟು ಶಿಷ್ಯನೇ, ಶ್ರೀಗುರುವೇ ಕಲ್ಪ ವೃಕ್ಷಸ್ವರೂಪನೂ, ಕಾಮಧೇನುವೂ ಆಗಿದ್ದಾರೆ. ಗುರುವೇ ಬ್ರಹ್ಮ ವೆಂದು ಶೃತಿಗಳು ಹೇಳುವುವು. ಆದುದರಿಂದ ಶ್ರೀ ಗುರು ಚರಣಕಮಲ ವನ್ನು ಧ್ಯಾನಿಸು ಎಂದರು. ಆಗ ಶಿಷ್ಯನು ಅಂಜಲಿಬದ್ಧನಾಗಿ ಕರುಣಾ ಕರರೇ, ಕಾಮಧೇನುಸ್ವರೂಪರೇ, ಸಿದ್ಧಯೋಗೀಶ್ವರರೇ ಈ ತಮ್ಮ ನಿರೂಪದಿಂದ ನನ್ನ ಮನಸ್ಸು ನಿರ್ಮಲವಾಯಿತು ಗುರುಚರಿತ್ರೆಯನ್ನು ಕೇಳಲು ಕುತೂಹಲ ಪಡುವೆನು. ತ್ರಿಮೂರ್ತಿಸ್ವರೂಪರಾದ ಗುರುಗಳು ನರಜನ್ಮದಲ್ಲಿ ಏಕೆ ಅವತರಿಸಿದರು ? ಎಂಬುದನ್ನು ವಿಸ್ತಾರವಾಗಿ ನಿರೂಪಿ ಸಿರಿ ಎಂದು ವಂದಿಸಿದನು. ಆಗ ಸಿದ್ಧಮುನಿಯು ಶಿಷ್ಯನೇ ನನ್ನ ಬೋಧೆ ಯೆಂಬ ಸಮುದ್ರಕ್ಕೆ ಪೂರ್ಣಚಂದ್ರನಂತೆ ನೀನು ಉತ್ಸಾಹವುಳ್ಳವನಾಗಿ ಸುಖಿ

ಹೊಂದಿದೆ. ಗುರುಸೇವೆಯು ಫಲಿಸಿತು. ಬ್ರಹ್ಮಜ್ಞಾನಿಯಾದೆ. ನಾನು ಭೂಮಿಯಲ್ಲೆಲ್ಲಾ ಸಂಚರಿಸಿದೆನು. ಯಾರೂ ಗುರುಚರಿತ್ರೆಯನ್ನು ಕೇಳಲಿಲ್ಲ. ಈಗ ನೀನು ಕೇಳಿದೆ ಯಾರಿಗೆ ಇಹಪರಸುಖಗಳಲ್ಲಿ ಆಸೆ ಇರುವುದೋ ಅವರಿಗೆ ಗುರುಚರಿತ್ರೆಯನ್ನು ಕೇಳಲು ಇಷ್ಟವುಂಟಾಗುವುದು. ನೀನು ಕೇವಲ ಗುರುಭಕ್ತನಾದುದರಿಂದ ನಿನಗೆ ಗುರುವಿನಲ್ಲಿ ಭಕ್ತಿಯುಂಟಾಗಿದೆ. ಇದು ನಿಜವು ಈ ಚರಿತ್ರೆಯನ್ನು ಕೇಳುವುದರಿಂದ ಪುರುಷಾರ್ಥಗಳೆಲ್ಲವನ್ನೂ ನೀನು ಹೊಂದುತ್ತೀಯೆ. ಮತ್ತು ಧನಧಾನ್ಯಗಳನ್ನೂ ಪುತ್ರ ಪೌತ್ರರನ್ನೂ ಶ್ರುತಿ ಸ್ಮೃತಿ ಜ್ಞಾನವನ್ನೂ ಇಹಸುಖವನ್ನೂ ಶತಾಯುಷ್ಯವನ್ನೂ ಅಂತ್ಯದಲ್ಲಿ ಗತಿಯನ್ನೂ ಹೊಂದುವೆ. ಈ ಚರಿತ್ರೆಯು ಕಾಮಧೇನುಸ್ವರೂಪವೆಂದು ತಿಳಿ. ತ್ರಿಮೂರ್ತಿಗಳೇ ಈ ಕಲಿಯುಗದಲ್ಲಿ ನರಜನ್ಮದಲ್ಲಿ ಅವತರಿಸಿದ್ದಾರೆ. ಭೂಭಾರವನ್ನಿಳುಹಿ ಭಕ್ತರನ್ನು ಸಲಹುವದಕ್ಕಾಗಿ ಅವತರಿಸಿದ್ದಾರೆ ಎಂದು ಹೇಳಿದರು. ಇದನ್ನು ಕೇಳಿ ಶಿಷ್ಯನು ಸ್ವಾಮಿಾ ತ್ರಿಮೂರ್ತಿಗಳು ನರಜನ್ಮದಲ್ಲಿ ಅವತರಿಸಿದುದು ಏಕೆ? ಎಂಬುದನ್ನು ನನಗೆ ವಿಸ್ತಾರವಾಗಿ ನಿರೂಪಿಸಿರಿ ಎಂದು ಪ್ರಾರ್ಥಿಸಿದನು. ಆಗ ಸಿದ್ಧರು ಶಿಷ್ಯನೇ ಕೇಳು: ತ್ರಿಮೂರ್ತಿಗಳಲ್ಲಿ ಬ್ರಹ್ಮನಿಗೆ ರಜೋಗುಣವೂ ವಿಷ್ಣುವಿಗೆ ಸತ್ವಗುಣವೂ ಶಂಕರನಿಗೆ ತಮೋಗುಣವೂ ಸಹಜವಾಗಿರುವುವು. ಬ್ರಹ್ಮನು ಸೃಷ್ಟಿಯನ್ನೂ ವಿಷ್ಣುವು ರಕ್ಷಣೆಯನ್ನೂ ಈಶ್ವರನು ಸಂಹಾರವನ್ನೂ ಮಾಡುವರು ಕಾರಣವಿಲ್ಲದೆ ಕಾರ್ಯಗಳಾಗಲಾರವು. ಪೂರ್ವದಲ್ಲಿ ಏಕಾದಶೀ ವ್ರತಸ್ಥನಾದ ಅಂಬರೀಷನ ನಿಮಿತ್ತವಾಗಿ ವಿಷ್ಣುವು ಅವತಾರಗಳನ್ನೆತ್ತಿದನು. ಇದರ ಕಾರಣವನ್ನು ವಿಸ್ತಾರದಿಂದ ಹೇಳುವೆನು ಕೇಳು. ಅಂಬರೀಷರಾಜನು ಏಕಾದಶೀ ವ್ರತವನ್ನು ಮಾಡುತ್ತಾ, ಅತಿಥಿಗಳನ್ನು ಪೂಜಿಸುತ್ತಾ, ದೃಢಚಿತ್ತನಾಗಿ ಭಕ್ತಿಯಿಂದ ಹರಿಯನ್ನು ಧ್ಯಾನಿಸುತ್ತಾ ಇರುತ್ತಿದ್ದನು. ಇವನ ವ್ರತಭಂಗ ಮಾಡಬೇಕೆಂದು ಛಲವುಳ್ಳವನಾದ ದೂರ್ವಾಸ ಋಷಿಯು ಇವನ ಹತ್ತಿರಕ್ಕೆ ಅತಿಥಿಯಾಗಿ ಬಂದನು. ಆ ದಿನ ಒಂದು ಘಳಿಗೆಯುಳ್ಳ ಸಾಧನ ದ್ವಾದಶಿಯಾಗಿತ್ತು. ಇವರು ಬಂದುದನ್ನು ನೋಡಿ ಅಂಬರೀಷರಾಜನು ವಂದಿಸಿ, ಅರ್ಘ್ಯಪಾದ್ಯಾದಿಗಳಿಂದರ್ಚಿಸಿ, ಉಪಚರಿಸಿ ಸ್ವಾಮಿಾ, ಈ ದಿನ ಸಾಧನ ದ್ವಾದಶಿಯಾಗಿರುವುದು. ತಾವುಗಳು ಸ್ನಾನಮಾಡಿ ನಿತ್ಯಕರ್ಮಾದಿ

ಗಳನ್ನು ಮುಗಿಸಿಕೊಂಡು ಜಾಗ್ರತೆಯಾಗಿ ಭೋಜನಕ್ಕೆ ದಯಮಾಡಿ ಸಿರಿ ಎಂದು ವಿಜ್ಞಾಪಿಸಿದನು ಆಗ ದೂರ್ವಾಸನು ನದಿಗೆ ಹೋಗಿ ಸ್ನಾನ ಮಾಡಿ ಸಾವಕಾಶದಿಂದ ನಿತ್ಯಕರ್ಮಗಳನ್ನು ಮಾಡುತ್ತಿದ್ದನು ಸಾಧನದ ಒಂದು ಘಳಿಗೆಯು ಆಗುತ್ತಾ ಬಂತು ಆಗ ವ್ರತ ಭಂಗವಾದೀತೆಂದು ಅಂಬರೀಷನು ತೀರ್ಥವನ್ನು ಮಾತ್ರ ತೆಗೆದುಕೊಂಡನು ಋಷಿಗಳಿಗೋಸ್ಕರ ದಿವ್ಯವಾದ ಪಕ್ವಾನ್ನಗಳನ್ನುಮಾಡಿಸಿ ಸಿದ್ಧಪಡಿಸಿದನು ಆಗ ದೂರ್ವಾಸನು ಬಂದು ನೋಡಿ ದುರಾತ್ಮನಾದ ಅಂಬರೀಷನೇ, ಅತಿಥಿಯನ್ನು ಬಿಟ್ಟು ಭೋಜನಮಾಡಿದೆಯಾ ? ಇದಕ್ಕಾಗಿ ಶಾಪವನ್ನು ತೆಗೆದುಕೋ ಎಂದು ಹೇಳಿದನು.

ಆಗ ಅಂಬರೀಷನು ಭಕ್ತವತ್ಸಲನಾದ ನಾರಾಯಣನೇ ! ಶರಣಾಗತ ರಕ್ಷಕನೆಂಬ ಬಿರುದುಳ್ಳವನೇ, ಸಲಹೆಂದು ಪ್ರಾರ್ಥಿಸಿದನು ಭಕ್ತವತ್ಸಲನಾದ ನಾರಾಯಣನು ಕರುವನ್ನು ಕಂಡು ಹಸುವು ಓಡಿಬರುವಂತೆ ಇಲ್ಲಿಗೆ ಬಂದು, ಎಲೈ ದೂರ್ವಾಸನೇ, ಈ ಅಂಬರೀಷನಿಗೆ ಕೊಡುವ ಶಾಪವನ್ನು ನನಗೆ ಕೊಡುವವನಾಗು ನಾನು ಇವನನ್ನು ರಕ್ಷಿಸುವೆನು ಎಂದು ಹೇಳಿದನು ಆಗ ಜ್ಞಾನಿಯಾದ ದೂರ್ವಾಸನು ಭೂಭಾರ ಹರಣದ ಕಾರಣಕ್ಕಾಗಿ ಮುಂದಿನ ಮಾತನ್ನು ಹೇಳುವೆನು ಶ್ರೀಹರಿಯೇ' ನೀನು ಭೂಭಾರವನ್ನು ಪರಿಹರಿಸಿ ಉಪಕಾರ ಮಾಡಬೇಕಾದುದರಿಂದ ಹತ್ತುಬಾರಿ (ದಶಾವತಾರ) ಹುಟ್ಟುವವನಾಗು ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ಸಂರಕ್ಷಿಸುವವನಾಗು ಎಂದು ಶಾಪವನ್ನು ಕೊಟ್ಟನು ಈ ಶ್ರೀಹರಿಯ ಈ ದಶಾವತಾರದ ಕಥೆಗಳು ಶ್ರೀಮದ್ಭಾಗವತದಲ್ಲಿ ವಿಸ್ತಾರವಾಗಿ ಹೇಳಿದೆ ಈ ಶ್ರೀಹರಿಯ ಅವತಾರದ ಕಾರಣಗಳು ಕೆಲವು ಪ್ರಕಟವಾಗಿಯೂ ಕೆಲವು ಪ್ರಕಟವಾಗದೆಯೂ ಉಂಟಾಗುವುವು ಇದನ್ನು ಬ್ರಹ್ಮಜ್ಞಾನಿಗಳು ತಿಳಿದಿರುವರು ತ್ರಿಮೂರ್ತಿಗಳು ಅನಸೂಯೆಯ ಮನೆಯಲ್ಲಿ ಅವತರಿಸಿದುದನ್ನು ಕೇಳು ಎಂದರು ಆಗ ನಾಮಧಾರಕನು ಸ್ವಾಮಿಗಳೇ, ಸಿದ್ಧಮುನಿವರ್ಯರೇ ! ಅನಸೂಯಾತ್ರಿಮುನಿಗಳಿಗೆ ತ್ರಿಮೂರ್ತಿಗಳು ಹೇಗೆ ಪುತ್ರರಾದರು ? ಅತ್ರಿ ಋಷಿಗಳು ಯಾರ ಪುತ್ರರು ? ಮೂಲ ಪುರುಷರು ಯಾರು ? ಇದನ್ನು ವಿಸ್ತಾರವಾಗಿ ಹೇಳಬೇಕೆಂದು ಬಿನ್ನವಿಸಿದನು, ಎಂದು ಸರಸ್ವತೀಗಂಗಾ

ಧರನು ಗುರುಚರಿತ್ರೆಯನ್ನು ವಿಸ್ತಾರವಾಗಿ ಹೇಳಿದನು. ಇದನ್ನು ಕೇಳಿದರೆ ಸಕಲೇಷ್ಟಗಳೂ ಸಿದ್ಧಿಸುವುವು ಎಂಬಲ್ಲಿಗೆ ಗುರುಚರಿತ್ರೆಯಲ್ಲಿ ಅಂಬರೀಷೋಪಾಖ್ಯಾನವೆಂಬ ಮೂರನೇ ಅಧ್ಯಾಯವು ಮುಗಿದುದು.

|| ಶ್ರೀ ಗುರುದೇವನಮಃ ||

## ನಾಲ್ಕನೆಯ ಅಧ್ಯಾಯವು.

ಸಿದ್ಧರು—ನಾಮಧಾರಕನೇ, ನೀನು ಕೇಳಿದುದು ಸಾಧುವಾದುದು. ನಿನ್ನ ಭಕ್ತಿಯೂ ಸಾಧುವಾದುದು. ನಾನು ಹೇಳುವುದನ್ನು ಕೇಳು. ಪೂರ್ವದಲ್ಲಿ ಸೃಷ್ಟಿಯು ಇರಲಿಲ್ಲ. ಆಪ್ತೋ ನಾರಾಯಣಃ ಎಂಬ ವಾಕ್ಯದಂತೆ ಜಗತ್ತೆಲ್ಲವೂ ಜಲಮಯವಾಗಿತ್ತು. ಪ್ರಪಂಚವನ್ನು ಸೃಷ್ಟಿಸಬೇಕೆಂಬ ಇಚ್ಛೆಯಿಂದ ಶ್ರೀಮನ್ನಾರಾಯಣನು ಒಂದು ಅಂಡವನ್ನು ನಿರ್ಮಿಸಿದನು. ಇದೇ ಬ್ರಹ್ಮಾಂಡವು. ಇದು ಒಡೆದು ಎರಡು ಭಾಗವಾಯಿತು. ಇದರಿಂದ ಹದಿನಾಲ್ಕು ಲೋಕಗಳು ಉತ್ಪನ್ನವಾದುವು. ಮುಂದಿನ ಸೃಷ್ಟಿಯನ್ನು ಮಾಡುವುದಕ್ಕೋಸ್ಕರವಾಗಿ ಏಳು ಮಂದಿಗಳು ಬ್ರಹ್ಮನಿಗೆ ಮಾನಸ ಪುತ್ರರಾದರು. ಮರೀಚಿ ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠರೆಂಬುವರೇ ಈ ಮಾನಸ ಪುತ್ರರು. ಈ ಅತ್ರಿಮುನಿಗಳ ಹೆಂಡತಿಯಾದ ಪತಿವ್ರತೆಯಾದ ಅನಸೂಯಾದೇವಿಯನ್ನು ಲೋಕಮಾತೆ ಎಂದು ತಿಳಿ. ಈಕೆಯ ಸೌಂದರ್ಯವನ್ನು ವರ್ಣಿಸಲು ಯಾರು ಶಕ್ತರು? ಪೂರ್ಣಚಂದ್ರನೇ ಈಕೆಯ ಪುತ್ರನು. ಆದುದರಿಂದ ಈಕೆಯ ರೂಪವನ್ನು ವರ್ಣಿಸುವುದೇಕೆ? ಈಕೆಯು ಪತಿಸೇವೆಯನ್ನು ಅತಿಯಾಗಿ ಮಾಡುತ್ತಿದ್ದಳು. ಈಕೆಯು ಸ್ವರ್ಗದ ಐಶ್ವರ್ಯವನ್ನು ಬೇಗ ತೆಗೆದುಕೊಳ್ಳುವಳೆಂದು ದೇವತೆಗಳು ಚಿಂತಿಸುತ್ತಿದ್ದರು. ಸುರರಾಜನಾದ ಇಂದ್ರನು ತ್ರಿಮೂರ್ತಿಗಳ ಹತ್ತಿರ ಹೋಗಿ ವಿಜ್ಞಾಪಿಸುವವನಾದನು.

ಮಹಾಸ್ವಾಮಿ! ಅತ್ರಿಮುನಿಗಳ ತಪೋಮಹಿಮೆಯನ್ನೂ ಅನಸೂಯಾದೇವಿಯ ಪಾತಿವ್ರತ್ಯ ಮಹಿಮೆಯನ್ನೂ ವರ್ಣಿಸಲಶಕ್ಯವು.

ಈಕೆಯ ಮಹಿಮೆಯನ್ನು ಕೇಳಿರಿ. ಈ ಅನಸೂಯಾದೇವಿಯು ಮನ ದಿಂದಲೂ ಮಾತಿನಿಂದಲೂ ದೇಹದಿಂದಲೂ ಭಕ್ತಿಯಿಂದಲೂ ಪತಿಯನ್ನು ಸೇವಿಸುತ್ತಿರುವಳು. ಈಕೆಯ ಆಚಾರವನ್ನು ನೋಡಿ ಸೂರ್ಯನಾರಾಯ ಣನು ಗಗನದಲ್ಲಿ ಈಕೆಗೆ ಉಷ್ಣವಾದೀತೆಂದು ಮಂದಕಿರಣನಾಗಿರುವನು. ಅಗ್ನಿಯೂ ಹೆದರಿ ತಂಪಾಗಿರುವನು. ವಾಯುವೂ ಮೆಲ್ಲಗೆ ಬೀಸುವನು. ಭೂದೇವಿಯೂ ನಮ್ರಳಾಗಿಹಳು. ಎಲ್ಲಿ ಶಾಪವನ್ನು ಕೊಡುವಳೋ ಎಂದು ನಾವೆಲ್ಲರೂ ಭೀತರಾಗಿರುವೆವು. ಈಕೆಯು ಉತ್ತಮವಾದ ಪದವಿಯನ್ನು ಹೊಂದತಕ್ಕವಳಾಗಿಯೂ, ಅಮೃತವನ್ನು ಅಪಹರಿಸುವವಳಾಗಿಯೂ ಇರುವಳು. ನಾವು ಈಕೆಯ ಚಿತ್ತಾನುಸಾರವಾಗಿ ಸೇವಿಸುತ್ತಿರುವೆವು, ಎಂದು ಬಿನ್ನವಿಸಿದರು. ಆಗ ತ್ರಿಮೂರ್ತಿಗಳು ಕುಪಿತರಾಗಿ ಅಂಥಾ ಪತಿ ವ್ರತೆಯು ಎಲ್ಲಿರುವಳು? ನೋಡೋಣವೆಂದೂ ಈಕೆಯ ಪಾತಿವ್ರತ್ಯವನ್ನು ಭಂಗಮಾಡಿ ಯಮಾಲಯಕ್ಕೆ ಕಳುಹಿಸಿ ಬರೋಣವೆಂದೂ ಯೋಚಿಸಿ ಈ ತ್ರಿಮೂರ್ತಿಗಳು ಭಿಕ್ಷುವೇಷವನ್ನು ಧರಿಸಿ ಅತ್ರಿಮುನಿಗಳ ಆಶ್ರಮಕ್ಕೆ ಅತಿಥಿಗಳಾಗಿ ಬಂದರು.

ಅತ್ರಿಮುನಿಗಳು ನಿತ್ಯಕರ್ಮಾನುಷ್ಠಾನಕ್ಕೆ ಹೊರಟು ಹೋಗಿದ್ದರು. ಆಗ ತ್ರಿಮೂರ್ತಿಗಳು ಬಂದು, ಅನುಸೂಯಾ ದೇವಿಯೇ, ನಮಗೆ ಹಸಿವು ಬಹಳವಾಗಿದೆ. ನಮಗೆ ಬೇಗ ಅನ್ನವನ್ನು ಕೊಡುವವಳಾಗು. ನಿಮ್ಮ ಆಶ್ರಮದಲ್ಲಿ ಅಭ್ಯಾಗತರಿಗೆ ಸಮಾರಾಧನೆಯಾಗುವುದೆಂದು ಕೇಳಿ ನಾವು ಬಂದೆವು. ಇಚ್ಛಾಭೋಜನವನ್ನು ನೀವು ಕೊಡುವಿರೆಂದು ನಾವು ಬಂದೆ ವೆಂದರು. ಈ ಮಾತನ್ನು ಕೇಳಿ ಅನಸೂಯೆಯು ಎಲ್ಲರಿಗೂ ವಂದಿಸಿ ಅವರ ಚರಣಗಳನ್ನು ತೊಳೆದು ಅರ್ಘ್ಯ ಪಾದ್ಯ ಗಂಧ ಪುಷ್ಪಾದಿಗಳಿಂದ ಪೂಜಿಸಿದಳು.

ಆಗ ತ್ರಿಮೂರ್ತಿಗಳು ಎಲೌ ದೇವಿಯೇ! ಅತ್ರಿಮುನಿಗಳು ಬಹಳ ಹೊತ್ತಿನಮೇಲೆ ಬರುವರು. ನಮಗೆ ಬೇಗ ಭೋಜನಮಾಡಿಸು ಎಂದರು. ಆಗ ಅನಸೂಯೆಯು ಇವರನ್ನು ಮಣೆಗಳ ಮೇಲೆ ಕುಳ್ಳಿರಿಸಿ ಪಕ್ವಾನ್ನಗಳನ್ನು ಸಿದ್ಧಪಡಿಸಿ ಅಭಿಘಾರಮಾಡಲು ಹಾಲನ್ನು ತಗೆದು ಕೊಂಡು ಬಂದಳು. ಆಗ ಆ ಭಿಕ್ಷುಗಳು ಎಲೌ ದೇವಿಯೇ, ನಾವು

ಬಹುದೂರದಿಂದ ಅತಿಥಿಗಳಾಗಿ ಬಂದೆವು ನಿನ್ನ ಸೌಂದರ್ಯವನ್ನು ನೋಡಿ ನಮಗೆ ಮತ್ತೊಂದು ಅಭೀಷ್ಟವುಂಟಾಗಿದೆ ಏನಂದರೆ, ನೀನು ಬೆತ್ತಲೆಯಾಗಿದ್ದು ನಮಗೆ ಅನ್ನವನ್ನು ಬಡಿಸಬೇಕು ಈ ವಿಷಯದಲ್ಲಿ ನೀನು ಏನು ಹೇಳುವಿ? ನಾವು ಬೇರೆಯಕಡೆಗೆ ಹೊರಟು ಹೋಗೋಣವೇ? ಎಂದು ಕೇಳಿದರು ಆಗ ಅನಸೂಯೆಯು ಈ ವಿಪ್ರರ ವಾಕ್ಯವನ್ನು ಕೇಳಿ ಚಿಂತಿಸಿ, ಇವರು ನನ್ನ ಮನಸ್ಸನ್ನು ಪರೀಕ್ಷಿಸಲು ಕಾರಣ ಪುರುಷರಾಗಿ ಬಂದಿರಬಹುದು ಎಂದು ಯೋಚಿಸಿ ಅತಿಥಿಗಳು ವಿಮುಖರಾಗಿ ಹೋದರೆ ನಮಗೆ ಹಾನಿಯು ತಪ್ಪದು ಇವರ ಮಾತನ್ನು ಮೀರುವುದೆಂತು? ನನ್ನ ಮನಸ್ಸು ನಿರ್ಮಲವಾಗಿರುವುದು ಪತಿಗಳ ತಪಃಫಲವೇ ಈ ಕಂಟಕದಿಂದ ನನ್ನನ್ನು ಸಲಹಲೆಂದು ಚಿಂತಿಸಿ, ಮಹಾಸ್ವಾಮಿ! ಹಾಗೆಯೇ ಆಗಲಿ, ಸ್ವಸ್ಥಚಿತ್ತದಿಂದ ಊಟಮಾಡಿರಿ, ಬೆತ್ತಲೆಯಾಗಿಯೇ ಬಡಿಸುವೆನು ಎಂದಳು ಈಕೆಯು ಪಾಕಶಾಲೆಗೆ ಹೋಗಿ ಪತಿಯ ಚರಣಗಳನ್ನು ನೆನೆದು ವಸ್ತ್ರವನ್ನು ತೆಗೆದಿಟ್ಟು ಅತಿಥಿಗಳು ನನ್ನ ಬಾಲಕರಾಗಲಿ! ಎಂದು ಹೇಳಿದಳು ಅನ್ನೋದಕಗಳನ್ನು ತೆಗೆದುಕೊಂಡು ಬರಲು ಈ ತ್ರಿಮೂರ್ತಿಗಳು ಮೂವರೂ ಬಾಲಕರಾಗಿ ಕುಳಿತಿದ್ದರು. ಇದನ್ನು ನೋಡಿ ಅನಸೂಯೆಯು ಭೀತಳಾಗಿ ಮತ್ತೆ ವಸ್ತ್ರವನ್ನು ಧರಿಸಿ ಅಳುತ್ತಿರುವ ಬಾಲಕರನ್ನೆತ್ತಿಕೊಂಡು ಹಸಿದ ಆ ಬಾಲಕರಿಗೆ ಸ್ತನ್ಯಪಾನ ಮಾಡಿಸಿದಳು ಈ ಬಾಲಕರು ತೃಪ್ತರಾದರು ಪತಿವ್ರತೆಯ ತಪಃಪ್ರಭಾವವು ಹೇಗಿರುವುದು ನೋಡು ತ್ರಿಮೂರ್ತಿಗಳಲ್ಲಿ ಒಬ್ಬನಾದ ವಿಷ್ಣುವು ಉದರದಲ್ಲಿ ಹದಿನಾಲ್ಕು ಲೋಕಗಳನ್ನೂ ಸಪ್ತಸಮುದ್ರಗಳನ್ನೂ ಬಡಬಾಗ್ನಿಯನ್ನೂ ಧರಿಸಿದವನಾಗಿದ್ದರೂ ಈಗ ಈಕೆಯ ಸ್ತನ್ಯಪಾನದಿಂದ ತೃಪ್ತಿಹೊಂದಿದನು. ಹಗಲು ರಾತ್ರಿಯಲ್ಲಿಯೂ ಸೃಷ್ಟಿ ಮಾಡುವ ಬ್ರಹ್ಮನೂ ಈಕೆಯ ಸ್ತನ್ಯಪಾನದಿಂದ ತೃಪ್ತನಾದನು. ಹಣೆಗಣ್ಣುಳ್ಳವನಾದ ಕರ್ಪೂರದಂತೆ ಗೌರವರ್ಣವುಳ್ಳವನಾದ ಪಂಚವಕ್ತ್ರನಾದ ಕಾಲಾಗ್ನಿರುದ್ರನೂ ಈಕೆಯ ಸ್ತನ್ಯಪಾನಮಾಡಿದನು. ಇದು ಅತ್ರಿ ಋಷಿಗಳ ತಪಃಶಕ್ತಿಯ ಫಲವೇ? ಅತ್ರಿ ಪತ್ನಿಯಾದ ಅನಸೂಯೆಯು ಈರೀತಿ ತ್ರಿಮೂರ್ತಿಗಳಿಗೂ ಜನನಿಯಾಗಿ ಎಲ್ಲಾ ಲೋಕಗಳಲ್ಲಿಯೂ ಪ್ರಸಿದ್ಧಳಾದಳು. ಈಕೆಯ ಸಮಾನರು ಯಾರು? ಈಕೆಯು ಈ

ಬಾಲಕರನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಆಟವನ್ನಾಡಿಸುತ್ತಾ ತೊಟ್ಟಿಲಲ್ಲಿ ಮಲಗಿಸಿ ಗಾನವ ಮಾಡುತ್ತಾ ಉಪನಿಷದರ್ಥವನ್ನುಳ್ಳ ಗಾನವನ್ನು ಸಪ್ತಸ್ವರಗಳಲ್ಲಿ ಹಾಡುತ್ತಿದ್ದಳು. ಆಗ ಮಧ್ಯಾಹ್ನ ಕಾಲವಾಗಿತ್ತು. ಅತ್ರಿಮುನಿಯು ತನ್ನ ಆಶ್ರಮಕ್ಕೆ ಬಂದು ಅನಸೂಯೆಯು ಬಾಲಕರನ್ನಾಡಿಸುತ್ತಿರುವುದನ್ನು ನೋಡಿ, ಇವರು ಯಾರ ಮಕ್ಕಳೆಂದು ಕೇಳಿದನು. ಅನಸೂಯೆಯು ನಡೆದ ವೃತ್ತಾಂತವನ್ನೆಲ್ಲಾ ಹೇಳಿದಳು. ಅತ್ರಿಋಷಿಯು ಜ್ಞಾನದೃಷ್ಟಿಯಿಂದ ನೋಡಿ ಇವರು ತ್ರಿಮೂರ್ತಿಗಳೆಂದು ತಿಳಿದು ಇವರಿಗೆ ನಮಸ್ಕರಿಸಿದನು. ಆಗ ತ್ರಿಮೂರ್ತಿಗಳು ಸಂತೋಷಿತರಾಗಿ ಅಲ್ಲಿ ತೊಟ್ಟಿಲಲ್ಲಿಯೇ ಇದ್ದು ಪ್ರಸನ್ನರಾಗಿ ನಿನ್ನ ಮನಸ್ಸಿಗೆ ಬಂದ ವರವನ್ನು ಕೇಳೆಂದು ಹೇಳಿದರು. ಆಗ ಅತ್ರಿಮುನಿಯು ಅನಸೂಯೆಯನ್ನು ಕುರಿತು ಈಗ ನೀನು ಇವರಲ್ಲಿ ಯಾವ ವರವನ್ನಾದರೂ ಕೇಳೆಂದನು.

ಆಗ ಅನಸೂಯೆಯು ಪ್ರಾಣೇಶ್ವರನೇ, ಈ ಮೂರ್ತಿಗಳು ನಿಮ್ಮ ಭಕ್ತಿಗೆ ಮೆಚ್ಚಿದರು. ಈ ಮೂರು ಮಂದಿ ಬಾಲಕರೂ ನನಗೆ ಪುತ್ರರಾಗಲಿ ಎಂದೂ ಇವರು ಮೂವರೂ ಏಕರೂಪವುಳ್ಳವರಾಗಿರಲಿ ಎಂದೂ ವರವನ್ನು ಕೇಳುವೆನೆಂದಳು. ಈ ವರವನ್ನು ಈಕೆಯು ಕೇಳಲು ತ್ರಿಮೂರ್ತಿಗಳು ಹಾಗೆಯೇ ಆಗಲೆಂದು ವರವನ್ನಿತ್ತು ಸ್ವಸ್ಥಾನಗಳಿಗೆ ತೆರಳಿದರು. ತ್ರಿಮೂರ್ತಿಗಳು ಆಕೆಯ ಮನೆಯಲ್ಲಿ ಬಾಲಕರಾಗಿದ್ದರು. ಈಕೆಯು ಇವರನ್ನು ತನ್ನ ಬಾಲಕರಂತೆ ಕಾಪಾಡಿ ಹೆಸರನ್ನಿಟ್ಟಳು.

ಬ್ರಹ್ಮಮೂರ್ತಿಯೇ ಚಂದ್ರನಾದನು, ವಿಷ್ಣುಮೂರ್ತಿಯೇ ದತ್ತಾತ್ರೇಯನಾದನು. ಈಶ್ವರನೇ ದೂರ್ವಾಸನಾದನು. ಇವರೇ ಅನಸೂಯೆಯ ಮಕ್ಕಳು. ಈ ದೂರ್ವಾಸನೂ ಚಂದ್ರನೂ ತಾಯಿಯ ಹತ್ತಿರ ಎದ್ದುನಿಂತು, ಕೌತುಕದಿಂದ ತಪಸ್ಸನ್ನು ಮಾಡುವುದಕ್ಕೆ ಹೊರಡಬೇಕೆಂದು ಯೋಚಿಸಿ ಅನುಜ್ಞೆಯನ್ನು ಕೊಡಬೇಕೆಂದು ಪ್ರಾರ್ಥಿಸಿದರು.

ದೂರ್ವಾಸನು—ಎಲೌ ಅನಸೂಯೇ! ಋಷಿಗಳಂತೆ ಸಕಲ ತೀರ್ಥಗಳಲ್ಲಿ ಸಂಚರಿಸಿ ನಿತ್ಯಕರ್ಮಾನುಷ್ಠಾನ ಮಾಡಲು ನನಗೆ ಅನುಜ್ಞೆಯನ್ನೀಯಬೇಕೆಂದು ಬೇಡಿಕೊಂಡನು. ಚಂದ್ರನು, ಮಾತೆಯೇ! ಚಂದ್ರಮಂಡಲದಲ್ಲಿ ವಾಸಿಸುತ್ತಾ ನಿತ್ಯವೂ ತಮ್ಮ ಚರಣಸಂದರ್ಶನ ಮಾಡುತ್ತಾ

ಇರಲು ನನಗೆ ಅಪ್ಪಣೆ ಕೊಡಿರಿ ಎಂದನು ದತ್ತಾತ್ರೇಯನು ತ್ರಿಮೂರ್ತಿ ಸ್ವರೂಪನಾಗಿದ್ದಾನೆ ತ್ರಿಮೂರ್ತಿಗಳೂ ಐಕ್ಯವಾಗಿ ಈ ದತ್ತಾತ್ರೇಯರಾಗಿ ನಿಂತರು ದೂರ್ವಾಸನೂ ಚಂದ್ರನೂ ಜನನಿಯ ಆಜ್ಞೆಯನ್ನು ಪೊಂದಿ ಹೊರಟು ಹೋದರು

ಹೀಗೆ ತ್ರಿಮೂರ್ತಿಗಳು ಐಕ್ಯರಾಗಿ ದತ್ತಾತ್ರೇಯರಾಗಿ ಶ್ರೀ ಗುರುಗಳ ಮೂಲಪೀಠಸ್ವರೂಪರಾಗಿ ನಿಂತರು, ಎಂದು ಸಿದ್ಧರು ಹೇಳಲು ನಾಮಧಾರಕನು ಸಂತೋಷದಿಂದ ಸಿದ್ಧರನ್ನು ಕುರಿತು, ಜಯಸಿದ್ಧಯೋಗೀಶ್ವರನೇ, ಭಕ್ತಜನ ಮನೋಹರನೇ, ಸಂಸಾರ ಸಾಗರವನ್ನು ದಾಟಿಸತಕ್ಕವನೇ, ಜ್ಞಾನಮೂರ್ತಿಯೇ, ಕೃಪಾಸಿಂಧುವೇ, ನಿಮ್ಮ ದಯೆಯಿಂದ ನನಗೆ ಸಹಜವಾದ ಜ್ಞಾನವುಂಟಾಯಿತು ತಾವು ದತ್ತಾತ್ರೇಯರ ಅವತಾರದ ಸಂಗತಿಯನ್ನು ಹೇಳಿದಿರಿ ಮುಂದೆ ಅವತರಿಸುವ ಶ್ರೀ ಗುರುವಿನ ಚರಿತ್ರೆಯನ್ನು ವಿಸ್ತಾರವಾಗಿ ನನಗೆ ದಯೆಯಿಟ್ಟು ಹೇಳಬೇಕೆಂದು ಕೇಳಿದನು

ಎಂದೀಪರಿಯಿಂದ ಸರಸ್ವತೀಗಂಗಾಧರನು ಈ ಚರಿತ್ರೆಯನ್ನು ಹೇಳಿದನು ಇದನ್ನು ಕೇಳುವುದರಿಂದ ಸಕಲೇಷ್ಟಗಳೂ ಉಂಟಾಗುವುವು, ಎಂಬಲ್ಲಿಗೆ ಶ್ರೀ ಗುರುಚರಿತಾಮೃತದಲ್ಲಿ ೪ ನೇ ಅಧ್ಯಾಯವು ಮುಗಿದುದು.

|| ಶ್ರೀ ಗುರವೇನಮಃ ||

## ೫ ನೆಯ ಅಧ್ಯಾಯವು.

ಶ್ರೀ ಗಣೇಶಾಯನಮಃ || ಬಳಿಕ ಸಿದ್ಧಮುನಿಯು ಭಕ್ತನಾದ ನಾಮಧಾರಕನೇ, ಈರೀತಿಯಾಗಿ ಅಂಬರೀಷನಿಗೋಸ್ಕರವಾಗಿ ಶ್ರೀ ಹರಿಯು ದಶಾವತಾರಗಳನ್ನು ಮಾಡಿದನು. ಈ ದಶಾವತಾರಗಳು ಯಾವುವೆಂದರೆ:— ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ಶ್ರೀರಾಮ, ಕೃಷ್ಣ, ಬೌದ್ಧ, ಕಲ್ಕಿ, ಇವು ಪ್ರಸಿದ್ಧಗಳಾಗಿವೆ. ಈ ಕಲಿಯುಗದಲ್ಲಿ ಅಜ್ಞಾನಿಗಳಾದ ಬ್ರಾಹ್ಮಣರು ಆಚಾರ ಹೀನರಾಗಿರುವರು,

ಭಕ್ತರನ್ನು ಸಲಹುವುದಕ್ಕಾಗಿ ಶ್ರೀ ಗುರುನಾಥನು ಸಗರ ಪುತ್ರರಿಗೋಸುಗವಾಗಿ ಭಗೀರಥನು ಗಂಗೆಯನ್ನು ತಂದಂತೆ ಅವತರಿಸಿದನು

ಪೀಠಾಪುರದಲ್ಲಿ ಆಪಸ್ತಂಭ ಶಾಖೆಯ ಆಪಳರಾಜನೆಂಬ ಬ್ರಾಹ್ಮಣನಿದ್ದನು ಈತನ ಪತ್ನಿಯಾದ ಸುಮತಿಯು ಪತಿವ್ರತೆಯಾಗಿಯೂ ಅತಿಥಿ ಪೂಜೆಯಲ್ಲಿ ಭಕ್ತಿಯುಕ್ತಳಾಗಿಯೂ ಇದ್ದಳು ಹೀಗಿರಲು ಒಂದು ದಿನ ಶ್ರೀ ದತ್ತಾತ್ರೇಯರು ಅತಿಥಿವೇಷದಿಂದ ಈತನ ಮನೆಗೆ ಬಂದರು.

ಆ ದಿನ ಅಮಾವಾಸ್ಯೆಯೂ ಶ್ರಾದ್ಧ ದಿನವೂ ಆಗಿತ್ತು ಆ ದಿನ ಬ್ರಾಹ್ಮಣರ ಭೋಜನವಾಗುವ ಮೊದಲೇ ಈ ಪತಿವ್ರತೆಯು ಈ ಅತಿಥಿಗೆ ಭಿಕ್ಷೆಯನ್ನು ಹಾಕಿದಳು ಆಗ ಶ್ರೀಗುರುವು ಮೆಚ್ಚಿ ತ್ರಿಮೂರ್ತಿ ಸ್ವರೂಪವನ್ನು ತೋರಿಸಿದರು ಆಗ ಆಕೆಯು ಭಕ್ತಿಯಿಂದ ಓಡಿಬಂದು ವಂದಿಸಿದಳು ಆಗ ದತ್ತಾತ್ರೇಯರು ಆಕೆಯನ್ನು ಕುರಿತು ಬೇಕಾದ ವರವನ್ನು ಕೇಳೆಂದರು ಆಗ ಸುಮತಿಯು ಇದನ್ನು ಕೇಳಿ ಅಂಜಲೀ ಬದ್ಧಳಾಗಿ ಜಯ ಜಯ ಜಗನ್ನಾಥನೇ! ನೀವು ಭವಸಾಗರವನ್ನು ದಾಟಿಸುವವರಾಗಿರುವಿರಿ. ಸರ್ವ ಭೂತಗಳಲ್ಲಿಯೂ ದಯಾಪರರಾಗಿರುವಿರಿ ಎಂದು ಪುರಾಣಗಳು ಹೇಳುತ್ತವೆ ಭಕ್ತವತ್ಸಲನೇ, ನಿನ್ನ ಕೀರ್ತಿಯನ್ನು ವರ್ಣಿಸುವುದೆಂತು? ನಿಮ್ಮ ಮಾತು ಸುಳ್ಳಾಗದು ಸ್ವಾಮಿ! ಧ್ರುವನಿಗೆ ಸ್ಥಿರ ಪದವಿಯನ್ನಿತ್ತಿರಿ. ವಿಭೀಷಣನಿಗೆ ಲಂಕಾರಾಜ್ಯವನ್ನಿತ್ತಿರಿ ಭಕ್ತಾಧಾರನೇ, ಭಕ್ತರಿಗೋಸುಗ ಹದಿನಾಲ್ಕು ಲೋಕಗಳಲ್ಲಿಯೂ ಚರಾಚರ ಪ್ರಾಣಿಗಳಲ್ಲಿಯೂ ಅವತರಿಸುವಿರಿ ದಯಾಮಯನೇ, ನನ್ನ ಮನದ ಇಷ್ಟಾರ್ಥವನ್ನು ಪೂರ್ಣಮಾಡು ಅನಾಥರಕ್ಷಕನಾದ ನಾರಾಯಣನೇ! ಎಂದು ಚರಣಗಳಿಗೆ ವಂದಿಸಿದಳು.

ಈ ಕರುಣ ವಚನವನ್ನು ಕೇಳಿ ಗುರುವು ಸಂತೋಷಿಸಿ ಸಮಾಧಾನ ಮಾಡಿ, ಜನನಿಯೆ! ನಿನ್ನ ಇಷ್ಟವೇನು? ಎಂದು ಕೇಳಿದರು.

ಆಗ ಪತಿವ್ರತೆಯು ಸ್ವಾಮಿ! ನೀವು ಯಾವ ಜನನಿ ಎಂಬ ಶಬ್ದವನ್ನು ಹೇಳಿದಿರೋ ಈ ಮಾತನ್ನೇ ನಿಜವಾಗಿ ಮಾಡಿರಿ. ನನಗೆ ಅನೇಕ ಪುತ್ರರಾದರೂ ಎಲ್ಲರೂ ಮೃತರಾದರು. ಈಗ ಇರುವ ಬಬ್ಬ

ಮಗನಾದರೂ ಆತನಿಗೆ ಕಣ್ಣು ಕಾಲುಗಳಿಲ್ಲ ನನಗೆ ಯೋಗ್ಯನಾದ ಪುತ್ರ ನಾಗಲಿಲ್ಲ ಏನುಮಾಡಲಿ ? ಪುತ್ರರಿಲ್ಲದ ಜನ್ಮವೇಕೆ ? ಜ್ಞಾನಿಯೂ, ಪುರಾಣಪುರುಷನೂ, ಜಗದ್ವಂದ್ಯನೂ, ನಿಷ್ಕಾಂತೆಯೇ ವೇದಸದೃಶನೂ ಆಗಿರುವ ಕುಮಾರನು ನನಗಾಗಲಿ ಎಂದು ಕೇಳಿದಳು.

ಈ ಮಾತನ್ನು ಕೇಳಿ ದತ್ತಾತ್ರೇಯರು, ಭಕ್ತರಕ್ಷಣೆಗಾಗಿ ಪ್ರಸನ್ನ ರಾಗಿ ಅಮ್ಮಾ ! ನಿನಗೆ ಅಂಥಾ ಪುತ್ರನಾಗುವನು ಅವನು ಈ ಕಲಿ ಯುಗದಲ್ಲಿ ಖ್ಯಾತಿವಂತನಾಗಿ ನಿನ್ನ ವಂಶವನ್ನುದ್ಧರಿಸುವನು ; ಆದರೆ ಆತನು ನಿನ್ನ ಹತ್ತಿರ ನಿಲ್ಲುವುದಿಲ್ಲ. ಜ್ಞಾನಿಯಾದ ಆತನು ನಿನ್ನ ಕಷ್ಟ ವನ್ನು ಪರಿಹರಿಸುವನು ಎಂದು ವರವನ್ನು ಕೊಟ್ಟು ಆ ತಪಸ್ವಿಯು ಅಂತರ್ಧಾನನಾದನು

ಆ ವಿಪ್ರವನಿತೆಯು ಮನದಲ್ಲಿ ಆಶ್ಚರ್ಯಪಟ್ಟಳು ತನ್ನ ಪತಿಗೆ ಈ ವಿಷಯವನ್ನು ಹೇಳಿದಳು. ದತ್ತಾತ್ರೇಯರು ಪುತ್ರನಾಗುವನೆಂದು ಆ ದಂಪತಿಗಳು ಸಂತೋಷಿಸಿದರು ಮಧ್ಯಾಹ್ನ ಕಾಲದಲ್ಲಿ ದತ್ತಾತ್ರೇಯರು ಬರುವರು, ಆಗ ಅವರು ವಿಮುಖರಾಗದಂತೆ ಅವರಿಗೆ ಭಿಕ್ಷೆಯನ್ನು ಹಾಕಬೇಕು

ಪಂಚಾಳೇಶ್ವರ ನಗರದ ಪಶ್ಚಿಮದಲ್ಲಿರುವ ಕರವೀರ ಕ್ಷೇತ್ರವೇ ದತ್ತಾತ್ರೇಯರ ಸ್ಥಾನವಾಗಿದೆ ನಾನಾ ವಿಧವಾದ ಭಿಕ್ಷುವೇಷಗಳನ್ನು ಧರಿಸಿ ದತ್ತರು ಬರುತ್ತಿರುವರು ಅವರನ್ನು ವಿಚಾರಿಸದೆ ಭಿಕ್ಷೆಯನ್ನು ಹಾಕು ಎಂದು ಆ ವಿಪ್ರನು ಹೇಳಿದನು ಆಗ ಆಕೆಯು ಸ್ವಾಮೀ, ಶ್ರಾದ್ಧಕಾಲದಲ್ಲಿ ಬ್ರಾಹ್ಮಣ ಭೋಜನಕ್ಕೆ ಪೂರ್ವದಲ್ಲಿ ಭಿಕ್ಷವನ್ನು ಯಾರಿ ಗೂ ಹಾಕಬಾರದೆಂದು ಹೇಳಿದಿರಿ ಎಂದಳು ಆಗ ಆ ವಿಪ್ರನು ಸಂತೋಷ ದಿಂದ ಪ್ರಿಯಳೇ, ಈಗ ಲಾಭವಾಯಿತು ನನ್ನ ಪಿತೃಗಳು ತೃಪ್ತರಾದರು. ನಾವು ಪಿತೃಗಳ ಹೆಸರಿನಿಂದ ಕರ್ಮವನ್ನು ಮಾಡಬೇಕು ಮತ್ತು ಅದನ್ನು ವಿಷ್ಣುವಿಗರ್ಪಿಸಬೇಕು ಸ್ವಾಮಿಯು ಸಾಕ್ಷಾತ್ತಾಗಿ ಬಂದು ನಮ್ಮ ಮನೆ ಯಲ್ಲಿ ಭಿಕ್ಷೆಯನ್ನು ಸ್ವೀಕರಿಸಿದನು ಪಿತೃಗಳೂ ಕೃತಾರ್ಥವಾಯಿತು, ತ್ರಿಮೂರ್ತಿಗಳ ಅವತಾರವಾದ ದತ್ತಾತ್ರೇಯರು ದರ್ಶನ ಕೊಟ್ಟುದರಿಂದ ನಮ್ಮ ಪಿತೃಗಳು ಸ್ವರ್ಗಸ್ಥರಾದರು. ನಿನ್ನ ತಾಯಿತಂದೆಗಳು ಧನ್ಯರು

ನೀನು ಕೇಳಿದ ವರದಂತೆ ನಿನಗೆ ಪುತ್ರನಾಗುವನು. ಇದರಲ್ಲಿ ಸಂಶಯ ವಿಲ್ಲವೆಂದು ತಿಳಿ ಎಂದನು.

ಈ ದಂಪತಿಗಳು ನಿಶ್ಚಿಂತರಾಗಿರಲು, ಈಕೆಯು ಗರ್ಭಿಣಿಯಾಗಿ ನವ ಮಾಸಾಂತ್ಯದಲ್ಲಿ ಸುದಿನದಲ್ಲಿ ಸುಪುತ್ರನನ್ನು ಪಡೆದಳು ಆ ವಿಪ್ರನು ಆಗ ಸ್ನಾನವಮಾಡಿ ಜಾತಕರ್ಮವನ್ನು ಮಾಡಿದನು. ಆಗ ವಿಪ್ರರೆಲ್ಲರೂ ಸೇರಿ ಆ ಮಗುವಿನ ಜಾತಕವನ್ನು ಮಾಡಿ ನೋಡಿ ಈತನು ತಪಸ್ವಿಯಾಗಿ, ದೀಕ್ಷಾ ಕರ್ತನಾಗಿ ಜಗದ್ಗುರುವಾಗುವನು ಎಂದರು. ಈ ದಂಪತಿಗಳು ಈ ಶಿಶು ವಿಗೆ ದತ್ತವರದಿಂದುದಿಸಿ ಕುಲವನ್ನುದ್ಧರಿಸಿದುದರಿಂದ ಶ್ರೀಪಾದ ನೆಂದು ಹೆಸರಿಟ್ಟರು. ಆಗ ವಿಪ್ರನು ಈ ಬಾಲಕನಿಗೆ ಏಳನೆಯ ವರ್ಷದಲ್ಲಿ ಉಪನಯನ ಮಾಡಿದನು ಈತನು ಬ್ರಹ್ಮಚಾರಿಯಾದೊಡನೆಯೇ ನಾಲ್ಕು ವೇದಗಳನ್ನೂ ತರ್ಕ ಮೀಮಾಂಸಾದಿ ಶಾಸ್ತ್ರಗಳನ್ನೂ ವಿಸ್ತಾರವಾಗಿ ಹೇಳತೊಡಗಿದನು ಇದನ್ನು ಕೇಳಿದವರೆಲ್ಲರೂ ವಿಸ್ಮಯದಿಂದ ಈ ವಟುವು ಯಾವನೋ ಕಾರಣ ಪುರುಷನಾಗಿ ಅವತರಿಸಿರುವನೆಂದು ಹೇಳು ತ್ತಿದ್ದರು. ಈ ವಟುವು ಆಚಾರವ್ಯವಹಾರ ವಿಷಯಗಳನ್ನೂ ಪ್ರಾಯ ಶ್ಚಿತ್ತಗಳನ್ನೂ ವೇದಾಂತ ಭಾಷ್ಯವನ್ನೂ ಎಲ್ಲಾ ವಿಪ್ರರಿಗೂ ಹೇಳುತ್ತಿ ದ್ದನು. ಈತನಿಗೆ ಹದಿನಾರು ವರ್ಷಗಳಾದುವು ತಂದೆತಾಯಿಗಳು ಈತನಿಗೆ ವಿವಾಹ ಮಾಡಬೇಕೆಂದು ಯೋಚಿಸಿ ಕುಮಾರನೊಡನೆ ಈ ವಿಷಯವನ್ನು ಹೇಳಲು, ಶ್ರೀಪಾದನು, ಆರ್ಯರೇ, ನೀವು ನನಗೆ ಮದುವೆ ಮಾಡಬೇಡಿರಿ. ನಾನು ವೈರಾಗ್ಯವೆಂಬ ಸ್ತ್ರೀಯನ್ನು ವರಿಸಿದ್ದೇನೆ ನನ್ನ ಕಾಮ್ಯಾರ್ಥವು ಈಕೆಯಲ್ಲಿರುವುದು ಈ ಸ್ತ್ರೀಯನ್ನು ಬಿಟ್ಟು ಲೋಕದಲ್ಲಿರುವ ಸ್ತ್ರೀಯರೆಲ್ಲರೂ ನನಗೆ ತಾಯಿಗೆ ಸಮಾನರು ಯೋಗ ವೆಂಬ ಸ್ತ್ರೀಯು ಹೊರತಾಗಿ ಬೇರೆ ಸ್ತ್ರೀಯರು ನನಗೆ ಬೇಡ ಎಂದನು. ಆಗ ತಾಯಿತಂದೆಗಳು ಮಗನ ಮಾತನ್ನು ಕೇಳಿ ಪೂರ್ವದಲ್ಲಿ ದತ್ತಾತ್ರೇ ಯರು ಹೇಳಿದುದು ನಿಜವಾಯಿತೆಂದು ತಿಳಿದರು.

ಆಗ ದಂಪತಿಗಳು ಬಾಲಕನೇ, ನೀನು ನಮ್ಮನ್ನು ರಕ್ಷಿಸುವಿ ಎಂದು ತಿಳಿದಿದ್ದೆವು ನೀನು ವೈರಾಗ್ಯವುಳ್ಳವನಾದೆ ಎಂದು ದುಃಖಿಸಿದರು ಆಗ ತಾಯಿಯು ಮನೋ ದುಃಖದಿಂದ ಕಣ್ಣಿನಲ್ಲಿ ನೀರನ್ನು ಸುರಿಸುತ್ತಾ

ಮೂರ್ಛಿಸಿದಳು. ಆಗ ಆ ಪರಮ ಪುರುಷನು ತಾಯಿಯನ್ನು ಮೇಲಕ್ಕೆತ್ತಿ ತಾಯಿಯೇ, ಚಿಂತಿಸದಿರು. ನೀನು ಕೇಳಿದುದನ್ನು ಕೊಡುವೆನು. ಸ್ಥಿರಚಿತ್ತಳಾಗಿ ಸುಖದಿಂದಿರು ಎಂದು ಸಂತೈಸಿದನು. ಆಗ ಆಕೆಯು ಪುತ್ರನೇ, ನೀನು ನಮ್ಮನ್ನು ಮುಪ್ಪಿನಲ್ಲಿ ರಕ್ಷಿಸುವಿ ಎಂದು ತಿಳಿದು ನನ್ನ ದುಃಖವನ್ನೆಲ್ಲಾ ಮರೆತಿದ್ದೆನು. ನನಗೆ ನೀನಲ್ಲದೆ ಒಬ್ಬ ಹೆಳವನೂ ಇನ್ನೊಬ್ಬನು ಕುರುಡನೂ ಆಗಿರುವ ಮಕ್ಕಳಿರುವರು. ನಮ್ಮನ್ನು ಇವರಲ್ಲಿ ಯಾರು ಸಲಹುವರು? ಎಂದಳು. ಆ ಜನನಿಯು ವಚನವನ್ನು ಕೇಳಿ ಶ್ರೀಪಾದನು ಆ ಹೆಳವನನ್ನೂ ಕುರುಡನನ್ನೂ ಅಮೃತಮಯವಾದ ದೃಷ್ಟಿಯಿಂದ ನೋಡಲು, ಆ ಹೆಳವನಿಗೆ ಕಾಲುಗಳೂ ಕುರುಡನಿಗೆ ಕಣ್ಣುಗಳೂ ಬಂದುವು. ಈ ಇಬ್ಬರು ಅಣ್ಣಂದಿರೂ ಶ್ರೀಪಾದರ ಚರಣಗಳನ್ನು ಹಿಡಿದು, ವ್ಯಾಕರಣ ವೇದಶಾಸ್ತ್ರಾದಿಗಳನ್ನು ಕೇಳುತ್ತಾ ನಾವು ಕೃತಾರ್ಥರಾದೆವು ಎಂದು ಬೇಡಿಕೊಂಡರು. ಚಿಂತಾಮಣಿಯು ಲೋಹಕ್ಕೆ ತಗಲಲು ಚಿನ್ನವಾಗುವಂತೆ ಇಬ್ಬರ ಅಂಗ ವಿಕಾರವೂ ಲೋಪವಾಗಿ ದಿವ್ಯ ದೃಷ್ಟಿಯಿಂದ ಯೋಗ್ಯರಾದರು. ಆಗ ಶ್ರೀಪಾದನು ಈ ಇಬ್ಬರನ್ನು ಕುರಿತು ಅಯ್ಯಾ, ಸಂಕಲ್ಪ ಸಂಪತ್ತಿನಿಂದ ಕೂಡಿ ತಂದೆತಾಯಿಗಳನ್ನು ಸೇವಿಸುತ್ತಾ ಇಹದಲ್ಲಿ ಸೌಖ್ಯವನ್ನು ಅನುಭವಿಸಿ ಪರದಲ್ಲಿ ಮುಕ್ತಿಯನ್ನು ಹೊಂದುವಿರಿ ಎಂದು ವರವನ್ನಿತ್ತನು: ಮತ್ತು ತಾಯಿಯನ್ನು ನೋಡಿ ಅಮ್ಮಾ! ಈ ಇಬ್ಬರು ಪುತ್ರರನ್ನು ನೋಡುತ್ತಾ ಸುಖವಾಗಿರು. ಇಬ್ಬರು ಮಕ್ಕಳೂ ನೂರು ವರ್ಷಗಳ ಆಯುಷ್ಯವಂತರಾಗಿರುವರು. ಇದು ಸತ್ಯವು. ಇವರಿಗೆ ಒಬ್ಬ ಮಗಳೂ ಒಬ್ಬ ಮಗನೂ ಆಗುವವು.

ನಿನ್ನ ಮನೆಯಲ್ಲಿ ಅಖಂಡೈಶ್ವರ್ಯವೂ ನಿನ್ನ ವಂಶಪಾರಂಪರ್ಯವಾಗಿರುವುದು. ನಿನ್ನ ವಂಶದವರು ಕೀರ್ತಿವಂತರಾಗಿಯೂ, ವೇದಶಾಸ್ತ್ರ ಸಂಪನ್ನರಾಗಿಯೂ ಇರುವರು. ಈಗ ನಾನು ಸಾಧುಗಳಿಗೆ ದೀಕ್ಷೆ ಕೊಡುವುದಕ್ಕೂ ಮುಕ್ತಿಮಾರ್ಗವನ್ನು ಹೊಂದಲು ಯೋಗುವುದಕ್ಕೂ ಅಪ್ಪಣೆ ಕೊಡು ಎಂದು ಹೇಳಿ ತಾಯಿತಂದೆಗಳಿಂದ ಅನುಜ್ಞೆಹೊಂದಿ ಶ್ರೀ ಕಾಶೀಕ್ಷೇತ್ರಕ್ಕೆ ಹೋಗಿ ಅಲ್ಲಿ ಗುಟ್ಟಾಗಿರುತ್ತಿದ್ದರು. ಅಲ್ಲಿಂದ ಬದರಿಕಾಶ್ರಮಕ್ಕೆ ಹೋಗಿ ಅಲ್ಲಿ ಶ್ರೀಮನ್ನಾರಾಯಣನ ದರ್ಶನಮಾಡಿ ಬಳಿಕ ತೀರ್ಥಯಾತ್ರೆ

ಮಾಡುತ್ತಾ ಮನೋವೇಗದಿಂದ ಶ್ರೀ ಗೋಕರ್ಣಕ್ಷೇತ್ರಕ್ಕೆ ಬಂದರು, ಎಂದು ಸಿದ್ಧಮುನಿಗಳು ಹೇಳಿದರು. ಎಂದು ಸರಸ್ವತೀಗಂಗಾಧರನು ನಿರೂಪಿಸಿದನೆಂಬಲ್ಲಿಗೆ ಐದನೇ ಅಧ್ಯಾಯವು ಮುಗಿದುದು.

|| ಶ್ರೀ ಗುರವೇನಮಃ ||

## ೬ ನೆಯ ಅಧ್ಯಾಯ

ಶ್ರೀ ಗಣೇಶಾಯನಮಃ || ನಾಮಧಾರಕನು ಸಿದ್ಧಮುನಿಯನ್ನು ಕುರಿತು ಸ್ವಾಮಿಾ, ಗುರುಪೀಠವನ್ನು ಅದ್ಯಂತವಾಗಿ ತಿಳಿಸಿದಿರಿ. ಶ್ರೀ ಪಾದರು ತ್ರಿಮೂರ್ತಿಗಳ ಅವತಾರರಾಗಿದ್ದರೂ ತೀರ್ಥಯಾತ್ರೆಯನ್ನೇಕೆ ಮಾಡಿದರು ? ಎಂದು ಪ್ರಶ್ನೆಮಾಡಿದನು. ಆಗ ಸಿದ್ಧಮುನಿಯು, ಶಿಷ್ಯ ಶಿಖಾಮಣಿಯೇ ಕೇಳು. ತ್ರಿಮೂರ್ತಿಗಳ ಅವತಾರರಾದ ಶ್ರೀಪಾದರು ಭಕ್ತರ ಹಿತಕ್ಕಾಗಿ ತ್ರಿಮೂರ್ತಿಗಳು ವಾಸವಾಗಿರುವ ಗೋಕರ್ಣ ಕ್ಷೇತ್ರಕ್ಕೆ ಹೋಗುವವರಾದರು. ಈ ಕ್ಷೇತ್ರಮಹಿಮೆಯನ್ನು ಕೇಳು. ಆ ಗೋಕರ್ಣ ಕ್ಷೇತ್ರದಲ್ಲಿ ಮಹಾಬಲೇಶ್ವರ ಲಿಂಗವನ್ನು ವಿಘ್ನೇಶ್ವರನು ಪ್ರತಿಷ್ಠಿಸಿದನು. ಈ ಆಖ್ಯಾನವೇನೆಂದರೆ :—ಪುಲಸ್ತ್ಯಬ್ರಹ್ಮನ ಭಾರ್ಯೆ ಯಾದ ಕೈಕಸೆಯು ಅತಿ ಭಕ್ತಿಯಿಂದ ಶಿವಪೂಜೆಯನ್ನು ಮಾಡುತ್ತಿದ್ದಳು. ನಿತ್ಯವೂ ಶಿವಪೂಜೆಮಾಡದೆ ಊಟಮಾಡಳು. ಹೀಗಿರಲು ಒಂದು ದಿನ ಈಕೆಗೆ ಶಿವಪೂಜೆಗೆ ಲಿಂಗ ದೊರೆಯಲಿಲ್ಲ. ವ್ರತಭಂಗವಾಗದಿರಲೆಂದು ಮಣ್ಣಿನ ಲಿಂಗವನ್ನು ಮಾಡಿ ಸಂತೋಷದಿಂದ ಪೂಜಿಸುತ್ತಿದ್ದಳು. ಈಕೆಯ ಕುಮಾರನಾದ ರಾವಣನು ತಾಯಿಯ ದರ್ಶನಕ್ಕೆ ಬಂದು ಈ ಶಿವಪೂಜೆಯನ್ನು ನೋಡಿ ತಾಯಿಯನ್ನು ವಂದಿಸಿ, ಅಮ್ಮಾ ! ಇದೇನು ? ಯಾವ ಪೂಜೆಯನ್ನು ಮಾಡುತ್ತೀಯೆ ? ಇದರಿಂದ ಫಲವೇನು ? ಎಂದು ಕೇಳಿದನು.

ಆಗ ಕೈಕಸೆಯು ಮಗನೇ, ಶಿವಪೂಜೆಮಾಡಲು ಕೈಲಾಸ ಪದವಿ ಯುಂಟಾಗುವುದು ಎಂದಳು. ಆಗ ರಾವಣನು ಅಮ್ಮಾ, ಕೈಲಾಸವನ್ನೇ

ನಿನಗೆ ತಂದು ಕೊಡುತ್ತೇನೆ. ಏಕೆ ಶ್ರಮಪಡುತ್ತೀಯೆ? ಬಳಿಕ ಸ್ಥಿರ ಮನಸ್ಸಿನಿಂದ ಪೂಜಿಸು ಎಂದು ಹೇಳಿ ಮನೋವೇಗದಿಂದ ಕೈಲಾಸಕ್ಕೆ ಹೋದನು. ಅಲ್ಲಿ ಈತನು ಇಪ್ಪತ್ತು ಬಾಹುಗಳಿಂದಲೂ ಕೈಲಾಸಪರ್ವತವನ್ನು ಸಿಟ್ಟಿನಿಂದ ಅಲ್ಲಾಡಿಸಿದನು. ಉತ್ಸಾಹದಿಂದ ಹತ್ತು ತಲೆಗಳಿಂದಲೂ ಎತ್ತುವೆನೆಂದು ಎತ್ತಿದನು. ಆಗ ಸಪ್ತ ಪಾತಾಳಗಳೂ ಅಲ್ಲಾಡಿದುವು. ಮಹಾಶೇಷನು ಹೆಡೆಗಳನ್ನು ಕೊಡಹಿದನು. ಆದಿಕೂರ್ಮನು ನಡುಗಿದನು. ಸ್ವರ್ಗಲೋಕವು ತಲ್ಲಣಿಸಿತು. ದೇವತೆಗಳು ಹೆದರಿದರು. ವಿಷ್ಣುಲೋಕವು ಗಾಬರಿಹೊಂದಿತು. ಕೈಲಾಸದಲ್ಲಿ ಪಾರ್ವತಿಯು ಹೆದರಿದಳು ಮತ್ತು ಶಂಕರನನ್ನು ಕುರಿತು ಸ್ವಾಮೀ, ಕೈಲಾಸವು ನಡುಗುತ್ತಿದೆ, ಜನರೆಲ್ಲರೂ ಗೋಳಾಡುವರು ; ನೀವು ಸುಮ್ಮನೆ ಇದ್ದೀರಿ ; ಇದಕ್ಕೆ ಪ್ರತೀಕಾರ ಮಾಡಿರಿ ಎಂದು ವಂದಿಸಿದಳು. ಆಗ ಶಿವನು ಪ್ರಿಯಳೇ, ಚಿಂತಿಸದಿರು. ನನ್ನ ಭಕ್ತನಾದ ರಾವಣನು ಬಂದು ಕೈಲಾಸವನ್ನು ಎತ್ತುತ್ತಾ ಇದ್ದಾನೆ ಎಂದು ಎಡಗೈಯಿಂದ ಭೂಮಿಯನ್ನೊತ್ತಿದನು. ಆಗ ರಾವಣನ ಹತ್ತು ತಲೆಗಳೂ, ಇಪ್ಪತ್ತು ಭುಜಗಳೂ ಆ ಗಿರಿಯಡಿಯಲ್ಲಿ ಸಿಲುಕಿದುವು. ಆಗ ರಾವಣನು ಶಿವಶಿವಾ ! ಎನ್ನುತ್ತಾ ಶರಣಾಗತನನ್ನು ರಕ್ಷಿಸೆಂದು ಸ್ತುತಿಸಿದನು. ಪಿನಾಕಿಯೇ, ಜಗದ್ರಕ್ಷಕಶಿರೋಮಣಿಯೇ ನಿನ್ನನ್ನು ಮರೆಹೊಕ್ಕೆನು. ನಿನ್ನ ಭಕ್ತರಿಗೆ ಸಾವು ಎಲ್ಲಿಯದು ? ಎಂದು ಸ್ತುತಿಸಿದನು. ಈ ವಿನಂತಿಯನ್ನು ಕೇಳಿ ಶಂಕರನು ಎಡಗೈಯನ್ನೆತ್ತಿದನು. ಬಿಡುಗಡೆ ಹೊಂದಿದ ರಾವಣನು ಶಂಕರನನ್ನು ಸ್ತುತಿಸಿ ತನ್ನ ತಲೆಗಳನ್ನು ಕತ್ತರಿಸಿ ಸಾಮವೇದದ ಸಾವಿರಾರು ವಚನಗಳಿಂದ ಸಕಲ ರಾಗಗಳಿಂದಲೂ ಸ್ತುತಿಸಿದನು. ಗಣಗಳ ಲಕ್ಷಣಗಳನ್ನು ಹೇಳುವೆನು ಕೇಳು : ಗಣಗಳೆಂಟಿವೆ. ಈ ಗಣಗಳಿಂದ ಸ್ತುತಿಸಿದನು. ಮಗಣವು ಬ್ರಾಹ್ಮಣವು, ನಗಣವು ಕ್ಷತ್ರಿಯ, ಭಗಣವು ವೈಶ್ಯ, ತಗಣವು ಶೂದ್ರವರ್ಣ, ಜಗಣವು ದೈತ್ಯಸಂಬಂಧಿಯು, ರಗಣವು ಚ್ಯುತಗುಣವುಳ್ಳದ್ದು, ಸಗಣವು ಕುದುರೆಯ ರೂಪವುಳ್ಳದ್ದು ಯಗಣವು ಶುದ್ಧವು, ಮತ್ತು ನವರಸಯುಕ್ತವಾಗಿ ಸ್ತುತಿಸಿದನು.

ಈ ನವರಸಗಳ್ಯಾವುವೆಂದರೆ:—ಶಾಂತ, ಭಯಾನಕ, ಅದ್ಭುತ, ಶೃಂಗಾರ, ಹಾಸ್ಯ, ಕರುಣಾರೌದ್ರ, ವೀರ, ಭೀಭತ್ಸ, ಇವುಗಳಿಂದ ಕೂಡಿದ

ಸಪ್ತಸ್ವರಗಳನ್ನೂ ಕೊಳಲಿನಲ್ಲಿ ನುಡಿಸಿದನು. ೧ ನೇ ಶಾಂತರಸವು ಜಂಬೂದ್ವೀಪವಾಸಿಯೂ, ಷಟ್ಸ್ವರವುಳ್ಳದ್ದು, ಕಂಠದಿಂದುದಿಸಿ ಮಯೂರ (ನವಿಲು) ಸ್ವರವುಳ್ಳದ್ದು. ಶೃಂಗಾರರಸವು ಉತ್ತಮವಂಶದಲ್ಲಿ ಹುಟ್ಟಿದುದು, ಎಂದರೆ ಗೀರ್ವಾಣಕುಲದ ಬ್ರಹ್ಮವಂಶದಲ್ಲಿ ಹುಟ್ಟಿ ಸುತಲ್ಪಟ್ಟ ಚಿನ್ನದ ಬಣ್ಣವುಳ್ಳದ್ದು; ಅಗ್ನಿದೇವತಾಕವಾದುದು. ೨ ನೇ ಋಷಭ ಸ್ವರವು ಶಾಲ್ಮಲೀದ್ವೀಪವಾಸಿಯೂ, ಹೃದಯಸ್ಥಾನವಾಸಿಯೂ, ಪಂಚಮ ಸ್ವರಯುಕ್ತವಾಗಿ ಆಲಾಪಿಸಿದನು. ಅದ್ಭುತರಸವು ಪ್ರಖ್ಯಾತವಾದ ಕ್ಷತ್ರಿಯ ಜಾತಿಯೂ, ಯಮದೇವತಾಕವಾದುದು, ಇದನ್ನು ಬಾಜಿಸಿದನು. ೩ ನೇ ಸ್ವರವು ಗಾಂಧಾರವು, ಕುಶದ್ವೀಪವಾಸಿಯೂ, ನಾಸಿಕಸ್ಥಾನವು. ೪ ನೇ ಸ್ವರವು ಕ್ರೌಂಚದ್ವೀಪವಾಸಿಯೂ, ಉರಸ್ಥಾನವು, ಇದನ್ನು ಕೊಳಲಿನಲ್ಲಿ ಬಾಜಿಸಿದನು. ಕರುಣಾರಸವು ಗೀರ್ವಾಣಕುಲದ ಬ್ರಹ್ಮವಂಶವು, ಕೋಲುಮಲ್ಲಿಗೆಯವರ್ಣ, ಲಕ್ಷ್ಮೀದೇವತೆಯೂ, ಪಂಚಮಸ್ವರವು ಶಾಲ್ಮಲೀದ್ವೀಪವಾಸಿಯೂ, ಕಂಠಸ್ಥಾನವು, ಕೋಗಿಲೆಯಸ್ವರವುಳ್ಳದ್ದು, ಹಾಸ್ಯರಸವು, ಪಿತೃವಂಶೀಯವು, ಕೃಷ್ಣವರ್ಣ, ಗಣನಾಥದೇವತೆಯೂ, ಭೀಭತ್ಸರಸವು, ಶ್ವೇತದ್ವೀಪವಾಸಿಯೂ, ಹಣೆಯೇಸ್ಥಾನವು, ವ್ಯಕ್ತವಾದ ನಾದವುಳ್ಳದ್ದು, ಕಪ್ಪೆಯಸ್ವರವುಳ್ಳದ್ದು, ನಿಷಾದಸ್ವರವು ಪುಷ್ಕರದ್ವೀಪವಾಸಿಯೂ, ಆನೆಯ ಸ್ವರವುಳ್ಳದ್ದು, ರಾಕ್ಷಸವಂಶವು, ವೈಶ್ಯಕುಲವು, ಬಿಳುಪು ಕೆಂಪು ಕೂಡಿದ ಬಣ್ಣ, ತುಂಬುರನೇ ದೇವತೆಯು, ಸರ್ವದೇವತಾಕವಾದುದು. ಇಂಥಾ ಭಯಾನಕ ರಸವನ್ನು ಗಾನಮಾಡಿದನು. ಸಾಮವೇದವನ್ನು ಶ್ರೀರಾಗ ವಸಂತ ಭೈರವಾದಿ ಪಂಚಮ ರಾಗಗಳಲ್ಲಿಯೂ ನಟನಾರಾಯಣ ಮೇಘರಾಗಗಳಲ್ಲಿಯೂ ಹಾಡಿದನು. ಗೌಡ, ಕೊಹ್ಲಾಳ, ಕಾಂದಾಳೀ, ಕೌಶಿಕಮಾಳೀ, ದೇವಗಾಂಧಾರ, ಆನಂದಲೀಲಾ, ಧನಾಶ್ರಿಯ, ವರಾಡಿ ರಾಮ ಕಲಿಮಂಜರಿ, ಗೌಡಭೈರವಿ, ಗುರ್ಜರಿ, ವೇಳಾವಲಿ, ಲಲಿತ, ಕರ್ನಾಟಕೀ, ಹಂಸ, ಸೈಂಧವ ಮಾಳಾರಾಗಗಳಲ್ಲಿ ಹಾಡಿದನು. ಬಂಗಾಳಿ, ಸೌರಾಷ್ಟ್ರ, ಕಾಂಭೋದಿ, ಮಧುಮಾಧವೀ, ಭೂಪಾಳೀ ರಾಗವಲ್ಲಭ, ರಾಹ್ವೇರಿ, ವಿಹಂಗದಾತ್ರಿ, ಚಂಡೀ ಮುಂತಾದ ರಾಗಗಳಲ್ಲಿ ಹಾಡಿದನು. ಕರಕಮಲವನ್ನು ಯಂತ್ರವನ್ನಾಗಿ ಮಾಡಿ ತೆಲೆಗಳನ್ನು ಭೇದಿಸಿ ಉದರ ತಂತುವಿನಿಂದ ಕಾಲವರಿತು ಬಾಜಿಸಿದನು,

ಪ್ರಾತಃಕಾಲದಲ್ಲಿ ದಶಾಂಕ, ಭೈರವಿ, ಭೂಪಾಳಿ, ಮಹ್ಲಾರ, ಧನಾಶ್ರಿ, ಬಂಗಾಳಿಗಳಲ್ಲೂ, ಮಧ್ಯಾಹ್ನದಲ್ಲಿ ವರಾಡಿ, ಲಲಿತ, ಗುರ್ಜರಿ, ಗೌಡ, ಆಸಾರಿ, ಕೌಶಿಕಿ ರಾಗಗಳನ್ನೂ ಅಪರಾಹ್ನದಲ್ಲಿ ಕುರಂಜಿ, ತುಂಡಿ, ಮಾಲಾಶ್ರಿ ರಾಗಗಳನ್ನೂ ಹಾಡಿದನು

ಈ ರೀತಿಯಿಂದ 36 ರಾಗಗಳಲ್ಲಿ ಸಾಮವೇದವನ್ನು ಗಾನಮಾಡಿದನು ಆಗ ಶಂಕರನು ' ರಾವಣನ ಭಕ್ತಿಗೆ ಮೆಚ್ಚಿ ಅವನೆದುರಿಗೆ ಬಂದು ರಾವಣನೇ, ನಿನಗೆ ಬೇಕಾದ ವರವನ್ನು ಕೇಳು ಎಂದನು.

ಆಗ ರಾವಣನು ಸ್ವಾಮಿಾ ' ನಾನು ಯಾವ ವರವನ್ನು ಕೇಳಲಿ ? ಲಕ್ಷ್ಮಿಯು ನನ್ನ ಮನೆಯಲ್ಲಿ ದಾಸಿಯಾಗಿರುವಳು ನವ ನಿಧಿಗಳೂ ಪೂರ್ಣವಾಗಿವೆ. ಬ್ರಹ್ಮನು ನನ್ನಲ್ಲಿ ಜೋಯಿಸನಾಗಿಹನು. ಮೂವತ್ಮೂರುಕೋಟಿ ದೇವತೆಗಳೂ,ಸೂರ್ಯ, ಚಂದ್ರ, ವರುಣ, ವಾಯು ಅಗ್ನಿ, ಯಮರೂ ಆಜ್ಞಾಧಾರಕರಾಗಿ ಹಗಲಿರುಳೂ ಸೇವಿಸುವರು ಇಂದ್ರನಂ ಗೆದ್ದ ಮಗನೂ, ಕುಂಭಕರ್ಣನಂಥಾ ತಮ್ಮನೂ, ಇಷ್ಟವನ್ನೀಯುವ ಕಾಮಧೇನುವೂ, ಸಾಗರ ಮಧ್ಯವರ್ತಿಯಾದ ಲಂಕಾ ನಗರವೂ ಇವೆ. ನನಗೆ ಸಾವಿರಕೋಟಿ ವರ್ಷಗಳ ಆಯುಷ್ಯವೂ ಇರುವುದು , ಆದರೆ ಈಗ ಕೈಲಾಸಪರ್ವತವನ್ನು ಲಂಕೆಗೆ ತೆಗೆದುಕೊಂಡು ಹೋಗಲು ಬಂದೆನು ನಮ್ಮ ತಾಯಿಯು ನಿತ್ಯವೂ ನಿಮ್ಮನ್ನು ಪೂಜಿಸುವಳು. ಇದಕ್ಕೋಸುಗ ನನ್ನ ಇಷ್ಟವನ್ನು ಪೂರ್ಣಮಾಡಿರಿ ಎಂದು ಪ್ರಾರ್ಥಿಸಿದನು ಆಗ ಶಂಕರನು ಭಕ್ತನೇ, ನಿನಗೆ ಕೈಲಾಸವೇತಕ್ಕೆ ? ನಿನ್ನ ತಾಯಿಯ ಪೂಜೆಗೆ ನನ್ನ ಆತ್ಮಲಿಂಗವನ್ನು ಕೊಡುವೆನು. ಇದರಿಂದ ನಿನ್ನ ಮನೋರಥವು ಪೂರ್ಣವಾಗುವುದು ಎಂದು ಪ್ರಾಣಲಿಂಗವನ್ನು ರಾವಣನಿಗೆ ಕೊಟ್ಟನು , ಮತ್ತು ರಾವಣನೇ ಈ ಲಿಂಗವನ್ನು ತ್ರಿಕಾಲದಲ್ಲಿಯೂ ನೂರೆಂಟು ಜಪಗಳನ್ನು ಮಾಡಿ, ರುದ್ರಾಭಿಷೇಕ ಮಾಡಿ ಏಕಚಿತ್ತದಿಂದ ಪೂಜಿಸು. ಈ ರೀತಿಯಿಂದ ಯಾರು ಮೂರು ವರ್ಷಕಾಲ ಪೂಜಿಸುವರೋ ಅವರು ನನ್ನ ಸ್ವರೂಪವುಳ್ಳವರಾಗುವರು ಮತ್ತು ಸಕಲೇಷ್ಟಗಳನ್ನೂ ಹೊಂದುವರು. ಈ ಲಿಂಗವಿದ್ದರೆ ಮೃತ್ಯುಭಯವಿಲ್ಲ. ದರ್ಶನದಿಂದ ಮಹಾ ದೋಷವೂ ಪರಿಹಾರವಾಗುವುದು. ಇದನ್ನು

ಭೂಮಿಯಲ್ಲಿಡಬೇಡ ಲಂಕೆಗೆ ತೆಗೆದುಕೊಂಡುಹೋಗಿ ಮೂರು ವರ್ಷ ಕಾಲ ಪೂಜಿಸಿದರೆ ನೀನೂ ಈಶ್ವರನಾಗುವಿ ಎಂಬನು ಆಗ ರಾವಣನು ಸಾಷ್ಟಾಂಗ ನಮಸ್ಕಾರಮಾಡಿ ಲಿಂಗದೊಡನೆ ಲಂಕೆಗೆ ಹೊರಟನು

ಆಗ ನಾರದ ಋಷಿಯು ಇದನ್ನು ತಿಳಿದು ಅಮರಾವತಿಗೆ ಹೋಗಿ ಇಂದ್ರನನ್ನು ಕುರಿತು ಎಲೈ ದೇವೇಂದ್ರನೇ, ನೀನೇಕೆ ಸುಮ್ಮನಿರುವೆ ? ಶಂಕರನು ರಾವಣನಿಗೆ ಅಮರತ್ವವನ್ನಿತ್ತನು ನಿನ್ನ ಸಿರಿಯು ಲಯವಾಗುವುದು ರಾವಣನು ಚಿರಾಯುವಾದನು ಶಿವನು ತನ್ನ ಆತ್ಮಲಿಂಗವನ್ನು ಕೊಟ್ಟು ನೀನು ಮೂರು ವರ್ಷಕಾಲ ಪೂಜಿಸಿದರೆ ಈಶ್ವರನಾಗುವಿ ನಿನಗೆ ಮರಣವಿಲ್ಲ ಲಂಕೆಯೇ ಕೈಲಾಸವಾಗುವುದು ಎಂದು ವರವನ್ನಿತ್ತನು ಮೂವತ್ಮೂರುಕೋಟಿ ದೇವತೆಗಳಿಗೆ ಇನ್ನು ಬಿಡುಗಡೆಯೆಲ್ಲಿ ? ನೀನೂ ರಾವಣನನ್ನು ಸೇವಿಸಬೇಕು ಊರ್ವಶಿ, ರಂಭೆ, ಮೇನಕೆ ಮುಂತಾದ ಅಪ್ಸರ ಸ್ತ್ರೀಯರನ್ನುರಾವಣನ ದರ್ಶನಕ್ಕೆ ಕರೆದುಕೊಂಡು ಹೋಗಬೇಕು ಎಂದನು ಇದನ್ನು ಕೇಳಿ ಇಂದ್ರನು ಭೀತನಾಗಿ ನಾರದರಿಗೆ ಕೈಗಳನ್ನು ಜೋಡಿಸಿ ಈಗ ಏನುಮಾಡಬೇಕೆಂದು ಕೇಳಿದನು ಆಗ ನಾರದನು ಇಂದ್ರನೇ, ಈಗ ಬ್ರಹ್ಮನ ಹತ್ತಿರಕ್ಕೆ ಹೋಗೋಣ ನಡೆ ಎಂದು ಹೊರಟುಹೋಗಿ ಬ್ರಹ್ಮನಲ್ಲಿ ಈ ಸಂಗತಿಯನ್ನು ಬಿನ್ನವಿಸಿದನು ಆ ಬ್ರಹ್ಮನೂ ಸುರರರೊಡನೆ ವೈಕುಂಠಕ್ಕೆ ಹೋಗಿ ಸಂಗತಿಯನ್ನೆಲ್ಲವನ್ನೂ ವಿಸ್ತಾರವಾಗಿ ಹೇಳಿದನು. ಆಗ ಈ ವಿಷಯಗಳನ್ನು ಕೇಳಿ ನಾರಾಯಣನು ಆಹಾ! ಕೆಲಸಕೆಟ್ಟಿತು ಎಂದು ಹೇಳಿ ಕೈಲಾಸಕ್ಕೆ ಎಲ್ಲರೊಡನೆ ಬಂದು ಶಂಕರನಂ ಕುರಿತು ಈಶ್ವರನೆ ಆ ಕ್ರೂರರಾವಣನಿಗೆ ಪ್ರಾಣಲಿಂಗವನ್ನೇಕೆ ಕೊಟ್ಟೆ ? ಅವನು ಸುರರೆಲ್ಲರನ್ನೂ ಸೆರೆಯಲ್ಲಿಟ್ಟಿರುವನು ಇಂಥಾ ದುಷ್ಟನಿಗೆ ವರವನ್ನು ಕೊಟ್ಟುದರಿಂದ ಸ್ವರ್ಗಸಂಪದವೆಲ್ಲವೂ ಅವನ ಮನೆಗೆ ಹೋಗುವುದು ಎಂದನು

ಆಗ ಈಶ್ವರನು, ನಾರಾಯಣನೇ ! ಆ ರಾವಣನ ಭಕ್ತಿಗೆ ಮೆಚ್ಚಿ ಪ್ರಾಣಲಿಂಗವನ್ನಿತ್ತೆನು. ಈತನು ತನ್ನ ತಲೆಗಳನ್ನು ಕತ್ತರಿಸಿ ಕೈಯನ್ನೇ ವೀಣೆಯನ್ನಾಗಿ ಮಾಡಿ ಸಪ್ತ ಸ್ವರಗಳಿಂದ ಸಾಮವೇದವನ್ನು

ಗಾನಮಾಡಿದನು. ಆತನು ಪಾರ್ವತಿಯನ್ನು ಕೇಳಿದ್ದರೂ ಕೊಟ್ಟು ಬಿಡು ತ್ತಿದ್ದೆನು. ಅವನ ಭಕ್ತಿಯನ್ನು ನೋಡಿ ಪ್ರಾಣಲಿಂಗವನ್ನಿತ್ತೆನು ಎಂದನು.

ಆಗ ವಿಷ್ಣುವು, ಉಮೇಶನೇ ! ನೀನು ವರವನ್ನಿತ್ತುದರಿಂದ ನಮಗೆ ಬಹಳವಾಗಿ ಶ್ರಮವುಂಟಾಗಿರುವುದು ಆ ದೈತ್ಯನು ಉನ್ಮತ್ತನಾಗಿರು ವನು. ಈತನು ದೇವತೆಗಳನ್ನು ಬ್ರಾಹ್ಮಣರನ್ನೂ ಪೀಡಿಸುತ್ತಿರುವನು, ಆದುದರಿಂದ ನಾನು ಅವತಾರ ಮಾಡಬೇಕಾಗಿರುವುದು.

ಪ್ರಾಣಲಿಂಗವನ್ನು ಯಾವಾಗ ಕೊಟ್ಟೆ ? ಆತನು ಅದನ್ನು ತೆಗೆದು ಕೊಂಡು ಇಷ್ಟು ಹೊತ್ತಿಗೆ ಎಲ್ಲಿಗೆ ಹೋಗಿರಬಹುದು ? ಎನ್ನಲು, ಶಂಕ ರನು ! ಲಿಂಗವನ್ನು ಕೊಟ್ಟು ನಾಲ್ಕುಘಳಿಗೆಯಾಯಿತು ಎಂದನು ಇದನ್ನು ಕೇಳಿ ನಾರಾಯಣನು ತನ್ನ ಸುದರ್ಶನಚಕ್ರವನ್ನು ಸೂರ್ಯನಿಗೆ ಅಡ್ಡ ವಾಗಿ ಹಿಡಿದನು ಆಗ ನಾರದನನ್ನು ಕರೆದು ನೀನು ಬೇಗ ಆ ರಾವಣನು ಹೋಗುವ ದಾರಿಗೆದುರಾಗಿ ಹೋಗಿ ಆತನು ಲಂಕೆಗೆ ಬೇಗ ಹೋಗದಂತೆ ಸಾವಕಾಶಮಾಡು ಎಂದನುಜ್ಞೆಯಿತ್ತನು ಚಕ್ರವು ಸೂರ್ಯನಿಗೆ ಅಡ್ಡ ವಾಗಿರುವುದರಿಂದ ಸ್ನಾನ ಸಂಧ್ಯಾದಿಗಳನ್ನು ಕ್ರಮವಾಗಿ ಮಾಡುತ್ತಿರುವ ಆ ರಾವಣನು ಹೋಗುವದಾರಿಗೆ ಹೋಗು ಎಂದು ಹೇಳಲು ನಾರದನು ರಾವಣನೆದುರಿಗೆ ಮನೋವೇಗದಿಂದ ಬಂದನು. ಬಳಿಕ ನಾರಾಯಣನು ಗಣಪತಿಯನ್ನು ಕರೆದು ಎಲೈ ಗಣಪತಿಯೇ, ರಾವಣನು ನಿನ್ನನ್ನು ಸದಾ ಕಾಲದಲ್ಲಿಯೂ ಉಪೇಕ್ಷಿಸುತ್ತಿದ್ದಾನೆ ಸಕಲ ದೇವತೆಗಳೂ ನಿನ್ನನ್ನು ವಂದಿಸುವರು ಆದರೂ ನೀನು ದೇವತೆಗಳ ಇಷ್ಟವನ್ನು ಏಕೆ ಪೂರ್ಣ ಮಾಡುವುದಿಲ್ಲ ? ವಿಘ್ನವು ಸುರರನ್ನು ಬಾಧಿಸುತ್ತಿರುವುದು ಈಗ ರಾವ ಣನು ಈಶ್ವರನ ಪ್ರಾಣಲಿಂಗವನ್ನು ತೆಗೆದುಕೊಂಡು ಹೋಗುತ್ತಿರುವನು ಆದುದರಿಂದ ಈಗ ನೀನು ಚಿಕ್ಕ ಬಾಲಕನಾಗಿ ಅವನು ಹೋಗುವ ದಾರಿ ಯಲ್ಲಿ ಎದುರಾಗಿ ಹೋಗು ಅಸ್ತಮಯಕಾಲದಲ್ಲಿ ರಾವಣನು ತಪ್ಪದೇ ಸಂಧ್ಯಾವಂದನೆಯನ್ನು ಮಾಡುವನು ಈತನಿಗೆ ಸಾವಕಾಶಮಾಡುವಂತೆ ನಾರದನನ್ನು ಕಳುಹಿಸಿರುವೆನು. ಶಂಕರನು ಕೊಟ್ಟ ಲಿಂಗವನ್ನು ಆತನು ಶೌಚಕಾಲದಲ್ಲ ತನ್ನ ಹತ್ತಿರ ಇಟ್ಟುಕೊಳ್ಳುವುದಿಲ್ಲ. ಇದು ಈಶ್ವರಾಜ್ಞೆ ಯಾಗಿದೆ. ನೀನು ಅವನೆದುರಾಗಿಹೋಗಿ ಅವನ ಶಿಷ್ಯನಾಗಿ ಆ ಲಿಂಗವನ್ನು

ತೆಗೆದುಕೊ. ಸಂಧ್ಯಾಕಾಲದಲ್ಲಿ ಆ ಲಿಂಗವನ್ನು ಅಲ್ಲಿಯೇ ನೆಲದಲ್ಲಿಡುವವನಾಗು. ಆ ಲಿಂಗವು ನೆಲದಲ್ಲಿ ಸ್ಥಿರವಾಗಿರುವುದು ಎಂದನು

ಆಗ ಗಣೇಶನು ಸ್ವಾಮಿಾ, ಹಾಗೆಯೆ ಆಗಲಿ. ಈಗ ನನಗೆ ಲಾಡು, ಪಂಚಕಜ್ಜಾಯ, ಕಬ್ಬು, ಕೊಬರಿ ಸಕ್ಕರೆ, ಹಾಲು ತುಪ್ಪ, ಸೆನಗಡಲೆ ಸಕ್ಕರೆ ಹಾಕಿದ ತಂಬಿಟ್ಟುಗಳನ್ನು ಕೊಡಬೇಕು ಎಂದು ಕೇಳಿದನು. ಆಗ ನಾರಾಯಣನು ಗಣೇಶನು ಕೇಳಿದುದನ್ನು ಒದಗಿಸಿಕೊಟ್ಟನು. ಆಗ ಗಣಪತಿಯು ಅದನ್ನು ತಿಂದು ಬ್ರಹ್ಮಚಾರಿಯಾಗಿ ಹೊರಟನು ಈ ಮೊದಲೇ ಹೋದ ನಾರದನು ರಾವಣನೆದುರಿಗೆ ಹೋಗಿ, ರಾವಣನೇ ನೀನು ಎಲ್ಲಿಗೆ ಹೋಗಿದ್ದೆ ? ಎಂದು ಕೇಳಿದನು. ಆಗ ರಾವಣನು ನಾರದರೇ, ನಾನು ಕೈಲಾಸಕ್ಕೆ ಹೋಗಿದ್ದೆನು. ಅಲ್ಲಿ ಉತ್ಕೃಷ್ಟವಾದ ತಪಸ್ಸನ್ನು ಮಾಡಿ ಶಂಕರನನ್ನು ಸಂತೋಷಪಡಿಸಲು ಶಂಕರನು ಪ್ರಸನ್ನನಾಗಿ ಈ ಪ್ರಾಣಲಿಂಗವನ್ನು ಕೊಟ್ಟನು ಎಂದನು ಆಗ ನಾರದನು ಆ ಲಿಂಗವನ್ನು ತೋರಿಸೆನ್ನಲು ರಾವಣನು ಅದನ್ನು ತೋರಿಸಿದನು ಆಗ ನಾರದನನ್ನು ನೋಡಿ, ರಾವಣನೇ, ಆ ಲಿಂಗದ ಲಕ್ಷಣವನ್ನು ಕೇಳು— ಪೂರ್ವದಲ್ಲಿ ಕಾಲಾಗ್ನಿಗೆ ಸರಿಯಾದ ಒಂದು ಮೃಗವು ಈ ಬ್ರಹ್ಮಾಂಡದಲ್ಲಿ ಬಿದ್ದಿತ್ತು ಆಗ ತ್ರಿಮೂರ್ತಿಗಳದನ್ನು ಕಂಡು ಕೊಂದು ಅದರ ಮೇಧಸ್ಸನ್ನು ಗ್ರಹಿಸಿದರು ಆಗ ಅದರ ತಲೆಯಲ್ಲಿ ಮೂರು ಕೋಡುಗಳಿದ್ದುವು ಅವುಗಳ ಬುಡದಲ್ಲಿ ಮೂರು ಲಿಂಗಗಳಿದ್ದುವು ಈ ಮೂರು ಲಿಂಗಗಳನ್ನೂ ಈ ತ್ರಿಮೂರ್ತಿಗಳು ಹಂಚಿಕೊಂಡರು ಈ ಪ್ರಾಣ ಲಿಂಗವನ್ನೇ ನೀನು ಈಗ ತಂದಿರುತ್ತೀಯೆ ಮೂರು ವರ್ಷಗಳು ಇದನ್ನು ಪೂಜಿಸಿದರೆ ಆತನು ನಿರ್ಗುಣಿಯಾದ ಈಶ್ವರನಾಗುವನು , ಮತ್ತು ವೇದಮೂರ್ತಿಯಾಗುವನು ಈ ಲಿಂಗವಿರುವ ಸ್ಥಾನವೇ ಕೈಲಾಸವು ತ್ರಿಮೂರ್ತಿಗಳಿಗೆ ಇದರಿಂದಲೇ ಮಹತ್ವವುಂಟಾಯಿತು ಈಗ ಇನ್ನೊಂದು ವಿಷಯವನ್ನು ಹೇಳುವೆವು ಕೇಳು ಎನ್ನಲು, ಆಗ ರಾವಣನು ಸ್ವಾಮಿಾ , ನಾನು ಲಘುಶಂಕೆಗೆ ಹೋಗಬೇಕು ಎಂದು ಹೊರಟನು ಆಗ ನಾರದನು, ರಾವಣನೇ ಕೇಳು— ಸೂರ್ಯಾಸ್ತವಾಗುತ್ತಾ ಬಂತು ಬ್ರಹ್ಮಣನಿಗೆ ಇದು ಸಂಧ್ಯಾಕಾಲವು ಹೀಗಿದ್ದರೂ ನೀನು ದಾರಿಯನ್ನು ನಡೆಯುತ್ತೀಯೆ. ನಿನಗೆ

ಸಂಧ್ಯಾಲೋಪದ ದೋಷವು ಬರುವುದು ನಾವು ಸಂಧ್ಯಾವಂದನೆಗೆ ಹೋಗುವೆವು ಎಂದು ಹೊರಟರು ಇಷ್ಟರಲ್ಲಿಯೇ ಬ್ರಹ್ಮಚಾರಿಯಾದ ಗಣೇಶನು ಅಲ್ಲಿಗೆ ಬಂದನು.

ಆಗ ರಾವಣನು ಮನಸ್ಸಿನಲ್ಲಿ ಈಗ ವ್ರತಭಂಗವಾಗಿ ದೋಷಬರುವುದು ಆದುದರಿಂದ ಸಂಧ್ಯಾವಂದನೆ ಮಾಡಬೇಕು. ಈಶ್ವರನು ಈ ಲಿಂಗವನ್ನು ಭೂಮಿಯಲ್ಲಿಡಬಾರದೆಂದು ಹೇಳಿರುವನು. ಈಗ ಸಂಧ್ಯಾ ಸಮಯವಾಗಿ ರಾತ್ರಿಯಾಯಿತು ಸಂಧ್ಯಾವಂದನೆ ಮಾಡಬೇಕೆಂದು ಯೋಚಿಸಿ ಈ ವಟುವಿನಹತ್ತಿರ ಬಂದನು. ಈ ರಾವಣನನ್ನು ನೋಡಿ ಗಣೇಶನು ಓಡಿಹೋದನು. ಆಗ ರಾವಣನು ಈತನಿಗೆ ಅಭಯವನ್ನು ಕೊಟ್ಟು ಎಲೈ ವಟುವೇ, ನಿನ್ನ ತಂದೆಯಾರು ? ನೀನ್ಯಾವಕುಲದವನು , ಎಂದು ಕೇಳಿದನು ಆಗ ಆ ವಟುವು ಎಲೈ ಮಹಾತ್ಮನೇ, ನೀನು ನನ್ನನ್ನು ಕುರಿತು ಇಷ್ಟು ಕೇಳಲು ಕಾರಣವೇನು ? ನನ್ನ ತಂದೆಯು ನಿನಗೆಷ್ಟು ಸಾಲವನ್ನು ಕೊಡಬೇಕು ? ಎಂದನು ಆಗ ರಾವಣನು ಅವನ ಕೈಯ್ಯನ್ನು ಹಿಡಿದು ನೀನು ಯಾರಮಗನೆಂದು ಪ್ರೀತಿಯಿಂದ ಕೇಳುತ್ತೇನೆ ಇದನ್ನು ಹೇಳು ಎಂದನು ಆಗ ಆ ವಟುವು ಅಯ್ಯಾ, ನನ್ನ ತಂದೆಯು ಶಂಕರನೆಂಬುವನು. ಆತನು ಜಟಾಧಾರಿಯಾಗಿಯೂ ಭಸ್ಮಲೇಪಿತನಾಗಿಯೂ ರುದ್ರಾಕ್ಷ ಮಾಲೆಯನ್ನು ಧರಿಸಿ ವೃಷಭಾರೂಢನಾಗಿ ಉಮೆ ಎಂಬ ನನ್ನ ಜನನಿಯೊಡನೆ ಭಿಕ್ಷೆಯನ್ನು ಬೇಡುತ್ತಿರುವನು. ನೀನು ನನ್ನನ್ನು ಈರೀತಿಯಿಂದ ಕೇಳುತಿರುವುದರಿಂದ ನನಗೆ ಭಯವಾಗುವುದು ನನ್ನ ಕೈಯ್ಯನ್ನು ಬಿಡು, ನಾನು ಹೋಗುವೆನೆಂದನು ಆಗ ರಾವಣನು ವಟುವೇ, ನಿನ್ನ ತಂದೆಯು ಬಡವನು ಮನೆ ಮನೆಗಳಲ್ಲಿ ಭಿಕ್ಷೆಬೇಡುವನು ನಿನಗೆ ಮನೆಯಲ್ಲಿ ಸುಖವಿಲ್ಲ ನನ್ನ ರಾಜಧಾನಿಯು ಲಂಕಾನಗರವು ಆ ನಗರವು ರತ್ನಖಚಿತವ ಗಿ ಸುಂದರವಾಗಿದೆ ಆದುದರಿಂದ ನನ್ನೊಡನೆ ಬಂದು ದೇವರ ಪೂಜೆಯನ್ನುಮಾಡಿಕೊಂಡಿರು ನೀನು ಕೇಳಿದುದನ್ನು ನಾನು ಕೊಡುವೆನು ನನ್ನಹತ್ತಿರ ಸುಖದಿಂದಿರು ಎಂದನು.

ಆಗ ವಟುವು ಮಹಾನುಭಾವನೇ, ಲಂಕೆಯಲ್ಲಿ ಬಹುಜನ ರಾಕ್ಷಸರಿರುವರು ನಾನು ಅರಣ್ಯವಾಸಿಯಾದ ವಟುವು ನನ್ನನ್ನವರು ತಿಂದಾರು, ಆದುದರಿಂದ ನಾನು ಅಲ್ಲಿಗೆ ಬಾರೆನು ಎಂದನು.

ಆಗ ರಾವಣನು ವಟುವೇ, ನಾನು ಸಂಧ್ಯಾವಂದನೆಮಾಡಿ ಬರುವ ವರೆಗೆ ಈ ಲಿಂಗವನ್ನು ಹಿಡಿದಿರು ಎಂದು ಹೇಳಿದನು

ಆಗ ವಟುವು ಅಯ್ಯಾ, ನಾನು ಲಿಂಗವನ್ನು ಹಿಡಿಯುವುದಿಲ್ಲ. ವನ ವಾಸಿಯಾದ ನನ್ನನ್ನು ಕಾಡಬೇಡ. ನಿನ್ನ ಲಿಂಗ ಭಾರವಾಗಿದೆ. ನಾನು ಬಾಲಕನು ; ಆದುದರಿಂದ ಆದನ್ನು ಹಿಡಿಯಲಾರೆನು. ನನ್ನನ್ನು ಬಿಡು ನಿನಗೆ ಪುಣ್ಯಬರುವುದು ಎಂದನು.

ಆಗ ರಾವಣನು ಆ ವಟುವನ್ನು ನಾನಾರೀತಿಯಿಂದೊಪ್ಪಿಸಿ ಲಿಂಗ ವನ್ನು ಅವನ ಕರದಲ್ಲಿತ್ತು ಸಂಧ್ಯಾವಂದನೆಗೋಸುಗ ಸಮುದ್ರತೀರಕ್ಕೆ ಹೋಗಿ ಕುಳಿತನು.

ಆಗ ವಟುವು ಅಯ್ಯಾ, ನಾನು ಈ ಭಾರವಾದ ಲಿಂಗವನ್ನು ಹೊರ ಲಾರೆನು. ನಿನ್ನನ್ನು ಮೂರುಬಾರಿ ಕರೆಯುವೆನು ನೀನು ಬರುವುದು ಸಾವಕಾಶವಾದರೆ ನಾನೀಲಿಂಗವನ್ನು ಭೂಮಿಯಲ್ಲಿಡುವೆನು ಎಂದನು. ಸುರರು ಆಗ ಗಗನದಲ್ಲಿ ವಿಮಾನದಲ್ಲಿದ್ದು ಕೌತುಕವನ್ನು ನೋಡುತ್ತಿ ದ್ದರು. ರಾವಣನು ಅರ್ಘ್ಯ ಕೊಡುವಕಾಲದಲ್ಲಿ ಒಂದುಬಾರಿ ಕೂಗಿದನು. ರಾವಣನು ಆಗ ನ್ಯಾಸಪೂರ್ವಕವಾಗಿ ಅರ್ಘ್ಯ ಕೊಡುವಾಗ ವಟುವೇ, ಬರುವೆನು ನಿಲ್ಲು ಎಂದು ಕೈಯಿಂದ ಸನ್ನೆ ಮಾಡಿ ತೋರಿಸಿದನು. ಒಂದು ಕ್ಷಣದಮೇಲೆ ವಟುವು ಲಿಂಗವು ಭಾರವಾಯಿತು ಬೇಗ ಬಾ ಎಂದು ಎರಡನೆಯ ಬಾರಿ ಕೂಗಿದನು ಈ ರೀತಿಯಿಂದ ಮೂರು ಬಾರಿ ಕೂಗಿ ದನು. ರಾವಣನು ಆಗ ಧ್ಯಾನಸ್ಥನಾಗಿದ್ದನು, ಬರಲಿಲ್ಲ. ಆಗ ಗಣೇಶನು ಸುರರೆಲ್ಲರ ಸಾಕ್ಷಿಯಾಗಿ ಶ್ರೀ ಹರಿಯನ್ನು ಧ್ಯಾನಿಸಿ ಲಿಂಗವನ್ನು ಭೂಮಿ ಯಲ್ಲಿಟ್ಟನು ಆಗ ಸುರರು ಹೂ ಮಳೆಗರೆದರು. ರಾವಣನು ಅರ್ಘ್ಯ ವನ್ನು ಕೊಟ್ಟುಬಂದು ಲಿಂಗವು ಭೂಮಿಯಲ್ಲಿರುವುದನ್ನು ನೋಡಿ ಚಿಂತಿಸಿ ಆವೇಶದಿಂದ ಗಣೇಶನನ್ನು ಹೊಡೆದನು

ಆಗ ಗಣಪತಿಯು ಹಾಸ್ಯಮುಖದಿಂದ ಅಳುತ್ತಾ ಹೊರಟನು. ಆಗ ರಾವಣನು ಲಿಂಗವನ್ನು ಹಿಡಿದು ಗಟ್ಟಿಯಾಗಿ ಎತ್ತಿದನು ಆಗ ಭೂಮಿಯು ನಡುಗಿತು ಆ ಲಿಂಗವು ಬಾರದುದರಿಂದ ಮಹಾಬಲನೇ ಎಂದು ಎತ್ತಿದನು, ಆದರೂ ಏಳಲಿಲ್ಲ ಇದರಿಂದ ಈ ಲಿಂಗಕ್ಕೆ ಮಹಾ

ಬಲೇಶ್ವರನೆಂದು ಹೆಸರಾಯಿತು ರಾವಣನು ಆ ಲಿಂಗವನ್ನು ಮುರಿದು ಗೋವಿನ ಕಿವಿಯ ಆಕಾರವಾಗಿ ಎಳೆದನು, ಲಿಂಗವು ಏಳಲಿಲ್ಲ ತಪಸ್ಸನ್ನು ಮಾಡಲಾರಂಭಿಸಿದನು ದೇವತೆಗಳೆಲ್ಲರೂ ಅಲ್ಲಿಗೆ ಬಂದರು. ಈ ಗೋಕರ್ಣ ಮಹಿಮೆಯು ಸ್ಕಂದಪುರಾಣದಲ್ಲಿ ಹೇಳಿವೆ ಎಂದು ಹೇಳಿದ ಸಿದ್ಧರ ವಾಕ್ಯವನ್ನು ಕೇಳಿ ನಾಮಧಾರಕನು ಸಂತೋಷದಿಂದ ವಂದಿಸಿದನು, ಎಂದು ಸರಸ್ವತೀಗಂಗಾಧರನು ಹೇಳಿದನೆಂಬಲ್ಲಿಗೆ ಗುರುಚರಿತ್ರೆಯಲ್ಲಿ ಗೋಕರ್ಣ ಮಹಿಮಾ ವರ್ಣನೆಯೆಂಬ ಆರನೆಯ ಅಧ್ಯಾಯವು ಮುಗಿದುದು.

---

## ೭ ನೆಯ ಅಧ್ಯಾಯ.

---

ಶ್ರೀ ಗಣೇಶಾಯನಮಃ || ನಾಮಧಾರಕನು ಸಿದ್ಧರನ್ನು ಕುರಿತು, ಸ್ವಾಮಿ, ಈ ಗೋಕರ್ಣದಲ್ಲಿ ಯಾರು ಸಿದ್ಧಿ ಹೊಂದಿದರು ? ಇದನ್ನು ದಯೆಯಿಟ್ಟು ನಿರೂಪಿಸಿರಿ ಸರ್ವ ತೀರ್ಥಗಳನ್ನು ಬಿಟ್ಟು ಶ್ರೀಪಾದರು ಗೋಕರ್ಣಕ್ಕೆ ಏಕೆ ಹೋದರು ? ಇದರ ಪುರಾಣ ಕಥೆಯೇನು ? ಗುರುಗಳು ಪ್ರೀತಿಸಿರುವ ಈ ಕ್ಷೇತ್ರಮಹಿಮೆಯನ್ನು ಕೇಳಲು ಮನಸ್ಸುಂಟಾಗಿದೆ. ದಯಾನಿಧಿಗಳಾದ ತಾವು ನಿರೂಪಿಸಿರಿ ಎಂದು ಪ್ರಾರ್ಥಿಸಿದನು

ಆಗ ಸಿದ್ಧಮುನಿಯು, ಶಿಷ್ಯನೇ ಈ ಚರಿತ್ರೆಯನ್ನು ಹೇಳುವೆನು ಕೇಳು—ಪೂರ್ವದಲ್ಲಿ ಇಕ್ಷ್ವಾಕು ವಂಶದಲ್ಲಿ ಮಿತ್ರಸಹನೆಂಬ ರಾಜನಿದ್ದನು ಇವನು ಶೂರನಾಗಿಯೂ ಧಾರ್ಮಿಕನಾಗಿಯೂ ಶಾಸ್ತ್ರಜ್ಞನಾಗಿಯೂ ದಯಾನಿಧಿಯಾಗಿಯೂ ಇದ್ದನು ಹೀಗಿರಲೊಂದುದಿನ ರಾಜನು ಬೇಟೆಗೋಸುಗ ಕಾಡಿಗೆ ಹೋಗಿ ಅಲ್ಲಿ ಭಯಂಕರನಾದ ರಾಕ್ಷಸನನ್ನು ನೋಡಿ ಅವನನ್ನು ಬಾಣಗಳಿಂದ ಹೊಡೆದನು ಅತನು ಪ್ರಾಣಬಿಡುವಾಗ ತನ್ನ ತಮ್ಮನನ್ನು ಕುರಿತು ತಮ್ಮನೇ, ನೀನು ಈ ರಾಜನು ನನ್ನನ್ನು ಹೊಡೆದುದಕ್ಕೆ ಪ್ರತೀಕಾರ ಮಾಡೆಂದು ಹೇಳಿ ಸತ್ತನು ಬಳಿಕ ಅವನ ತಮ್ಮನಾದ ರಾಕ್ಷಸನು ಮನುಷ್ಯವೇಷದಿಂದ ಬಂದು ಈ ರಾಜನನ್ನು ಸೇವಿ

ಸುತ್ತಿದ್ದನು ರಾಜನು ಒಂದುದಿನ ಬೇಟೆಗೆ ಹೋಗಿ ಅನೇಕ ಮೃಗಗಳನ್ನು ಕೊಂದು ಹಿಂದಿರುಗಿ ತನ್ನ ನಗರಕ್ಕೆ ಬಂದನು ಹೀಗಿರಲೊಂದುದಿನ ಈ ರಾಜನು ಮಾಡುವ ಶ್ರಾದ್ಧದದಿನ ಒಂದಿತು ಆ ದಿನ ರಾಜನು ವಸಿಷ್ಠರನ್ನು ನಿಮಂತ್ರಣಕ್ಕೆ ಕರೆದನು ಆ ದಿನ ರಾಜನು ಈ ಸೇವಕನನ್ನು ಅಡಿಗೆಮಾಡಲು ನೇಮಿಸಿದನು ಈ ಸೇವಕನು ಕಪಟದಿಂದ ನರಮಾಂಸವನ್ನು ತಂದು ಅಡಿಗೆ ಮಾಡಿ ವಸಿಷ್ಠರಿಗೆ ಒಡಿಸಿದನು ಇವನ್ನು ನೋಡಿ ವಸಿಷ್ಠರು ರಾಜನನ್ನು ಕುರಿತು ಎಲೈ ಅರಸನೇ, ನನಗೆ ನರಮಾಂಸವನ್ನು ಬಡಿಸಿದುದರಿಂದ ನಿನಗೆ ಶಾಪವನ್ನು ಕೊಡುವೆನು ಹಿಡಿ ಎಂದು ಬ್ರಹ್ಮರಾಕ್ಷಸನಾಗೆಂದು ಶಪಿಸಿದರು ಆಗ ರಾಜನೂ ಕೋಪಿಸಿ ವಸಿಷ್ಠರೇ ತಪ್ಪಿಲ್ಲದ ನನಗೆ ಶಾಪವನ್ನು ಕೊಟ್ಟಿರಿ ನಾನು ನರಮಾಂಸವನ್ನು ಪಾಕ ಮಾಡಿಸಲಿಲ್ಲ ಇದು ನನ್ನ ಆಜ್ಞೆಯಿಂದಾದುದಲ್ಲ ಆದ ಕಾರಣ ನಾನೂ ನಿಮಗೆ ಶಾಪವನ್ನು ಕೊಡುವೆನು ಎಂದು ನೀರನ್ನು ಕೈ ಬೊಗಸೆಯಲ್ಲಿ ಹಿಡಿದು ಸಿದ್ಧನಾಗಲು, ಆ ರಾಜನ ಪತ್ನಿಯು ಹತ್ತಿರ ಬಂದು ಪತಿಯನ್ನು ತಡೆದು ಸ್ವಾಮಿ, ಗುರುಗಳನ್ನು ಶಪಿಸಿದರೆ ನಮಗೆ ದೋಷವು ಬರುವುದು ಆದುದರಿಂದ ಆ ಗುರುಗಳನ್ನು ವಂದಿಸಿರಿ ಅವರು ಈ ಭವಸಾಗರವನ್ನು ದಾಟಿಸುವರು ಎಂದ, ಆ ಮದಯಂತಿಯೆಂಬ ರಾಜಪತ್ನಿಯು ಹೇಳಲು, ರಾಜನು ಆ ಶಾಪೋದಕವನ್ನು ತನ್ನ ಕಾಲುಗಳ ಮೇಲೆ ಸುರಿದುಕೊಂಡನು ಇದರಿಂದೀತನ ಪಾದಗಳು ಕಲ್ಮಷವುಳ್ಳವುಗಳಾದುವು ಇದರಿಂದಾತನಿಗೆ ಕಲ್ಮಾಷಪಾದರಾಯನೆಂದು ಹೆಸರಾಯಿತು ಈ ರಾಜನು ಬ್ರಹ್ಮರಾಕ್ಷಸನಾದನು ಆಗ ಮದಯಂತಿಯು ವಸಿಷ್ಠರನ್ನು ವಂದಿಸಿ ಮಹನೀಯರೇ, ಬಾಲಕರಲ್ಲಿ ಹೀಗೆ ಕೋಪಿಸಬಹುದೇ ? ಪ್ರಸನ್ನರಾಗಿ ಎಂದು ಪ್ರಾರ್ಥಿಸಿದಳು ಆಗ ವಸಿಷ್ಠರು ಶಾಂತರಾಗಿ ನಿನ್ನ ಪತಿಯು ಹನ್ನೆರಡು ವರ್ಷಗಳ ಬಳಿಕ ಶಾಪವಿಮೋಚನೆ ಹೊಂದುವನು, ಎಂದು ಉಶ್ಶಾಪವನ್ನು ಕೊಟ್ಟು ತಮ್ಮ ಆಶ್ರಮಕ್ಕೆ ತೆರಳಿದರು

ಈ ರಾಜನು ಬ್ರಹ್ಮರಾಕ್ಷಸನಾಗಿ ಕಾಡಿಗೆ ಹೋಗಿ ಅಲ್ಲಿ ಅನೇಕ ಪ್ರಾಣಿಗಳನ್ನು ತಿನ್ನುತ್ತಾ ಇದ್ದನು ಆ ಕಾಡಿನಲ್ಲಿ ಹೋಗುತ್ತಿದ್ದ ಬ್ರಾಹ್ಮಣ ದಂಪತಿಗಳನ್ನು ಈತನು ನೋಡಿ ಹುಲಿಯು ಹಸುವನ್ನು ಹಿಡಿಯುವಂತೆ ಹಿಡಿದುಕೊಂಡನು ಆಗ ಬ್ರಾಹ್ಮಣಸ್ತ್ರೀಯು ಈ ರಾಕ್ಷಸನ

ಹತ್ತಿರ ಹೋಗಿ, ಎಲೈ ನೀನು ನನ್ನ ಪತಿಯನ್ನು ಬಿಡು, ನನ್ನನ್ನು ತಿನ್ನು, ನನಗೆ ಅವನಲ್ಲಿ ಬಹು ಪ್ರೀತಿಯಿದೆ ಗಂಡನಿಲ್ಲದ ಸ್ತ್ರೀಯಳ ಜನ್ಮವು ವ್ಯರ್ಥವು, ಆದುದರಿಂದ ಪತಿಯನ್ನು ರಕ್ಷಿಸು, ಈ ಪತಿಯು ರೂಪವಂತ ನಾಗಿಯೂ ತರುಣನಾಗಿಯೂ ವೇದಶಾಸ್ತ್ರ ಪಾರಂಗತನಾಗಿಯೂ ಇರು ವನು, ಇವನನ್ನು ರಕ್ಷಿಸಿದರೆ ನಿನಗೆ ಪುಣ್ಯವು ಬರುವುದು ನನಗೆ ಈ ಪತಿಯಿಂದ ಹುಟ್ಟಿದ ಮಕ್ಕಳಿಗೆ ನಿನ್ನ ಹಸರನ್ನಿಡುವೆನು, ನಿನಗೂ ಹೆಣ್ಣುಮಕ್ಕಳಾಗುವರು ಎಂದೀಪರಿಯಿಂದ ದುಃಖಿಸಿದಳು, ಇದನ್ನು ಕೇಳದೆ ರಾಕ್ಷಸನು ಆ ವಿಪ್ರನನ್ನು ತಿಂದನು

ಈ ರೀತಿಯಾಗಿ ಈತನು ಪತಿಯನ್ನು ತಿಂದುದನ್ನು ನೋಡಿ ಆ ಸತಿಯು ಎಲೈ, ನೀನು ಸೂರ್ಯವಂಶಸ್ಥನಾದ ರಾಜನು ಶಾಪದಿಂದ ರಾಕ್ಷಸ ನಾಗಿದ್ದೀಯೆ ಹನ್ನೆರಡು ವರ್ಷಗಳಾದ ಬಳಿಕ ನೀನು ಮೊದಲಿನಂತೆಯೇ ರಾಜನಾಗುವಿ ದುಷ್ಟತನದಿಂದ ನನ್ನ ಪತಿಯನ್ನು ತಿಂದುದರಿಂದ ನೀನು ನಿನ್ನ ಸತಿಯಲ್ಲಿ ರಮಿಸಿದಾಗ ನೀನು ಸಾಯುವಿ ಎಂದು ಶಪಿಸಿ ಪತಿಯ ಅಸ್ಥಿಯೊಡನೆ ಆಕೆಯೂ ಅಗ್ನಿಪ್ರವೇಶ ಮಾಡಿದಳು ಹನ್ನೆರಡು ವರ್ಷ ಗಳಾದಬಳಿಕ ಶಾಪವಿಮೋಚನೆಯಾಗಿ ಆತನು ರಾಜನಾದನು. ತನ್ನ ನಗ ರಕ್ಕೆ ಬಂದು ತನ್ನ ರಾಣಿಯೊಡನೆ ಆ ಬ್ರಾಹ್ಮಣಿಯ ಶಾಪ ವೃತ್ತಾಂತ ವನ್ನು ಹೇಳಿದನು ಇದನ್ನು ಕೇಳಿದ ಮದಯಂತಿಯು ದುಃಖಿಸಿ ಪತಿಯೇ, ನಮಗೆ ಮಕ್ಕಳಾಗಲಿಲ್ಲ. ಹನ್ನೆರಡು ವರ್ಷಗಳು ಕಾಡಿನಲ್ಲಿದ್ದರೂ ಅಲ್ಲಿ ಯೂ ನಿಮ್ಮಿಂದ ಬಂದು ತಪ್ಪು ಮಾಡಲ್ಪಟ್ಟಿತು ಎಂದಳು. ಬಳಿಕ ರಾಜನು ಕಣ್ಣಿನಲ್ಲಿ ನೀರು ತುಂಬಿದವನಾಗಿ ಮಂತ್ರಿ ಪುರೋಹಿತರನ್ನು ಕರೆಯಿಸಿ ತನ್ನ ಬ್ರಹ್ಮಹತ್ಯೆಯ ಬಿಡುಗಡೆಗೆ ಏನು ಮಾಡಬೇಕೆಂದು ಕೇಳಿದನು

ಆಗ ಅವರು ರಾಜನೆ, ನೀನು ಸಕಲ ಕ್ಷೇತ್ರಗಳಲ್ಲಿಯೂ ತೀರ್ಥ ಯಾತ್ರೆಮಾಡಿದರೆ ನಿನ್ನ ಬ್ರಹ್ಮಹತ್ಯೆಯು ಹೋಗುವದೆಂದರು

ಆಗ ರಾಜನು ತೀರ್ಥಯಾತ್ರೆಗೆ ಹೊರಟು ವಿಧಿಯುಕ್ತವಾಗಿ ಆಚ ರಣೆಮಾಡಿ ಎಲ್ಲಾ ಕ್ಷೇತ್ರಗಳಲ್ಲಿಯೂ ಯಾಗಾದಿಗಳನ್ನು ಮಾಡುತ್ತಾ ಅನ್ನದಾನಗಳನ್ನು ಮಾಡಿದನು. ಆದರೂ ಬ್ರಹ್ಮಹತ್ಯೆಯು ಘೋರ

ರೂಪಿನಿಂದ ಇವನನ್ನು ಹಿಂಬಾಲಿಸಿ ಬರುತ್ತಿತ್ತು. ಹೀಗೆ ರಾಜನು ಸಂಚರಿಸುತ್ತಾ ಮಿಥಿಲಾಪುರಿಗೆ ಬಂದು ಆ ನಗರದ ಹೊರಭಾಗದಲ್ಲಿ ಬಳಲಿದವನಾಗಿ ಬಂದು ಮರದಡಿಯಲ್ಲಿ ಕುಳಿತನು. ಅಲ್ಲಿಗೆ ಆಕಸ್ಮಿಕವಾಗಿ ರುದ್ರಸ್ವರೂಪರಾದ ಗೌತಮ ಮುನಿಗಳು ಬಂದರು

ರಾಜನು ಇವರನ್ನುನೋಡಿ ಭಕ್ತಿಯಿಂದ ವಂದಿಸಿದನು ಆಗ ಗೌತಮರು ಎಲೈ ರಾಜನೇ, ನೀನು ನಿನ್ನ ಪರಿವಾರದೊಡನೆ ಕ್ಷೇಮವಾಗಿರುವಿಯಾ? ಈಗ ನೀನು ಕಾಡಿನಲ್ಲಿ ಸಂಚರಿಸಲು ಕಾರಣವೇನು? ನಿನ್ನ ಮುಖವನ್ನು ನೋಡಿದರೆ ಚಿಂತಾಕ್ರಾಂತನಾದಂತೆ ತೋರುವುದು. ಇದಕ್ಕೆ ಕಾರಣವೇನು? ಎಂದು ಕೇಳಿದರು.

ಆಗ ರಾಜನು ಮಹಾಸ್ವಾಮಿ, ನನಗೆ ಬ್ರಹ್ಮಹತ್ಯಾ ದೋಷವು ಬಂದಿತು, ಇದಕ್ಕಾಗಿ ನಾನು ತೀರ್ಥಯಾತ್ರೆಗೈಯುತ್ತಾ ಬಂದೆನು ಬ್ರಹ್ಮಹತ್ಯೆಯು ಘೋರರೂಪಿನಿಂದ ನನ್ನನ್ನು ಹಿಂಬಾಲಿಸುತ್ತಿರುವುದು ಈಗ ತಮ್ಮ ಚರಣ ಸಂದರ್ಶನವಾದುದರಿಂದ ಇನ್ನು ನನ್ನ ಕಷ್ಟ ನಿವಾರಣೆಯಾಗುವುದು ಎಂದು ವಂದಿಸಿದನು.

ಗೌತಮರು ಇವನ ಮಾತನ್ನು ಕೇಳಿ ಕರುಣೆಯಿಂದ ಎಲೈ ರಾಜನೆ, ಶಂಕರನು ನಿನ್ನನ್ನು ಈ ಬ್ರಹ್ಮಹತ್ಯೆಯಿಂದ ಬಿಡುಗಡೆಮಾಡುವನು. ನಿನ್ನ ಪಾಪವು ಹೋಗುವುದು. ಗೋಕರ್ಣ ಕ್ಷೇತ್ರಕ್ಕೆ ಹೋಗು.

ಈ ಕ್ಷೇತ್ರವು ಕೈಲಾಸಕ್ಕೆ ಸಮಾನವು. ಸೂರ್ಯಚಂದ್ರರಿಂದ ಕತ್ತಲೆಯು ಹೋಗುವಂತೆ ಸರ್ವತೀರ್ಥಗಳಲ್ಲಿಯೂ ಹೋಗದಿರುವ ಪಾಪವು ಈ ಗೋಕರ್ಣದರ್ಶನದಿಂದ ಹೋಗುವುದು ಸಾವಿರ ಬ್ರಹ್ಮಹತ್ಯಾ ದೋಷಗಳು ಕೂಡಾ ಈ ಕ್ಷೇತ್ರ ಸಂದರ್ಶನದಿಂದ ಪರಿಹಾರವಾಗುವುದು. ಬ್ರಹ್ಮ ರುದ್ರೇಂದ್ರಾದಿಗಳು ಅಲ್ಲಿ ತಪಸ್ಸನ್ನುಮಾಡಿ ಸಿದ್ಧಿಯನ್ನು ಪಡೆದರು. ಈ ಕ್ಷೇತ್ರದಲ್ಲಿ ಭಕ್ತಿಯಿಂದ ಜಪ ವ್ರತಾದಿಗಳನ್ನು ಮಾಡಿದರೆ ಲಕ್ಷಗುಣವುಳ್ಳ ಫಲವನ್ನು ಕೊಡುವುದು ಈ ಕ್ಷೇತ್ರವು ಕೈಲಾಸಕ್ಕೆ ಸಮಾನವಾದುದು. ಅಲ್ಲಿ ಮಹಾಬಲೇಶ್ವರ ಲಿಂಗವನ್ನು ವಿಘ್ನೇಶ್ವರನು ಪ್ರತಿಷ್ಠೆಮಾಡಿದನು. ಸುರರೆಲ್ಲರೂ ಆ ಕ್ಷೇತ್ರದಲ್ಲಿ ವಾಸಿಸು

ತ್ತಾರೆ. ಬ್ರಹ್ಮನೂ, ಹರಿಯೂ, ಇಂದ್ರನೂ, ವಿಶ್ವೇದೇವತೆಗಳೂ, ಮರುದ್ಗಣವೂ, ಸೂರ್ಯಚಂದ್ರರೂ, ವಸ್ವಾದಿಗಳೂ, ಅಲ್ಲಿನ ಪೂರ್ವದ್ವಾರದಲ್ಲಿರುವರು. ಅಲ್ಲಿ ಇವರು ಭಕ್ತಿಯಿಂದ ಕುಳಿತಿರುವರು. ಅಗ್ನಿ, ಯಮ, ಚಿತ್ರಗುಪ್ತರೂ, ಏಕಾದಶರುದ್ರರೂ, ಪಿತೃದೇವತೆಗಳೂ ದಕ್ಷಿಣದ್ವಾರದಲ್ಲಿರುವರು. ವರುಣನೂ ಗಂಗೆಯೂ ಪಶ್ಚಿಮದ್ವಾರದಲ್ಲಿರುವರು. ಕುಬೇರನೂ ವಾಯುವೂ ಭದ್ರಕಾಳಿಯೂ ಮಾತೃದೇವತೆಗಳೂ ಚಂಡಿಯೂ ಉತ್ತರದ್ವಾರದಲ್ಲಿರುವರು. ಇವರು ತ್ರಿಕಾಲದಲ್ಲಿಯೂ ಮಹಾಬಲೇಶ್ವರನನ್ನು ಪೂಜಿಸುತ್ತಿರುವರು. ಚಿತ್ರಸೇನ ಚಿತ್ರರಥರೂ ವಿಶ್ವಾವಸು ಮುಂತಾದ ಗಂಧರ್ವರೂ ರಂಭೆ, ಘೃತಾಚಿ, ಮೇನಕಿ, ತಿಲೋತ್ತಮೆ, ಊರ್ವಶಿಗಳೆಂಬ ಅಪ್ಸರಸ್ತ್ರೀಯರೂ ಮಹಾಬಲೇಶ್ವರನ ಎದುರಿನಲ್ಲಿ ಸದಾ ನರ್ತಿಸುತ್ತಿರುವರು ವಸಿಷ್ಠರೂ ಕಶ್ಯಪರೂ ವಿಶ್ವಾಮಿತ್ರರೂ ಭರದ್ವಾಜರೂ ಜೈಮಿನಿಯೂ ಜಾಬಾಲಿಗಳೂ ಅಲ್ಲಿ ಮಹಾಬಲೇಶ್ವರನನ್ನು ಪೂಜಿಸುತ್ತಿರುವರು

ಮರೀಚಿ, ಅತ್ರಿ, ನಾರದ, ದಕ್ಷಾದಿಗಳೂ ಸನಕಾದಿ ತಪಸ್ವಿಗಳೂ ಉಪನಿಷತ್ತುಗಳಿಂದ ಪೂಜಿಸುತ್ತಿರುವರು ಅನೇಕರಾದ ಸಿದ್ಧಸಾಧ್ಯರೂ, ಅಜಿನಧಾರಿಗಳಾದ ಮುನೀಶ್ವರರೂ, ದಂಡಧಾರಿಗಳಾದ ಸನ್ಯಾಸಿಗಳೂ, ನಿರ್ಗುಣಬ್ರಹ್ಮಚಾರಿಗಳೂ ಅಲ್ಲಿ ವಾಸಿಸುವರು ಚರ್ಮವೂ ಎಲುಬೂ ಮಾತ್ರವುಳ್ಳ ಶರೀರಿಗಳಾದ ತಪಸ್ವಿಗಳೂ ಭಕ್ತಿಯಿಂದ ಮಹಾಬಲೇಶ್ವರನನ್ನು ಅರ್ಚಿಸುತ್ತಿರುವರು ಗಂಧರ್ವಾದಿದೇವತೆಗಳೂ ಪಿತೃದೇವತೆಗಳೂ ಸಿದ್ಧರೂ ಅಷ್ಟವಸುಗಳೂ ವಿದ್ಯಾಧರರೂ ಕಿಂಪುರುಷರೂ ಸದಾ ಮಹಾಬಲೇಶ್ವರನ ದರ್ಶನಕ್ಕೆ ಬರುತ್ತಿರುವರು. ಗುಹ್ಯರೂ ಕಿನ್ನರರೂ ಶೇಷ ತಕ್ಷಕಾದಿಗಳೂ ಪಿಶಾಚವೇತಾಳಾದಿಗಳೂ ಅಲ್ಲಿಗೆ ಪೂಜೆಗಾಗಿ ಬರುತ್ತಿರುವರು ಸೂರ್ಯ ಚಂದ್ರಾದಿಗಳೂ ಸಕಲಾಭರಣ ಭೂಷಿತರಾಗಿ ವಿಮಾನಗಳಲ್ಲಿ ಕುಳಿತು ಅಲ್ಲಿಗೆ ಬರುತ್ತಿರುವರು ಮತ್ತೆ ಕೆಲವರು ಗಾನಮಾಡುತ್ತಲೂ, ನಮಸ್ಕರಿಸುತ್ತಲೂ, ನರ್ತಿಸುತ್ತಲೂ ಪೂಜೆಗೆ ಬರುತ್ತಿರುವರು ಅವರು ಅಲ್ಲಿ ತಮ್ಮ ಇಷ್ಟಾರ್ಥಗಳನ್ನು ಹೊಂದುತ್ತಿರುವರು ಈ ಕ್ಷೇತ್ರಕ್ಕೆ ಸಮಾನವಾದ ಕ್ಷೇತ್ರವು ಈ ಭೂಮಂಡಲದಲ್ಲಿಲ್ಲವು.

ಶಿಂಶುಮಾರೀ ಭದ್ರಕಾಳಿಯರು ತ್ರಿಕಾಲದಲ್ಲೂ ಬಂದು ಮಹಾ ಬಲೇಶ್ವರನನ್ನು ಪೂಜಿಸುತ್ತಿರುವರು. ಹಾವು, ಗರುಡ, ಗಿಳಿ ಮುಂತಾದ ಪ್ರಾಣಿಗಳೂ ಅಲ್ಲಿಗೆ ದೇವರ ದರ್ಶನಕ್ಕೆ ಬರುತ್ತಿರುವುವು ರಾವಣ ಕುಂಭಕರ್ಣ ವಿಭೀಷಣಾದಿಗಳು ಇಲ್ಲಿ ತಪಸ್ಸನ್ನು ಮಾಡಿ ಸಿದ್ಧಿಯನ್ನು ಹೊಂದಿದರು ಈ ರೀತಿಯಿಂದ ದೇವತೆಗಳೂ ಸಿದ್ಧರೂ ರಾಕ್ಷಸರೂ ಈ ಕ್ಷೇತ್ರಕ್ಕೆ ಬಂದು ಪೂಜಿಸುತ್ತಿರುವರು ಬ್ರಹ್ಮನೂ ವಿಷ್ಣುವೂ ಕಾರ್ತವೀರ್ಯನೂ ಗಣೇಶನೂ ಧರ್ಮದೇವತೆಯೂ ಕ್ಷೇತ್ರಪಾಲನೂ ಮುಂತಾದ ದೇವತೆಗಳೆಲ್ಲರೂ ಅಲ್ಲಿ ತಮ್ಮ ಹೆಸರಿನಿಂದ ಲಿಂಗಗಳನ್ನು ಸ್ಥಾಪಿಸಿದರು. ಇಲ್ಲಿ ಅಸಂಖ್ಯಾತ ಲಿಂಗಗಳಿವೆ ಲೆಕ್ಕವಿಲ್ಲದಷ್ಟು ತೀರ್ಥಗಳಿವೆ ಅಲ್ಲಿರುವ ಕಲ್ಲುಗಳೆಲ್ಲವೂ ಲಿಂಗಗಳೂ ಅಲ್ಲಿನ ನೀರೆಲ್ಲವೂ ತೀರ್ಥಗಳೂ ಆಗಿವೆ

ಕೃತಯುಗದಲ್ಲಿ ಮಹಾಬಲೇಶ್ವರಲಿಂಗವು ಬಿಳುಪಾಗಿಯೂ, ತ್ರೇತಾಯುಗದಲ್ಲಿ ಲೋಹಿತವರ್ಣವಾಗಿಯೂ, ದ್ವಾಪರದಲ್ಲಿ ಚಿನ್ನದ ಬಣ್ಣವುಳ್ಳದ್ದಾಗಿಯೂ, ಕಲಿಯುಗದಲ್ಲಿ ಕಪ್ಪುಬಣ್ಣವುಳ್ಳದ್ದಾಗಿಯೂ ಇರುವುದು ಈ ಲಿಂಗವು ಸಪ್ತಪಾತಾಳದವರೆಗೂ ವ್ಯಾಪಿಸಿರುವುದು ಕಲಿಯುಗದಲ್ಲಿ ಈ ಲಿಂಗವು ಮೃದುವಾಗಿಯೂ ಸೂಕ್ಷ್ಮವಾಗಿಯೂ ಕಾಣಿಸುವುದು ಈ ಪಶ್ಚಿಮ ಸಮುದ್ರತೀರದಲ್ಲಿ ಬ್ರಹ್ಮಹತ್ಯಾದಿ ಪಾಪಗಳು ನಾಶವಾಗುವುವು ಪರದಾರ ಗಮನಾದಿ ಷಟ್ಪಾಪಗಳೂ, ದುರಾಚಾರದ ಪಾಪಗಳೂ ಪರಿಹಾರವಾಗುವುವು ಈ ಲಿಂಗದರ್ಶನದಿಂದ ಸಕಲೇಷ್ಟಗಳೂ ಸಿದ್ಧಿಸಿ ಅಂತ್ಯದಲ್ಲಿ ಸದ್ಗತಿಯುಂಟಾಗುವುದು ಅಲ್ಲಿ ಪುಣ್ಯ ದಿನಗಳಲ್ಲಿ ಮಹಾಬಲೇಶ್ವರನನ್ನು ಅರ್ಚಿಸಿದರೆ ಅವರು ರುದ್ರಾಂಶವನ್ನು ಹೊಂದುವರು

ಭಾನು-ಸೋಮ-ಬುಧವಾರಗಳಲ್ಲಿಯೂ ಅಮಾವಾಸ್ಯೆ ಮುಂತಾದ ಪರ್ವಣಿಗಳಲ್ಲಿಯೂ ಸಮುದ್ರಸ್ನಾನಮಾಡಿ ದಾನಧರ್ಮಮಾಡಬೇಕು ಶಿವಪೂಜೆಯನ್ನೂ ಹವನ ಜಪಗಳನ್ನೂ ಬ್ರಾಹ್ಮಣ ಸಂತರ್ಪಣೆಯನ್ನೂ ಸ್ವಲ್ಪವಾಗಿ ಮಾಡಿದರೂ ಅನಂತ ಪುಣ್ಯವುಂಟಾಗುವುದು ವ್ಯತೀಪಾತ ಸಂಕ್ರಾಂತಿಗಳಲ್ಲಿಯೂ ಶನಿತ್ರಯೋದಶಿಯಲ್ಲಿಯೂ ಶಿವನನ್ನು ಪೂಜಿಸಿದರೆ ಶಂಕರನು ಸಂತುಷ್ಟನಾಗುವನು ಶಿವರಾತ್ರಿಯಲ್ಲಿ ಪೂಜಿಸಿದರೆ (ಬಿಲ್ವಪತ್ರೆಯಿಂದ) ಅತಿಶಯವಾದ ಪುಣ್ಯವುಂಟು. ಮೂಢರು ಇದನ್ನು ತಿಳಿದಿ

ದ್ದರೂ ಈ ಕ್ಷೇತ್ರಕ್ಕೆ ಹೋಗುವುದಿಲ್ಲ ಇಲ್ಲಿ ಕ್ಷೇತ್ರೋಪವಾಸ ಜಾಗ ರಣೆಗಳನ್ನು ಮಾಡಿದರೆ ಆ ಪುಣ್ಯವು ಸ್ವರ್ಗಸೋಪಾನವಾಗುವುದು. ಈ ಕ್ಷೇತ್ರಕ್ಕೆ ಯಾತ್ರೆಗೆ ಹೋಗುವವರು ಚತುರ್ವಿಧ ಪುರುಷಾರ್ಥಗಳನ್ನು ಪಡೆವರು. ಅಲ್ಲಿನ ತೀರ್ಥಗಳಲ್ಲೆಲ್ಲಾ ಸ್ನಾನ ಮಾಡಿ ಭಕ್ತಿಯಿಂದ ಮಹಾಬಲೇಶ್ವರನನ್ನು ಪೂಜಿಸಿದರೆ ಅವನು ಪಾಪದಿಂದ ಬಿಡುಗಡೆಯಾಗು ವನು ಎಂದು ಗೌತಮರು ಹೇಳಿದರು

ಆಗ ರಾಜನು ಸ್ವಾಮಿ! ತಾವು ಹೇಳಿದ ಆ ಕ್ಷೇತ್ರದಲ್ಲಿ ಯಾರು ಸಿದ್ಧಿ ಹೊಂದಿದರು? ಇದಕ್ಕೆ ಸಾಕ್ಷಿ ಏನು? ಇದನ್ನು ವಿಸ್ತಾರವಾಗಿ ನಿರೂಪಿಸಿರಿ ಎಂದು ವಂದಿಸಿದನು.

ಆಗ ಗೌತಮರು, ರಾಜನೇ ಈ ಕ್ಷೇತ್ರವನ್ನು ಬಹುಕಾಲದಿಂದ ಬಲ್ಲೆನು. ಅಲ್ಲಿ ಅಪಾರವಾದ ಸಾಕ್ಷಿಗಳನ್ನು ನೋಡಿದೇನೆ. ನಾನೊಂದು ಬಾರಿ ಅಲ್ಲಿಗೆ ಹೋಗಿರಲು ಅಲ್ಲಿ ವಿಚಿತ್ರ ದೃಷ್ಟಾಂತವನ್ನು ಕಂಡೆನು. ಅಲ್ಲಿ ಯಾತ್ರೆಗೆ ಬಹುಜನರು ಬಂದಿದ್ದರು ನಾನು ಮಧ್ಯಾಹ್ನದಲ್ಲಿ ಒಂದು ಮರದಡಿಯಲ್ಲಿ ಕುಳಿತಿದ್ದೆನು ಅಲ್ಲಿ ದೂರದಲ್ಲಿ ಕುರುಡಿಯಾದ ಒಬ್ಬ ಮುದುಕಿಯು ರೋಗಿಯಾಗಿಯೂ, ಬತ್ತಿದ ಮುಖವುಳ್ಳವಳಾಗಿಯೂ, ನಿರಾಹಾರಿಯಾಗಿಯೂ ದೇಹವೆಲ್ಲೆಲ್ಲಾ ತೂಸ್ನುಳ್ಳವಳಾಗಿಯೂ, ಮೈಯಲ್ಲಿ ಹುಳುಗಳಿಂದ ತುಂಬಿದವಳಾಗಿಯೂ, ದುರ್ಗಂಧವುಳ್ಳವಳಾಗಿಯೂ, ಹೊಟ್ಟೆ ನೋವು, ಗಂಡಮಾಲೆ ರೋಗವುಳ್ಳವಳಾಗಿಯೂ, ಕಫದಿಂದ ಕೂಡಿದವ ಳಾಗಿಯೂ ಹೊದಿಯಲು ಬಟ್ಟೆಯಿಲ್ಲದವಳಾಗಿಯೂ, ಚಂದ್ರ, ಸೂರ್ಯ ಕಿರಣಗಳು ಮೈಮೇಲೆ ಬೀಳಲು ಕಂಠಗತ ಪ್ರಾಣವುಳ್ಳವಳಾಗಿಯೂ, ಸರ್ವಾಂಗ ಶೂಲೆಯುಳ್ಳವಳಾಗಿಯೂ, ವಿಧವೆಯಾಗಿಯೂ ಇರುವ ಆ ಚಾಂಡಾಲೆಯು ಒಂದು ಗಿಡದಡಿಯಲ್ಲಿಪ್ರಾಣವನ್ನು ಬಿಟ್ಟಳು. ಆಗ ಆಕೆ ಯನ್ನು ಕರೆದೊಯ್ಯಲು ತ್ರಿಶೂಲಧಾರಿಗಳಾದ ಶಿವದೂತರು ವಿಮಾನದಲ್ಲಿ ಕುಳಿತುಬಂದರು. ಆಗ ಆ ಚಾಂಡಾಲಿಸಿಯು ಸೂರ್ಯನಂತೆ ಕಾಂತಿಯುಳ್ಳವ ಳಾದಳು ಆಗ ನಾನು ಅವರನ್ನುನೋಡಿ ಎಲೈ ಶಿವದೂತರೇ! ನೀವು ಇಲ್ಲಿಗೆ ಏಕೆಬಂದಿರಿ? ಎಂದು ಕೇಳಿದೆನು ಆಗ ಅವರು ಈಕೆಯನ್ನು ಕೈಲಾಸಕ್ಕೆ ಕರೆದೊಯ್ಯಲು ಬಂದೆವೆಂದು ಹೇಳಿದರು. ಆಗ ನಾನು ಆಶ್ಚರ್ಯದಿಂದ ಅವರನ್ನು ಕೇಳಿದೆನು

ಶಿವದೂತರೇ ಈ ಪಾಪಿಯು ವಿಮಾನವನ್ನೇರಲು ಹೇಗೆ ಯೋಗ್ಯಳಾದಾಳು ? ಈಕೆಯು ಹುಟ್ಟಿದಂದಿನಿಂದ ಪಾಪ ಮಾಡಿದವಳು ಈಕೆಯು ಶಿವನನ್ನು ಧ್ಯಾನಿಸಲಿಲ್ಲ. ಈಕೆಯು ಜೀವಹಿಂಸೆಮಾಡಿ ಪಶುಮಾಂಸವನ್ನು ತಿನ್ನುತಿದ್ದಳು. ಇಂಥಾ ಕುಷ್ಠರೋಗಿಯನ್ನೇಕೆ ಕರೆದೊಯ್ಯುವಿರಿ ? ಈಕೆಯು ಶಿವನನ್ನು ಪೂಜಿಸಲಿಲ್ಲ. ಪಂಚಾಕ್ಷರಿಯನ್ನು ಜಪಿಸಲಿಲ್ಲ ಯಾಗಾದಿಗಳನ್ನು ಮಾಡಲಿಲ್ಲ ಪರ್ವಕಾಲದಲ್ಲಿ ಸ್ನಾನಮಾಡಲಿಲ್ಲ ವ್ರತಗಳನ್ನು ಮಾಡಲಿಲ್ಲ. ಮೈಯಲ್ಲೆಲ್ಲಾ ಕೀವು ರಕ್ತಗಳುಳ್ಳವಳಾಗಿರುವಳು ಈಕೆಯು ಪೂರ್ವಜನ್ಮದಲ್ಲಿಯೂ ಶಿವನನ್ನು ಅರ್ಚಿಸಲಿಲ್ಲ ಈಕೆಯು ಸರ್ವಾಂಗಗಳಲ್ಲೂ ಕುಷ್ಠವುಳ್ಳವಳಾಗಿಯೂ ಬಾಯಿಯಲ್ಲಿ ಹುಳುಗಳು ಬೀಳುತ್ತಿರುವವಳಾಗಿಯೂ ಇರುವಳು ಹೀಗಿರಲು ಈಕೆಯ ಪೂರ್ವ ಸುಕೃತವೇನಿದೆ ? ಈಕೆಯ ವೃತ್ತಾಂತವು ಏನೆಂದರೆ —

ಈಕೆಯು ಪೂರ್ವದಲ್ಲಿ ಒಬ್ಬ ಬ್ರಾಹ್ಮಣನ ಕುಮಾರಿಯಾಗಿದ್ದಳು. ಈಕೆಯ ಹೆಸರು ಸೌಮಿನಿ ಎಂದು ಪ್ರಸಿದ್ಧವಾಗಿತ್ತು ಈಕೆಯು ಚಂದ್ರನಂತೆ ಮುಖವುಳ್ಳವಳಾಗಿದ್ದಳು ಈಕೆಯನ್ನು ಒಬ್ಬ ಬ್ರಾಹ್ಮಣನಿಗೆ ಕೊಟ್ಟು ಲಗ್ನವಾಗಿತ್ತು. ಈಕೆಯು ಪತಿಗೃಹದಲ್ಲಿ ಕೆಲವು ಕಾಲ ಸುಖವಾಗಿದ್ದಳು. ಬಳಿಕ ಈಕೆಯ ಗಂಡನು ಸ್ವರ್ಗಸ್ಥನಾದನು ಇದನ್ನು ಕೇಳಿ ಈಕೆಯ ತಂದೆ ತಾಯಿಗಳು ದುಃಖಿಸಿ ಈಕೆಯನ್ನು ತಮ್ಮ ಮನೆಗೆ ಕರೆದುಕೊಂಡು ಬಂದರು ಅಲ್ಲಿ ಪತಿಗಾಗಿ ಸ್ವಲ್ಪಕಾಲ ದುಃಖಿಸಿ ಬಳಿಕ ಯೌವ್ವನವತಿಯಾದ ಈಕೆಯು ಚಂಚಲ ಮನಸ್ಸಿನಿಂದ ಕೂಡಿ ಹಾದರ ಮಾಡುತ್ತಿದ್ದಳು ಬಳಿಕ ಈಕೆಯ ಕೃತ್ಯವು ಹೊರಪಟ್ಟಿತು ಈಕೆಯ ಬಂಧುಗಳೂ, ತಾಯಿತಂದೆಗಳೂ ಈಕೆಯನ್ನು ಬಿಟ್ಟು ಪ್ರಾಯಶ್ಚಿತ್ತ ಮಾಡಿಕೊಂಡು ಶುದ್ಧರಾದರು ಆಗ ಈಕೆಯು ಹೆದರಿಕೆ ಇಲ್ಲದೆ ಬಹಿರಂಗವಾಗಿ ವ್ಯಭಿಚರಿಸುತ್ತಿದ್ದಳು ಈಕೆಯು ಇದ್ದ ಊರಿನಲ್ಲಿ ಪೂರ್ವ ವಯಸ್ಸಿನ ಸುಂದರನಾದ ಒಬ್ಬ ವೈಶ್ಯನೊಡನೆ ವಿಹರಿಸುತ್ತಿದ್ದಳು ದುರಾಚಾರಿಣಿಯಾದ ಈಕೆಯು ನಾಲ್ವತ್ತೆರಡು ಕುಲಗಳಿಗೆ ಹಗೆಯಾದಳು.

ಸ್ತ್ರಿಯಃಕಾಮೇನನಶ್ಯಂತಿ ಬ್ರಾಹ್ಮಣೋ ಹೀನಸೇವಯಾಃ ।
ರಾಜಾನೋ ಬ್ರಹ್ಮದಂಡೇನ ಯತಯೋ ಭೋಗಸಂಗ್ರಹಾತ್ ॥

स्त्रियःकामेननश्यंति ब्राह्मणोहीनसेवया ।
राजानोब्रह्मदंडेन यतयोभोगसंग्रहात् ॥

(ಹೆಂಗಸರು ಕಾಮದಿಂದಲೂ ಬ್ರಾಹ್ಮಣನು ನೀಚರ ಸೇವೆಯಿಂದಲೂ ರಾಜನು ಬ್ರಾಹ್ಮಣರನ್ನು ಶಿಕ್ಷಿಸುವುದರಿಂದಲೂ, ಸನ್ಯಾಸಿಗಳು ವಿಷಯ ಸುಖವನ್ನು ಅನುಭವಿಸುವುದರಿಂದಲೂ ನಾಶವಾಗುವರು.)

ಈಕೆಗೊಬ್ಬ ಮಗನಾದನು. ಈಕೆಯು ನಿತ್ಯವೂ ಮದ್ಯಪಾನ ಮಾಡುತ್ತಾ ದುರಾಚಾರವುಳ್ಳವಳಾಗಿದ್ದಳು. ಒಂದು ದಿನ ಈಕೆಯು ಉನ್ಮತ್ತಳಾಗಿ ಆಹಾರಕ್ಕೋಸುಗ ಕುರಿ ಎಂದು ಹಸುವಿನ ಕರುವನ್ನು ಕೊಂದು ಅಡಿಗೆ ಮಾಡಿದಳು. ಅದರ ತಲೆಯನ್ನು ಮಾರನೇ ದಿವಸದ ತಿಂಡಿಗೆಂದು ನೆಲದ ಮೇಲಿಟ್ಟಿದ್ದಳು. ಅಸ್ತಮಾನ ಕಾಲದಲ್ಲಿ ಮದ್ಯದ ಮತ್ತು ಇಳಿದಾಗ ಅದನ್ನು ನೋಡಿ ಕರುವೆಂದು ತಿಳಿದು ದುಃಖಿಸಿ ಅಜ್ಞಾನ ದಿಂದ ಶಿವಶಿವಾ ! ಎಂದು ಹೇಳಿ ಆ ತಲೆಯನ್ನು ನೆಲದಲ್ಲಿ ಹೂಳಬಿಟ್ಟಳು.

ಆಗ ತನ್ನ ವಿಟನೊಡನೆಯೂ, ನೆರೆಹೊರೆಯವರೊಡನೆಯೂ ಹುಲಿಯು ಬಂದು ಕರುವನ್ನೊಯ್ದು ತಿಂದಿತು ಎಂದು ಸುಳ್ಳು ಹೇಳಿದಳು. ಬಳಿಕ ಕೆಲವು ಕಾಲದ ಮೇಲೆ ಈಕೆಯು ಸಾಯಲು ಯಮ ನಾಳುಗಳು ಈಕೆಯನ್ನು ಬಾಧಿಸಿದ್ದರು. ಮುಂದೆ ಈಕೆಯು ಚಾಂಡಾಲ ಜಾತಿಯಲ್ಲಿ ಹುಟ್ಟಿದಳು. ಆಗ ಕುರುಡಿಯಾಗಿಯೂ, ಕಪ್ಪಾದ ವಿಕಾರ ರೂಪವುಳ್ಳವಳಾಗಿಯೂ ಇದ್ದಳು. ಈಕೆಯ ತಾಯಿ ತಂದೆಗಳು ಈಕೆ ಯನ್ನು ಮಮತೆಯಿಂದ ಸಾಕಿದರು. ಈಕೆಯ ನೆಂಟರು ಈಕೆಗೆ ಎಂಜ ಲನ್ನವನ್ನು ಹಾಕಿದರು. ಈಕೆಗೆ ತೊನ್ನುರೋಗ ಉಂಟಾಯಿತು. ಈಕೆಯ ತಾಯಿ ತಂದೆಗಳು ಸತ್ತರು. ನಿರಾಶ್ರಯಳಾದಳು. ಈಕೆಯ ಅಣ್ಣತಮ್ಮ ದಿಂರೆರೇ ಮುಂತಾದ ನೆಂಟರು ಈಕೆಯನ್ನು ಮನೆಯಿಂದ ಹೊರಡಿಸಿದರು. ಆಗ ಈಕೆಯು ಭಿಕ್ಷೆಯಿಂದ ಜೀವಿಸುತ್ತಿದ್ದಳು. ಈಕೆಗೆ ಅನ್ನ ಬಟ್ಟೆ ಗಳು ದೊರೆಯಲಿಲ್ಲ. ಈಕೆಯು ಪೂರ್ವ ಕರ್ಮದಿಂದ ಮುದುಕಿಯಾಗಿ ಕಷ್ಟ

ಪಡುತ್ತಾ ದಾರಿಯಲ್ಲಿ ಕುಳಿತು ಜನರನ್ನು ಕುರಿತು ಭಿಕ್ಷ ಬೇಡ ತಿ ದ್ದಳು ಆದರೂ ಹೊಟ್ಟೆಯು ತುಂಬಲಿಲ್ಲ ಅತಿಯಾಗಿ ದುಃಖಿಸುತ್ತಿದ್ದಳು. ಈಕೆಯು ಮೈಯ್ಯಲ್ಲೆಲ್ಲಾ ತೊನ್ನುಳ್ಳವಳಾಗಿಯೂ ಕೀವು ರಕ್ತಗಳಿಂದ ಕೂಡಿ ದುರ್ಗಂಧವುಳ್ಳವಳಾಗಿಯೂ ಇದ್ದಳು ಹೀಗಿರಲು ಒಂದು ದಿನ ಮಾಘಮಾಸದಲ್ಲಿ ಜನರು ಯಾತ್ರೆಗೋಸ್ಕರವಾಗಿ ಗೋಕರ್ಣಕ್ಕೆ ಹೋಗು ತ್ತಿದ್ದರು ಶಿವರಾತ್ರಿಯಲ್ಲಿ ಅನೇಕ ದೇಶಗಳಿಂದ ಜನರು ಸಂತೋಷ ದಿಂದ ಗೋಕರ್ಣಕ್ಕೆ ಬರುತ್ತಿದ್ದರು.

ಅನೇಕ ರಾಜರುಗಳು ಚತುರಂಗ ಸೇನೆಯೊಡನೆ ನಾನಾ ವಿಧಗ ಳಾದ ವಾದ್ಯ ಶಬ್ದಗಳೊಡನೆ ಬರುತ್ತಿದ್ದರು ಕೆಲವರು ನಗುತ್ತಲೂ, ಗಾಯನಮಾಡುತ್ತಲೂ ಬರುತ್ತಿದ್ದರು ಈಕೆಯು ಈ ಜನರೊಡನೆಯೂ, ಅನೇಕ ಭಿಕ್ಷುಕರೊಡನೆಯೂ ಹೊರಟು ಭಿಕ್ಷದಿಂದ ಜೀವಿಸುತ್ತಾ ಮತ್ತೊಬ್ಬರಿಂದ ತನ್ನ ಕೈಯನ್ನು ಹಿಡಿಸಿಕೊಂಡು ಪಯಣಮಾಡುತ್ತಿ ದ್ದಳು. ದಾರಿಯಲ್ಲಿ ಕುಳಿತು ಅಯ್ಯಾ ದಾರಿಗರೇ ಪಾಪಿಯಾದ ನನಗೆ ಭಿಕ್ಷೆಯನ್ನು ಕೊಡಿಸಿರಿ, ಹಸಿದಿರುವೆನು ಎಂದು ಬೇಡುತ್ತಿದ್ದಳು. ಹೊದೆಯಲು ಬಟ್ಟೆಯಿಲ್ಲ, ಹಸಿವಿನಿಂದ ಸಾಯುತ್ತೇನೆ, ಧರ್ಮಮಾಡಿ ಎನ್ನುತ್ತಿದ್ದಳು ಅಯ್ಯೋ ಪಾಪ ! ಸರ್ವಾಂಗದಲ್ಲಿಯೂ ರೋಗಗ್ರಸ್ಥ ಳಾಗಿಯೂ, ಹಸಿದಿರುವವಳಾಗಿಯೂ ಇರುವ ಈ ಕುರುಡಿಯು ಜನರನ್ನು ಬೇಡುತ್ತಿದ್ದಳು. ಪೂರ್ವದ ನೂರು ಜನ್ಮಗಳಲ್ಲಿಯೂ ಕೂಡ ಪುಣ್ಯ ಮಾಡಿರಲಿಲ್ಲ. ಈ ರೀತಿಯಿಂದ ಶಿವರಾತ್ರಿಯ ದಿನ ಈಕೆಗೆ ಯಾರೂ ಭಿಕ್ಷೆಯನ್ನು ಹಾಕಲಿಲ್ಲ ಭಿಕ್ಷೆಯನ್ನು ಹಾಕಿರಿ ಎಂದು ಹಸಿವೆಯಿಂದ ಕೂಗುತ್ತಿದ್ದಳು. ಇವಳ ಮಾತನ್ನು ಕೇಳಿ ಪೂಜೆಗೆ ಹೋದ ಜನರು ಎಲೌ ಸ್ತ್ರೀಯಳೇ, ಈ ದಿನ ಶಿವರಾತ್ರಿಯು, ಅನ್ನ ಭಿಕ್ಷೆಯನ್ನು ಯಾರು ಹಾಕುವರು ? ಎಂದು ನಕ್ಕು ಹಾಸ್ಯಮಾಡಿ ನಗುತ್ತಾ ಹೋಗುತ್ತಿದ್ದರು. ಮತ್ತು ತಮ್ಮ ಕರದಲ್ಲಿದ್ದ ಬಿಲ್ವಪತ್ರೆಯನ್ನು ಈಕೆಯ ಕೈಗೆ ಎಸೆದರು. ಈಕೆಯು ಅದನ್ನು ಮೂಸಿನೋಡಿ ತಿನ್ನುವ ವಸ್ತುವಲ್ಲವೆಂದು ತಿಳಿದು ಸಿಟ್ಟಿನಿಂದ ಎಸೆದಳು. ಆ ಬಿಲ್ವಪತ್ರೆಯು ಹೋಗಿ ಒಂದು ಲಿಂಗದಮೇಲೆ ಬಿತ್ತು. ಈ ರೀತಿಯಿಂದ ಆ ಕತ್ತಲೆಯಲ್ಲಿ ಆಕಸ್ಮಿಕವಾಗಿ ಶಿವಪೂಜೆ

ಯಾಯಿತು ಈಕೆಗೆ ಯಾರೂ ಭಿಕ್ಷೆಯನ್ನು ಹಾಕದುದರಿಂದ ಈ ದಿನ ಉಪವಾಸವೂ ಆಯಿತು ಬಿಲ್ವಪತ್ರೆಯು ಶಿವನ ತಲೆಯಲ್ಲಿ ಬಿದ್ದು ಪೂಜೆಯಾಯಿತು ಪ್ರಯತ್ನವಿಲ್ಲದೆ ಈ ಪುಣ್ಯವು ಈಕೆಗೆ ಲಭಿಸಿತು. ಮಾರನೇ ದಿನ ಈಕೆಯು ಪಲ್ಲಿಗೆ ಎದ್ದು ಭಿಕ್ಷೆಗೆ ಹೊರಟಳು ಬಿಸಿಲಿನಲ್ಲಿ ಹೋಗಲಾರದೇ ದುಃಖಿಸುತ್ತಿದ್ದಳು. ಇದು ಪೂರ್ವ ಕರ್ಮದ ಫಲವೆಂದು ಶಿವದೂತರು ಗೌತಮುನಿಗೆ ಹೇಳಿದುದನ್ನು ಈ ಗೌತಮರು ಈ ರಾಜನಿಗೆ ಹೇಳಿದರು

ಈಕೆಯು ಬಂದು ,ಮರದ ನೆರಳಿಗೆ ಬಂದು ಅಲ್ಲಿ ಪ್ರಾಣಬಿಡುವವಳಾಗಿದ್ದಳು ಇದಕ್ಕಾಗಿ ಶಿವನಿಂದ ಕಳುಹಿಸಲ್ಪಟ್ಟು ನಾವು ಇಲ್ಲಿಗೆ ಬಂದೆವು. ಈಕೆಗೆ ಈ ದಿನ ಶಿವಪೂಜೆಯೂ, ಉಪವಾಸವೂ ಜಾಗರಣೆಯೂ ಆದುದರಿಂದ ನಮ್ಮನ್ನು ಶಂಕರನು ಕಳುಹಿಸಿದನು ಎಂದು ಹೇಳಿ ಆಕೆಯ ಮೇಲೆ ಅಮೃತವನ್ನೆರಚಲು ಆಕೆಯು ದಿವ್ಯ ದೇಹವನ್ನು ಧರಿಸಿ ಬೇಗನೆ ಕೈಲಾಸಕ್ಕೆ ಹೋದಳು ರಾಜನೇ, ನೀನೂ ಆ ಗೋಕರ್ಣ ಕ್ಷೇತ್ರಕ್ಕೆ ಹೋದರೆ ನಿನ್ನ ಬ್ರಹ್ಮಹತ್ಯಾದೋಷವು ಹೋಗಿ ಈ ಲೋಕದಲ್ಲಿ ಸುಖವೂ ಪರದಲ್ಲಿ ಗತಿಯೂ ಆಗುವುದರಲ್ಲಿ ಸಂಶಯವಿಲ್ಲ ಎಂದರು. ಆಗ ರಾಜನು ಸಂತೋಷಿತನಾಗಿ ಗೌತಮರನ್ನು ವಂದಿಸಿ ಗೋಕರ್ಣಕ್ಕೆ ಹೋದನು ಅಲ್ಲಿ ಇವನ ಪಾಪವು ಹೋಯಿತು ಇದು ಇಂಥಾ ಪುಣ್ಯಸ್ಥಾನವೆಂದು ತಿಳಿದು ಶ್ರೀಪಾದರು ಅಲ್ಲಿಗೆ ಹೋದರು, ಎಂದು ಸಿದ್ಧರು ನಾಮಧಾರಕನಿಗೆ ಹೇಳಿದರು ಎಂದು ಸರಸ್ವತೀಗಂಗಾಧರನು ಈ ರೀತಿಯಿಂದ ಗುರುಚರಿತ್ರೆಯನ್ನು ವಿಸ್ತಾರವಾಗಿ ಹೇಳಿದನು ಎಂಬಲ್ಲಿಗೆ ಗುರುಚರಿತ್ರಾಮೃತದಲ್ಲಿ ಸಪ್ತಮಾಧ್ಯಾಯವು ಮುಗಿದುದು.

---

## ೮ ನೆಯ ಅಧ್ಯಾಯ

---

ಶ್ರೀಗಣೇಶಾಯನಮಃ ॥ ನಾಮಧಾರಕನು ಸಿದ್ಧರನ್ನು ಕುರಿತು ಸ್ವಾಮಿ, ಶ್ರೀಪಾದರು ಗೋಕರ್ಣದಲ್ಲಿ ಎಷ್ಟುದಿನಗಳಿದ್ದರು ? ಮುಂದಿನ ಸಂಗತಿಗಳೇನು ? ಈ ಗುರುಚರಿತ್ರೆಯನ್ನು ಕೇಳುವುದರಿಂದ ಮನಸ್ಸಿಗೆ

ಸಂತೋಷವಾಗುತ್ತಿರುವುದು ಎಂದನು ಆಗ ಸಿದ್ಧರು ಸಂತೋಷದಿಂದ ಮುಂದಿನ ಚರಿತ್ರೆಯನ್ನು ವಿಸ್ತಾರವಾಗಿ ಹೇಳಿದರು

ಶ್ರೋತೃಗಳಿರಾ ! ನೀವು ಇದನ್ನು ಅವಧರಿಸಿರಿ ಶ್ರೀಪಾದರು ಗೋಕರ್ಣದಲ್ಲಿ ಮೂರು ವರ್ಷಗಳಿದ್ದರು ಬಳಿಕ ಶ್ರೀಗಿರಿ ಪರ್ವತಕ್ಕೆ ಹೊರಟರು. "ಚರಣಂ ಪವಿತ್ರಂ ವಿತತಂ ಪುರಾಣಂ" ಎಂದು ವೇದದಲ್ಲಿ ಹೇಳಿದ ಗುರುಚರಣದಲ್ಲಿ ಸರ್ವತೀರ್ಥಗಳಿವೆ ಎಂದು ತಿಳಿದಿದ್ದರೂ ಶ್ರೀಪಾದರು ಲೋಕಾನುಗ್ರಹಕ್ಕಾಗಿ ತೀರ್ಥಯಾತ್ರೆಗೆ ಹೊರಟರು. ಕೃಷ್ಣಾತೀರದಲ್ಲಿರುವ ಕುರುಪಕ್ಷೇತ್ರಕ್ಕೆ ಬಂದು ನಿಂತರು ಅಲ್ಲಿ ಇವರ ಮಹಿಮೆಯು ಪ್ರಕಟವಾಯಿತು. ಈ ಕುರವ ಕ್ಷೇತ್ರದಲ್ಲಿ ವೇದಶಾಸ್ತ್ರ ಸಂಪನ್ನನಾದ ವಿಪ್ರನಿದ್ದನು ಈತನ ಪತ್ನಿಯಾದ ಅಂಬಿಕೆಯು ಪತಿ ಸೇವೆ ಮಾಡುತ್ತಾ ಸುಶೀಲೆಯಾಗಿದ್ದಳು ಈಕೆಗೆ ಹುಟ್ಟಿದ ಮಕ್ಕಳೆಲ್ಲವೂ ಸತ್ತುಹೋದವು ಈ ದಂಪತಿಗಳು ಅನೇಕ ತೀರ್ಥಯಾತ್ರೆಗಳನ್ನು ಮಾಡಿದರು. ಬಳಿಕ ಮಂದಮತಿಯಾದ ಬಾಲಕನು ಜನಿಸಿದನು ಈತನಿಗೆ ಉಪನಯನ ಮಾಡಿದರು ಈ ಬಾಲಕನಿಗೆ ಬಹಳವಾಗಿ ಹೊಡೆದು ವಿದ್ಯೆ ಯನ್ನು ಕಲಿಸಿದರೂ ವಿದ್ಯೆಯು ಹತ್ತಲಿಲ್ಲ ಈತನ ತಾಯಿಯು ಪತಿ ಯನ್ನು ಕುರಿತು ಸ್ವಾಮಿಾ, ನಾವು ಮಕ್ಕಳಿಲ್ಲದೆ ಕಷ್ಟಪಟ್ಟು ಈ ಪುತ್ರ ನನ್ನು ಪಡೆದೆವು ಈತನನ್ನು ವಿದ್ಯೆಗಾಗಿ ಈ ರೀತಿಯಾಗಿ ಶಿಕ್ಷಿಸುವುದೇಕೆ? ಹೀಗೆ ನೀವು ಇವನನ್ನು ಹೊಡೆದರೆ ನಾನು ಪ್ರಾಣವನ್ನು ಬಿಡುವೆನು ಎಂದಳು. ಬಳಿಕ ಆ ಬ್ರಾಹ್ಮಣನು ಬಾಲಕನನ್ನು ಶಿಕ್ಷಿಸಲಿಲ್ಲ ಕೆಲವು ಕಾಲದಮೇಲೆ ಈತನು ಮೃತನಾದನು ಅಂಬಿಕೆಯು ಕುರವಪುರದಲ್ಲಿ ಭಿಕ್ಷಬೇಡಿ ಮಗನನ್ನು ಸಲಹುತ್ತಿದ್ದಳು. ಈ ಬಾಲಕನು ಯೌವನ ವಂತನಾಗಿ ಮದುವೆಗೆ ಯೋಗ್ಯನಾದನು. ಈತನು ದಡ್ಡನೆಂದು ಯಾರೂ ಹೆಣ್ಣು ಕೊಡಲಿಲ್ಲ. ಜನರು ಇವನು ಕಟ್ಟಿಗೆಯನ್ನೂ, ನೀರನ್ನೂ ಹೊರು ತ್ತಾನೆಂದು ದೂಷಿಸುತ್ತಿದ್ದರು. ಮತ್ತು ಜನರು ಎಲೈ ಕಲ್ಲಿನಂತಿರುವ ನೀನು ವ್ಯರ್ಥವಾಗಿ ಏಕೆ ಹುಟ್ಟಿದೆ ? ವಂಶಕ್ಕೆ ಕಳಂಕವನ್ನು ತಂದ ಮೂರ್ಖನೇ, ನಿನ್ನ ತಂದೆಯು ಆಚಾರವಂತನಾಗಿಯೂ, ಎಲ್ಲಾ ಕಡೆ ಯಲ್ಲೂ ಪ್ರಸಿದ್ಧನಾಗಿದ್ದನು ಶಾಸ್ತ್ರಜ್ಞನಾದ ತಂದೆಗೆ ನೀನು ಅಧೋ

ಗತಿಯನ್ನು ಉಂಟುಮಾಡುವಿ ! ನಾಚಿಕೆಯಿಲ್ಲದೆ ಭಿಕ್ಷೆ ಬೇಡುವಿ ! ಪಶುವಿನಂತೆ ನೀನು ವ್ಯರ್ಥವಾಗಿ ಹುಟ್ಟಿದೆ. ಗಂಗೆಯಲ್ಲಾದರೂ ಬಿದ್ದು ಸಾಯಿ ! ಸಾರ್ಥಕವಾದೀತು ! ಎಂದು ನಿಂದಿಸಿದರು. ಬ್ರಹ್ಮಚಾರಿಯು ಇದನ್ನು ಕೇಳಿ, ತನ್ನ ತಾಯಿಯೊಡನೆ ಮಾತೆಯೇ, ಜನರು ನನ್ನನ್ನು ನಿಂದಿಸುವರು. ಇದನ್ನು ನಾನು ಕೇಳಲಾರೆನು. ಕಾಡಿಗೆ ಹೋಗುವೆನೆಂದನು. ಇದನ್ನು ಕೇಳಿ ತಾಯಿಯು ದುಃಖಿಸಿದಳು. ಬಳಿಕ ಈ ತಾಯಿ ಮಕ್ಕಳು ಕೃಷ್ಣಾನದಿಗೆ ಬಂದರು. ಅಲ್ಲಿ ಶ್ರೀಪಾದರು ಸ್ನಾನಮಾಡುತ್ತಿರಲು ಅವರ ಸಮೀಪಕ್ಕೆ ಹೋಗಿ ಚರಣಗಳಿಗೆ ವಂದಿಸಿದರು. ಮಹಾಸ್ವಾಮೀ ! ನಾವಿಬ್ಬರೂ ಪ್ರಾಣವನ್ನು ಬಿಡುವೆವು. ನಾವು ಬಡವರು. ಈ ನನ್ನ ಮಗನು ದಡ್ಡನೆಂದು ಜನರು ದೂರುವರು. ಎಂದು ಬಿನ್ನವಿಸಿದಳು.

ಆಗ ಶ್ರೀಪಾದರು ಎಲೌ ಸ್ತ್ರೀಯಳೆ, ಆತ್ಮಹತ್ಯೆಯು ದೋಷಕರವು ಏಕೆ ದುಃಖಿಸುತ್ತಿಯೆ ? ಎಂದು ಕೇಳಿದರು. ಆಗ ಆಕೆಯು ಮಹಾತ್ಮರೇ, ಮೊದಲು ಮಕ್ಕಳಿಲ್ಲವೆಂದು ನಾನು ಪತಿಯೊಡನೆ ಅನೇಕ ತೀರ್ಥಯಾತ್ರೆಗೈದೆನು. ವ್ರತಗಳನ್ನು ಮಾಡಿದೆನು. ಬಳಿಕ ಈ ಮೂಢಮಗನಾದನು. ನನ್ನ ಪತಿಯು ವೇದಶಾಸ್ತ್ರ ಸಂಪನ್ನನಾಗಿದ್ದನು ಯಾರಿಗೂ ಇಂಥಾ ಮೂಢನಾದ ಪುತ್ರನು ಹುಟ್ಟಬಾರದು. ನಿಮ್ಮನ್ನು ಮರೆಹೊಕ್ಕೆನು. ನಮ್ಮನ್ನು ಸಲಹಿರಿ. ಈ ಬಾಲಕನು ಆಡಿನ ಕತ್ತಿನಲ್ಲಿರುವ ಮೊಲೆಯಂತಿದ್ದಾನೆ. ನನಗೆ ಲೋಕವಂದ್ಯನಾದ ಪುತ್ರನಾಗಲು ಏನು ಮಾಡಬೇಕು? ಒಂದು ಉಪಾಯವನ್ನು ಹೇಳಿರಿ ಎಂದು ಬೇಡಿದಳು.

ಆಗ ಶ್ರೀಪಾದರು, ಅಮ್ಮಾ ನೀನು ಶ್ರೀಹರಿಯನ್ನು ಪೂಜಿಸು. ಶ್ರೀಹರಿಯೇ ನಿನಗೆ ಪುತ್ರನಾದಾನು ! ಗೋವಳರ ಮನೆಯಲ್ಲಿ ಶ್ರೀಕೃಷ್ಣನುದಿಸಲಿಲ್ಲವೇ ? ನೀನು ಶಂಕರನನ್ನು ಅರ್ಚಿಸು. ನಿನ್ನ ಇಷ್ಟಸಿದ್ಧಿಯಾದೀತು ಎಂದರು.

ಆಗ ಆಕೆಯು ಸ್ವಾಮಿ, ಆ ಗೋವಳನು ಯಾವ ಪೂಜೆಯನ್ನು ಮಾಡಿದನು ? ಅಂಥಾ ವ್ರತವನ್ನು ನಾನೂ ಮಾಡುವೆನೆಂದಳು. ಆಗ ಶ್ರೀಪಾದರು ಅಮ್ಮಾ ಶನಿಪ್ರದೋಷ ವ್ರತವನ್ನು ಮಾಡು. ಈ ವ್ರತ ಮಹಿಮೆಯು ಸ್ಕಂದಪುರಾಣದಲ್ಲಿ ಹೇಳಲ್ಪಟ್ಟಿದೆ. ಇದನ್ನು ಕೇಳು: ಉಜ್ಜ

ಯಿನಿಯಲ್ಲಿ ಚಂದ್ರಸೇನನೆಂಬ ಧಾರ್ಮಿಕನಾದ ರಾಜನಿದ್ದನು. ಇವನ ಗೆಳೆಯನಾದ ಮಣಿಭದ್ರನೆಂಬವನು ಈಶ್ವರಭಕ್ತನಾದದರಿಂದ ಶಂಕರನು ಇವನಿಗೆ ಕೋಟಿಸೂರ್ಯಪ್ರಕಾಶವುಳ್ಳ ಚಿಂತಾಮಣಿಯೆಂಬ ಒಂದು ರತ್ನವನ್ನು ಕೊಟ್ಟನು. ಈ ರತ್ನಕಾಂತಿಯು ಸ್ಪರ್ಶವಾದರೆ ಲೋಹಗಳೂ, ಕಲ್ಲುಗಳೂ ಸುವರ್ಣವಾಗುವುವು. ಇದು ಹತ್ತಿರದಲ್ಲಿದ್ದರೆ ಸಕಲೇಷ್ಟಗಳೂ ಸಿದ್ಧಿಸುವುವು ರಾಜರೆಲ್ಲರೂ ಇದನ್ನು ಬಯಸುತ್ತಿದ್ದರು. ಒಬ್ಬ ರಾಜನು ಇದನ್ನು ಕೊಡೆಂದು ಕೇಳಿದನು. ಒಬ್ಬನು ಬಲಾತ್ಕಾರದಿಂದ ಕೇಳಿದನು ಒಬ್ಬನು ಬೆಲೆಗೆ ಕೇಳಿದನು. ಒಬ್ಬನು ಈ ಮಣಿಯನ್ನು ಕೊಡದಿದ್ದರೆ ಯುದ್ಧಕ್ಕೆ ಬಾ ಎನ್ನುತ್ತಿದ್ದನು. ಹೀಗೆ ರಾಜರೆಲ್ಲರೂ ಸೇರಿ ಸೇನೆಯೊಡನೆ ಬಂದು ಉಜ್ಜಯಿನಿಯನ್ನು ಮುತ್ತಿದರು ಆದಿನ ಶನಿತ್ರಯೋದಶಿಯಾಗಿತ್ತು ಆಗ ರಾಜನು ಭಕ್ತಿಯಿಂದಲೂ, ಏಕಚಿತ್ತದಿಂದಲೂ ಶಿವನನ್ನು ಪೂಜಿಸುತ್ತಿದ್ದನು ಆಗ ಗೌಳಿಗರ ಬಾಲಕರು ಬಂದು ಈ ರಾಜರು ಮಾಡುವ ಶಿವಪೂಜೆಯನ್ನು ನೋಡಿ ಹೋಗಿ ತಾವೆಲ್ಲರೂ ವಿನೋದದಿಂದ ಲಿಂಗಗಳನ್ನು ಕಲ್ಲಿನಿಂದ ಮಾಡಿಕೊಂಡು ಪೂಜಿಸಿದರು ಅನೇಕ ಪುಷ್ಪಪತ್ರಗಳಿಂದ ಅರ್ಚಿಸಿ, ನೀರನ್ನು, ನೇವೇದ್ಯವನ್ನು ಮಾಡಿದರು. ಗೋಪಸ್ತ್ರೀಯರು ಅಲ್ಲಿಗೆ ಬಂದು ತಮ್ಮ ಬಾಲಕರನ್ನು ಊಟಕ್ಕೆ ಕರೆದೊಯ್ದರು ಒಬ್ಬ ಬಾಲಕನು ತಾಯಿಯು ಊಟಕ್ಕೆ ಕರೆದರೂ ಹೋಗಲಿಲ್ಲ. ತಾಯಿಯು ಈತನು ಪೂಜಿಸುವ ಲಿಂಗವನ್ನು ಕಿತ್ತೆಸೆದಳು. ಬಳಿಕ ಈ ಹುಡುಗನು ತಾಯಿಯು ತನ್ನ ಪೂಜೆಯನ್ನು ಕೆಡಿಸಿದಳೆಂದು ಅಳುತ್ತಾ ಮೂರ್ಛೆಹೋಗಿ ಎಚ್ಚತ್ತು ಲಿಂಗಸಮೀಪದಲ್ಲಿ ತನ್ನ ಪ್ರಾಣವನ್ನು ಬಿಡಲು ಯತ್ನಿಸುತ್ತಿದ್ದನು ಆಗ ಶೂಲಪಾಣಿಯು ಮೆಚ್ಚಿ ಆ ಸ್ಥಳದಲ್ಲಿ ರತ್ನಖಚಿತವಾದ ಶಿವಾಲಯವನ್ನೂ, ಸೂರ್ಯನಂತೆ ಕಾಂತಿಯುಳ್ಳ ರತ್ನಲಿಂಗವನ್ನೂ ನಿರ್ಮಿಸಿದನು ಆಗ ಆತನಿಗೆ ಎಚ್ಚರವಾಯಿತು. ಆಗ ಈಶ್ವರನು ನಿಜರೂಪವನ್ನು ತೋರಿಸಿ ಈ ಬಾಲಕನನ್ನೆಬ್ಬಿಸಿ ವರವನ್ನು ಬೇಡು ಎನ್ನಲು, ಈ ಬಾಲನು ಶಂಕರನನ್ನು ವಂದಿಸಿ ಸ್ವಾಮೀ, ನನ್ನ ತಾಯಿಯು ಪೂಜಾಭಂಗಮಾಡಿದುದಕ್ಕೆ ಕೋಪಿಸದೇ ಮನ್ನಿಸಿರಿ ಎಂದು ಪ್ರಾರ್ಥಿಸಿದನು ಆಗ ಶಿವನು ಬಾಲನೇ, ನಿನ್ನ ತಾಯಿಯು ಪ್ರದೋಷಪೂಜೆಯನ್ನು ನೋಡಿದುದರಿಂದ ದೇವತೆಯಾಗುವಳು.

ವಿಷ್ಣುವು ಈಕೆಯ ಮಗನಾಗಿ ಹುಟ್ಟುವನು. ನೀನು ಬಯಸಿದುದೆಲ್ಲವೂ ಸಿದ್ಧಿಯಾಗಲಿ. ನಿನ್ನ ವಂಶದವರೆಲ್ಲರೂ ಸುಖವಾಗಿರಲಿ ಎಂದು ವರ ವನ್ನು ಕೊಟ್ಟು ಶಂಕರನು ಆ ಲಿಂಗದಲ್ಲಿ ಐಕ್ಯವಾದನು. ಆಗ ಜನರು ಅಲ್ಲಿ ಕೋಟಿಸೂರ್ಯ ಪ್ರಕಾಶವುಳ್ಳ ಶಿವಾಲಯವನ್ನು ನೋಡಿ ಸೂರ್ಯೋ ದಯವಾಯಿತೆಂದು ಹೇಳುತ್ತಿದ್ದರು. ಈ ನಗರವನ್ನು ಮುತ್ತಿದ್ದ ಶತ್ರು ರಾಜರು ಈ ಶಿವಾಲಯವನ್ನು ನೋಡಿ ಸೂರ್ಯನು ಈ ನಗರದಲ್ಲಿ ಉದಿ ಸಿದ್ದಾನೆ. ಈ ರಾಜನು ಪುಣ್ಯವಂತನು. ಇವನಲ್ಲಿ ವಿರೋಧ ಮಾಡ ಬಾರದೆಂದು ಯೋಚಿಸಿ ಗೂತರನುಖದಿಂದ ಈ ರಾಜನಿಗೆ ತಮಗೆ ದರ್ಶನ ಕೊಡಬೇಕೆಂದು ಹೇಳಿಕಳುಹಿಸಿದರು. ಆಗ ರಾಜನು ರಾತ್ರಿಯಾಗಿರು ವಾಗ ಸೂರ್ಯೋದಯವಾದುದೆಂತು ಎಂದು ಯೋಚಿಸಿ, ಆಶ್ಚರ್ಯಹೊಂದಿ ಹೊರಟುಬಂದು ಈ ರತ್ನಖಚಿತವಾದ ಶಿವಾಲಯವನ್ನು ನೋಡಿ, ಈ ಗೋಪಬಾಲಕನ ರಮ್ಯವಾದ ಮನೆಯನ್ನುಕಂಡು ಅವನಿಂದ ವೃತ್ತಾಂತವೆ ಲ್ಲವನ್ನೂ ತಿಳಿದನು. ಅಲ್ಲಿದ್ದ ರಾಜರೆಲ್ಲರೂ ಈ ಬಾಲಕನನ್ನೇ ರಾಜನೆಂದು ಭಾವಿಸಿ ಆತನಿಗೆ ಸಕಲೈಶ್ವರ್ಯವನ್ನೂ ಕೊಟ್ಟು ಹೊರಟುಹೋದರು. ಚಂದ್ರಸೇನನು ಶನಿಪ್ರದೋಷ ವ್ರತವನ್ನು ಮಾಡುತ್ತಿದ್ದುದರಿಂದ ಹಗೆಗಳ ಬಾಧೆತಪ್ಪಿತು. ಆ ಗೌಳಿಕುವರನು ಮನೆಗೆಬಂದು ತಾಯಿಯನ್ನು ಕುರಿತು ಅಮ್ಮಾ, ನಾನು ಮಾಡಿದ ಶನಿಪ್ರದೋಷಪೂಜೆಗೆ ಶಂಕರನು ಮೆಚ್ಚಿ ನಿನ್ನ ಉದರದಲ್ಲಿ ಶ್ರೀಮನ್ನಾರಾಯಣನು ಹುಟ್ಟುವನೆಂದು ವರವಿತ್ತನು. ಇದ ರಲ್ಲಿ ಸಂದೇಹವಿಲ್ಲ. ನೀನು ಮಾಡಿದ ಶಿವಪೂಜಾ ಭಂಗವನ್ನು ಮನ್ನಿಸಿ ದನು ಎಂದು ಹೇಳಿದನು, ಎಂದು ಶ್ರೀಪಾದರು ಈ ಸ್ತ್ರೀಯಳಿಗೆ ಹೇಳಿದರು. ಎಲೌ ತರುಣಿಯೇ, ನೀನೂ ಆ ಶನಿಪ್ರದೋಷ ಪೂಜೆಯನ್ನು ಮಾಡು ಎಂದು ಹೇಳಿ ಈಕೆಯ ಮಗನ ತಲೆಯಮೇಲೆ ಕರವನ್ನಿಟ್ಟರು. ಆಗಲೇ ಆತನು ಜ್ಞಾನಿಯಾಗಿ ನಾಲ್ಕು ವೇದಗಳನ್ನೂ ತರ್ಕ ಭಾಷಾಶಾಸ್ತ್ರ ಗಳನ್ನೂ ಅರಿತವನಾದನು. ಆ ಈಕೆಯು ಆಶ್ಚರ್ಯದಿಂದ ಶ್ರೀಪಾದರು ಸಾಕ್ಷಾದೀಶ್ವರನೆಂದು ತಿಳಿದು ಪೂರ್ವಜನ್ಮದ ಸುಕೃತದಿಂದ ಶ್ರೀ ಗುರುವು ಕಾಣಿಸಿದರೆಂದು ಪದೇಪದೇ ವಂದಿಸಿದಳು. ಸ್ವಾಮಿಾ, ಶಿವಪೂಜೆಯನ್ನು ಮಾಡುವೆನೆಂದು ಹೇಳಿ ಶ್ರೀಪಾದರನ್ನು ಈಶ್ವರನೆಂದು ತಿಳಿದು ನಿತ್ಯವೂ ಪೂಜಿಸುತ್ತಿದ್ದಳು. ಈಕೆಯ ಕುಮಾರನು ವೇದಶಾಸ್ತ್ರಸಂಪನ್ನನಾಗಿ ಎಲ್ಲ

ರಲ್ಲೂ ಪೂಜ್ಯನಾದನು. ಇವನಿಗೆ ಮದುವೆಯಾಯಿತು. ಮಕ್ಕಳೂ, ಮೊಮ್ಮಕ್ಕಳೂ ಆದರು. ಗುರುಕೃಪೆಯುಂಟಾದರೆ ಈ ರೀತಿಯಿಂದ ಇಷ್ಟಸಿದ್ಧಿಯಾಗುವುದು. ಹೀಗೆ ಗುರುವು ಭಕ್ತ ರಕ್ಷಕನಾಗಿ ದಯ ದೋರಿದನು ಎಂದು ಸಿದ್ಧರು ನಿರೂಪಿಸಿದರೆಂದು ಸರಸ್ವತೀಗಂಗಾಧರನು ಹೇಳಿದನೆಂಬಲ್ಲಿಗೆ ಶ್ರೀ ಗುರುಕಥಾಕಲ್ಪತರುವಿನಲ್ಲಿ ಅಷ್ಟಮೋಧ್ಯಾಯವು ಮುಗಿದುದು.

---

## ೯ ನೆಯ ಅಧ್ಯಾಯ.

---

ಶ್ರೀ ಗಣೇಶಾಯನಮಃ ॥ ನಾಮಧಾರಕನು ಭಕ್ತಿಯಿಂದ ಅಂಜಲಿ ಬದ್ಧನಾಗಿ ಸ್ವಾಮೀ, ಶ್ರೀಪಾದರು ಕುರವದಲ್ಲಿದ್ದು ಯಾವಕಾರ್ಯಮಾಡಿ ದರು ? ಮುಂದಿನ ಕಥೆಯನ್ನು ನಿರೂಪಿಸಿರಿ ಎಂದು ಬೇಡಿಕೊಂಡನು. ಆಗ ಸಿದ್ಧಮುನಿಯು ಎಲೈ ಶಿಷ್ಯನೇ, ಮುಂದಿನ ಕಥೆಯನ್ನು ಕೇಳು—

ಆ ಗ್ರಾಮದಲ್ಲಿ ಅಗಸನೊಬ್ಬನು ಶ್ರೀಪಾದರ ಶಿಷ್ಯನಾದನು ಹೇಗೆಂ ದರೆ —ಶ್ರೀಪಾದರು ಕೃಷ್ಣಾನದಿಯಲ್ಲಿ ವಿಧಿಪೂರ್ವಕವಾಗಿ ಸ್ನಾನಮಾಡು ತ್ತಿದ್ದರು. ಇವರು ತ್ರಿಮೂರ್ತಿಗಳ ಅಂಶವುಳ್ಳವರಾದರೂ ಲೋಕವ್ಯವ ಹಾರವನ್ನು ಅನುಸರಿಸುತ್ತಿದ್ದರು ಈ ಅಗಸನು ನಿತ್ಯವೂ ಈ ನದೀ ತೀರದಲ್ಲಿ ಬಟ್ಟೆಗಳನ್ನೊಗೆಯುತ್ತಾ ಇದ್ದು ತ್ರಿಕಾಲದಲ್ಲಿಯೂ ಶ್ರೀ ಪಾದ ರನ್ನು ಮನೋವಾಕ್ಕಾಯ ಕರ್ಮಗಳಿಂದ ವಿನಯದೊಡನೆ ವಂದಿಸುತ್ತಿ ದ್ದನು. ಒಂದುದಿನ ಇವನು ಶ್ರೀ ಪಾದರನ್ನು ವಂದಿಸಲು ಆಗ ಶ್ರೀಪಾದರು ಎಲೈ ರಜಕನೇ, ನಿತ್ಯವೂ ನೀನು ಏಕೆ ಕಷ್ಟದಿಂದ ನಮ್ಮನ್ನು ವಂದಿಸು ತ್ತೀಯೆ. ನಿನ್ನ ಭಕ್ತಿಗೆ ಮೆಚ್ಚಿದೆವು ನೀನು ರಾಜನಾಗಿ ಸುಖದಿಂದಿರು ಎಂದು ವರವನ್ನಿತ್ತರು. ಆಗ ರಜಕನು ಈ ವರವನ್ನು ಕೊಟ್ಟುದಕ್ಕೆ ಶರಗಿನಲ್ಲಿ ಗಂಟುಹಾಕಿಕೊಂಡು ಕೈಗಳನ್ನು ಜೋಡಿಸಿ ಸತ್ಯ ಸಂಕಲ್ಪ ರಾದ ಗುರುಗಳನ್ನು ವಂದಿಸಿದನು ಆತನು ನಿತ್ಯವೂ ಗುರುಗಳನ್ನು ವಂದಿಸುತ್ತಾ ಇವರ ಮಠವನ್ನು ಗುಡಿಸುತ್ತಾ ಸೇವಿಸುತ್ತಿದ್ದನು ಹೀಗಿ

ರಲು ಒಂದುದಿನ ವಸಂತಋತುವಿನಲ್ಲಿ ಒಬ್ಬ ಮ್ಲೇಂಛರಾಜನು ಸರ್ವಾಲಂಕಾರ ಭೂಷಿತರಾದ ತರುಣಿಯರೊಡನೆ ಈ ನದೀತೀರದಲ್ಲಿ ವಿಹರಿಸಲು ಬಂದನು. ಇವನ ಸೇನೆಯು ಅಸಂಖ್ಯಾತವಾಗಿ ಆ ನದಿಯ ಇಕ್ಕೆಡೆಗಳಲ್ಲಿಯೂ ಅಸಂಖ್ಯಾತವಾಗಿದ್ದುವು ಅನೇಕ ಆನೆ, ಕುದುರೆಗಳಿದ್ದುವು. ಅನೇಕ ವಾದ್ಯಗಳು ಬಾಜಿಸಲ್ಪಟ್ಟವು ರಜಕನು ನದೀತೀರದಲ್ಲಿ ಬರುತ್ತಿರುವ ಈ ರಾಜನ ವೈಭವವನ್ನು ನೋಡಿ ಆಶ್ಚರ್ಯಹೊಂದಿ ಈ ನರಜನ್ಮದಲ್ಲಿ ಹುಟ್ಟಿದರೆ ಈ ರಾಜನಂತೆ ಸಕಲ ಸುಖಗಳನ್ನೂ ಅನುಭವಿಸಬೇಕು. ಇವನೆಂತಹ ಈಶ್ವರಭಕ್ತನಾಗಿದ್ದಾನೆ? ಈತನು ಯಾವ ದೇವರನ್ನು ಆರಾಧಿಸಿರಬಹುದು? ಯಾವ ಗುರುವಿನ ದರ್ಶನ ಮಾಡಿರಬಹುದು? ಎಂದು ಚಿಂತಿಸುತ್ತಿದ್ದನು.

ಶ್ರೀಪಾದರು ಇವನ ಆಲೋಚನೆಯನ್ನರಿತು ಎಲೈ ರಜಕನೇ, ಏನು ಯೋಚಿಸುವಿ? ಎಂದು ಕೇಳಿದರು.

ಈತನು ಸ್ವಾಮಿಾ, ಈ ರಾಜನು ಪೂರ್ವದಲ್ಲಿ ಯಾವ ದೇವರನ್ನು ಪೂಜಿಸಿ ಈ ರಾಜಪದವಿಯನ್ನು ಹೊಂದಿರುವನೆಂದು ಯೋಚಿಸುತ್ತೇನೆಂದು ಹೇಳಿದನು

ಆಗ ಶ್ರೀಪಾದರು ರಜಕನೇ, ನೀನು ಹುಟ್ಟಿದಂದಿನಿಂದ ಕಷ್ಟಪಡುತ್ತೀಯೆ. ಈಗ ಸುಖಪಡಲು ಯೋಚಿಸುತ್ತೀಯೆ ಇದು ತಮೋಗುಣ ಧರ್ಮವು ನಿನಗೆ ಇಂದ್ರಿಯಗಳ ಸುಖಾನುಭವವು ತೀರಿದಹೊರತು ಮನಸ್ಸು ನಿರ್ಮಲವಾಗದು. ಇದು ಮೋಕ್ಷಸಾಧನವಾಗದು. ಇದಕ್ಕಾಗಿ ನೀನು ಮ್ಲೇಂಛವಂಶಕ್ಕೆಹೋಗಿ ರಾಜ್ಯವನ್ನು ಅನುಭವಿಸು ಎಂದರು.

ಆಗ ರಜಕನು ಮಹಾತ್ಮರೇ, ನನ್ನನ್ನು ಹೀಗೆ ಉಪೇಕ್ಷಿಸಬಾರದು. ನನಗೆ ತಮ್ಮ ಚರಣ ಸಂದರ್ಶನವನ್ನು ಪುನಃ ಕೊಡಬೇಕು. ಮತ್ತು ತಮ್ಮ ಅನುಗ್ರಹಕ್ಕೆ ಕಾರಣವಾದ ಜ್ಞಾನವನ್ನು ಕೊಡಬೇಕು ಎಂದು ಪ್ರಾರ್ಥಿಸಿದನು.

ಆಗ ಶ್ರೀಪಾದರು ಎಲೈ ರಜಕನೇ, ನೀನು ವೈದುರಾ ನಗರದಲ್ಲಿ ಜನಿಸುವಿ. ಅಲ್ಲಿ ನಿನ್ನ ಅಂತ್ಯಕಾಲದಲ್ಲಿ ನಿನಗೆ ಕಾಲಾಂತರದಿಂದ ದರ್ಶನ ಕೊಡುವೆನು. ಆಗ ನಿನಗೆ ಜ್ಞಾನವುಂಟಾದೀತು ಚಿಂತಿಸದಿರು.

ಇದನ್ನು ನಂಬು. ನಾವು ಆಗ ಶ್ರೀ ನೃಸಿಂಹಸರಸ್ವತಿ ಎಂಬ ಸನ್ಯಾಸಿಯಾಗಿ ಅವತರಿಸುವೆವು ಎಂದು ರಜಕನಿಗೆ ನಿರೂಪಿಸಿ ಕಳುಹಿಸಿದರು.

ರಜಕನು ಶ್ರೀಪಾದರನ್ನು ವಂದಿಸಿದನು. ಆಗ ಶ್ರೀ ಪಾದರು ರಜಕನೇ, ನೀನು ಈ ಜನ್ಮದಲ್ಲಿ ಸುಖವನ್ನು ಪೂರ್ಣವಾಗಿ ಅನುಭವಿಸುವಿಯಾ? ಎಂದು ಕೇಳಿದರು.

ಆಗ ಅವನು ಸ್ವಾಮಿಾ, ನಾನು ಈಗ ಮುದುಕನಾಗಿದ್ದೇನೆ. ಆದುದರಿಂದ ಮುಂದಿನ ಜನ್ಮದಲ್ಲಿ ಬಾಲ್ಯದಿಂದಲೂ ಸುಖಿಸುವೆನೆಂದು ಬಿನ್ನವಿಸಿದನು.

ಆಗ ಗುರುವು ರಜಕನೇ, ಜಾಗ್ರತೆಯಾಗಿ ಸುಖಿಸುವಿ ಎಂದು ನಿರೂಪಿಸಿದನು. ಬಳಿಕ ಇವನು ವೈದುರಾನಗರಿಯಲ್ಲಿ ಮ್ಲೇಂಛಕುಲದಲ್ಲಿ ಹುಟ್ಟಿ ಪ್ರಸಿದ್ಧನಾದನು. ಈ ರಾಜನ ಕಥೆಯನ್ನು ಮುಂದೆ ಹೇಳುವೆವು. ನಾಮಧಾರಕನೇ, ಈ ಗುರುಗಳು ಅಸಂಖ್ಯಾವತಾರಗಳನ್ನು ಮಾಡಿದ್ದಾರೆ. ಇದನ್ನೆಲ್ಲವನ್ನೂ ಹೇಳಿದರೆ ಗ್ರಂಥ ವಿಸ್ತಾರವಾಗುವುದು. ಶ್ರೀಪಾದರು ಇದ್ದ ಸ್ಥಳದಲ್ಲಿ ಅಪಾರವಾದ ಮಹಿಮೆಯು ವಿಚಿತ್ರವಾಗಿ ಕಾಣಬರುತ್ತಿದ್ದುವು. ಕುರುವಪುರದ ಮಹಿಮೆಯು ಶ್ರೇಷ್ಠವಾದದ್ದು. ಆಶ್ವೀಜ ಶುದ್ಧ ದ್ವಾದಶಿಯಲ್ಲಿ ಮೃಗಶಿರಾ ನಕ್ಷತ್ರದಲ್ಲಿ ಶ್ರೀಪಾದರು ಮುಂದಿನ ಅವತಾರ ಕಾರಣಕ್ಕಾಗಿ ಗಂಗೆಯಲ್ಲಿ ಅದೃಶ್ಯರಾದರು ಎಂದು ಸಿದ್ಧರು ನಾಮಧಾರಕನಿಗೆ ಹೇಳಿದರು. ಎಂದು ಸರಸ್ವತೀಗಂಗಾಧರನು ಹೇಳಿದನೆಂಬಲ್ಲಿಗೆ ಶ್ರೀ ಗುರುಚರಿತ್ರೆಯಲ್ಲಿ ನವಮಾಧ್ಯಾಯವು ಪೂರ್ಣವಾದುದು.

---

## ೧೦ ನೆಯ ಅಧ್ಯಾಯ.

ಶ್ರೀ ಗಣೇಶಾಯನಮಃ ॥ ನಾಮಧಾರಕನು ವಂದಿಸಿ ಸ್ವಾಮಿಾ, ಸಿದ್ಧಮುನಿಗಳೇ, ಕುರವಕ್ಷೇತ್ರದ ಮಹಿಮೆಯು ಹೇಗಿದೆ? ಶ್ರೀಪಾದರು ಹೇಗೆ ಅವತರಿಸಿದರು? ಇದನ್ನು ವಿಸ್ತಾರವಾಗಿ ನಿರೂಪಿಸಿರಿ ಎಂದು ಪ್ರಾರ್ಥಿಸಿದನು.

ಆಗ ಸಿದ್ಧರು ಎಲೈ ನಾಮಧಾರಕನೇ, ವಿಶ್ವವ್ಯಾಪಕನಾದ ಪರ ಮಾತ್ಮನು ಅನೇಕರೂಪನಾಗಿದ್ದಾನೆ. ಶ್ರೀಪಾದರು ಕುರವದಲ್ಲಿ ಗುಟ್ಟಾ ಗಿದ್ದರು ಪರಶುರಾಮನು ಸ್ಥಳಜೀವನಾದನು. ನಾರಾಯಣನು ಸರ್ವತ್ರ ವ್ಯಾಪಿಸಿರುವನು. ತ್ರಿಮೂರ್ತಿಗಳು ಸೃಷ್ಟಿ, ಸ್ಥಿತಿ, ಪ್ರಳಯಗಳನ್ನು ಮಾಡುತ್ತಿರುವರು. ಶ್ರೀಮನ್ನಾರಾಯಣನು ದೂರ್ವಾಸರ ಶಾಪದಿಂದ ಭಕ್ತರಕ್ಷಣೆಗಾಗಿ ಅವತರಿಸುವನು. ಭಕ್ತರು ಗುರುದರ್ಶನವನ್ನು ಮಾಡಿ ಏನನ್ನು ಬಯಸುವರೋ ಅದನ್ನವರು ಹೊಂದುವರು. ಗುರುಗಳ ವಾಸ ಸ್ಥಾನವು ಕಾಮಧೇನುವಿನಂತಿರುವುದು. ಗುರುಭಕ್ತಿಯು ವ್ಯರ್ಥವಾಗದು. ಗುರುಗಳು ಭಕ್ತರ ದಾರಿಯನ್ನು ಎದುರುನೋಡುತ್ತಿರುವರು. ಎಲ್ಲರೂ ಗಾಂಭೀರ್ಯದಿಂದ ಗುರುಗಳಲ್ಲಿ ದೃಢಭಕ್ತಿಯನ್ನಿಡಬೇಕು. ಹಾಗಾದರೆ ಅವರು ಇಹಪರಸುಖಗಳನ್ನು ಹೊಂದುವರು. ಇದಕ್ಕೆ ಒಂದು ದೃಷ್ಟಾಂತವನ್ನು ಹೇಳುವೆನು ಕೇಳು—

ಕಾಶ್ಯಪಗೋತ್ರದವನಾದ ವಲ್ಲಭೇಶನೆಂಬ ವಿಪ್ರನು ಶೀಲವಂತ ನಾಗಿಯೂ, ಉದ್ಯೋಗಿಯಾಗಿಯೂ ವರ್ಷಂಪ್ರತಿಯಲ್ಲೂ ಶ್ರೀಪಾದರ ಕ್ಷೇತ್ರಕ್ಕೆ ಬರುತ್ತಿದ್ದನು. ಮತ್ತು ಸಾವಿರಾರು ಜನರು ಯಾತ್ರೆಗೆ ಬರುತ್ತಿದ್ದರು. ಈತನು ಯಾತ್ರಿಕರಾದ ವಿಪ್ರರಿಗೆ ಸಂತರ್ಪಣೆ ಮಾಡಿಸಬೇಕೆಂದು ಹರಸಿದನು. ಈತನು ಹೋದ ಕಡೆಯಲ್ಲೆಲ್ಲಾ ಅತಿಯಾಗಿ ಲಾಭಪಡೆದನು. ಆನಂದದಿಂದೀತನು ಯಾತ್ರೆಗೆ ಹೊರಟು ದನ್ನು ನೋಡಿ ಚೋರರನೇಕರು ಕಪಟವೇಷಧಾರಿಗಳಾಗಿ ಇವನನ್ನು ಅನು ಸರಿಸಿ ಎರಡು ಮೂರು ದಿವಸಗಳು ಪಯಣಗೈದ ಬಳಿಕ ಈತನ ಶಿರವನ್ನು ಕತ್ತರಿಸಿ ಇವನ ಧನವನ್ನಪಹರಿಸಿದರು. ಭಕ್ತದಯಾಮಯರಾದ ಶ್ರೀ ಪಾದರು ಜಟಾಧಾರಿಗಳಾಗಿ, ಭಸ್ಮಲೇಪನಗೈದು, ತ್ರಿಶೂಲ ಖಡ್ಗಗಳನ್ನು ಧರಿಸಿ ಅಲ್ಲಿಗೆ ಬಂದು ಆ ಕಳ್ಳರನ್ನು ತ್ರಿಶೂಲದಿಂದ ಸಂಹರಿಸುತ್ತಾ ಬಂದರು. ಇವರಲ್ಲಿ ಒಬ್ಬ ಕಳ್ಳನು ಮಾತ್ರ ಶ್ರೀಪಾದರನ್ನು ವಂದಿಸಿ ಸ್ವಾಮಿ, ನಾನು ಅಪರಾಧಿಯಲ್ಲ. ಇವರ ಜೊತೆಯಲ್ಲಿ ಬಂದೆನು. ಇದು ಸರ್ವಜ್ಞರಾದ ತಮಗೆ ವೇದ್ಯವೇ ಇದೆ ಎಂದು ಬಿನ್ನವಿಸಿದನು. ಆಗ ಶ್ರೀಪಾದರು ಇವನ ಕೈಯಲ್ಲಿ ಮಂತ್ರಿಸಿದ ವಿಭೂತಿಯನ್ನಿತ್ತು ಆ ಮೃತನಾದ ವಿಪ್ರನಿಗೆ

ಲೇಪಿಸೆಂದು ಆಜ್ಞಾಪಿಸಿದರು. ಇವನು ಅಪ್ಪಣೆಯಂತೆಯೇ ಆ ವಿಪ್ರನಿಗೆ ಭಸ್ಮವನ್ನು ಲೇಪಿಸಿದನು ಆಗ ಆ ವಿಪ್ರನು ಸಜೀವಿಯಾದನು ಇಷ್ಟು ಹೊತ್ತಿಗೆ ಸೂರ್ಯೋದಯವಾಯಿತು ಶ್ರೀಪಾದರು ಗುಪ್ತರಾದರು ಆ ಕಳ್ಳನು ಆ ವಿಪ್ರನ ಹತ್ತಿರ ನಿಂತು ಇದ್ದನು ಈ ವಿಪ್ರನು ಆ ಕಳ್ಳ ನನ್ನು ಕುರಿತು ಎಲೈ ನೀನು ಇಲ್ಲಿ ಏಕೆ ನಿಂತಿರುವಿ ? ಈ ಕಳ್ಳರನ್ನು ಯಾರು ಕೊಂದರು ? ಎಂದು ವಿಚಾರಿಸಿದನು. ಆಗ ಆ ಚೋರನು ಸ್ವಾಮಿ, ಒಬ್ಬ ತಪಸ್ವಿಯು ತ್ರಿಶೂಲದಿಂದ ಈ ಚೋರರನ್ನು ಕೊಂದು ನಿನ್ನ ನಿಮಿತ್ತವಾಗಿ ನನ್ನನ್ನುಳಿಸಿದರು ಅವರು ಕೊಟ್ಟ ವಿಭೂತಿಯನ್ನು ನಿಮಗೆ ಹಚ್ಚಲು ನೀವು ಸಜೀವಿಯಾದಿರಿ. ಆ ತಪಸ್ವಿಗಳು ಅದೃಶ್ಯ ರಾದರು ಅವರು ಯಾರೋ ನನಗೆ ತಿಳಿಯದು ಜಟಾಧಾರಿಯಾದ ಈಶ್ವರನೇ ನಿಮ್ಮ ಭಕ್ತಿಗೆ ಮೆಚ್ಚಿ ಬಂದಿರಬಹುದೆಂದನು.

ಬಳಿಕ ಆ ವಿಪ್ರನು ಆ ಕಳ್ಳರು ಅಪಹರಿಸಿದ ಧನವನ್ನು ತೆಗೆದು ಕೊಂಡು ಕುರವಪುರಿಗೆ ಯಾತ್ರೆಗೆ ಹೊರಟನು ಕುರವಕ್ಕೆ ಹೋಗಿ ಅಲ್ಲಿ ನಾನಾವಿಧದಿಂದ ಶ್ರೀಪಾದರ ಚರಣಗಳನ್ನು ಪೂಜಿಸಿದನು. ಮತ್ತು ನಾಲ್ಕು ಸಾವಿರ ವಿಪ್ರರಿಗೆ ಸಂತರ್ಪಣೆ ಮಾಡಿಸಿ ಶ್ರೀ ಪಾದುಕೆಗಳನ್ನು ಪೂಜಿಸಿದನು. ಈ ರೀತಿಯಿಂದ ಅನೇಕ ಭಕ್ತರು ಸೇರಿ ಶ್ರೀ ಪಾದರ ಚರಣಗಳನ್ನು ಸೇವಿಸುತ್ತಿದ್ದರು. ನಾಮಧಾರಕನೇ, ಈ ಕುರವದ ಮಹಿಮೆಯು ಅಪಾರವಾಗಿರುವುದು. ಇದರಲ್ಲಿ ಸಂಶಯಪಡದಿರು. ಅಲ್ಲಿ ಶ್ರೀಪಾದರು ಅದೃಶ್ಯರಾಗಿರುವರು. ಅನಂತರೂಪಿಯಾದ ನಾರಾಯಣನು ಸರ್ವತ್ರ ವ್ಯಾಪಿಸಿರುವನು. ಶ್ರೀಪಾದರು ಮುಂದೆ ನೃಸಿಂಹಸರಸ್ವತಿಗ ಳೆಂದು ಅವತರಿಸುವರು ಎಂದು ಸರಸ್ವತೀಗಂಗಾಧರನು ನಿರೂಪಿಸಿ ದನು. ಈ ಮನೋಹರವಾದ ಚರಿತ್ರೆಯನ್ನು ಕೇಳಲು ಇಷ್ಟಾರ್ಥಗಳು ಸಿದ್ಧಿಸುವುವು ಎಂಬಲ್ಲಿಗೆ ಭಕ್ತಸಂಕಟಹರಣವೆಂಬ ದಶಮಾಧ್ಯಾಯವು ಮುಗಿದುದು.

॥ ಶ್ರೀ ದತ್ತಾತ್ರೇಯಾರ್ಪಣಮಸ್ತು ॥

## ೧೧ನೆಯ ಅಧ್ಯಾಯ.

ಶ್ರೀ ಗಣೇಶಾಯನಮಃ॥ ನಾಮಧಾರಕನು ಸ್ವಾಮಿ, ಶ್ರೀಪಾದರು ಮುಂದೆ ಯಾವ ಅವತಾರ ಮಾಡಿದರು ? ಇದನ್ನು ವಿಸ್ತಾರವಾಗಿ ನಿರೂಪಿಸಿರಿ ಎಂದು ಬೇಡಿಕೊಂಡನು.

ಆಗ ಸಿದ್ಧರು ವತ್ಸನೇ, ಮೊದಲು ಹೇಳಿದಂತೆ ಆ ವಿಪ್ರಸ್ತ್ರೀಯಳು ಶನಿಪ್ರದೋಷದಲ್ಲಿ ಗುರೂಪದೇಶದಂತೆ ಶಂಕರನನ್ನು ಪೂಜಿಸುತ್ತಿದ್ದಳು. ಬಳಿಕ ಈಕೆಯು ಮೃತಳಾಗಿ ಮುಂದೆ ಕರಂಜ ನಗರದಲ್ಲಿ ವಾಜಸನೇಯ ಶಾಖೆಯ ಬ್ರಾಹ್ಮಣವಂಶದಲ್ಲಿ ಹುಟ್ಟಿದಳು ಈಕೆಗೆ ತಾಯಿ ತಂದೆಗಳು ಅಂಬಾ ಭವಾನಿಯೆಂದು ಹೆಸರಿಟ್ಟರು. ಈಕೆಯು ಪ್ರಾಪ್ತ ವಯಸ್ಕಳಾದಳು. ಈಕೆಯನ್ನು ಅದೇ ಗ್ರಾಮದಲ್ಲಿ ಮಾಧವನೆಂಬ ವಿಪ್ರನಿಗೆ ಕೊಟ್ಟು ಲಗ್ನವಾಯಿತು. ಈಕೆಯು ಪತಿಗೃಹದಲ್ಲಿ ಸುಶೀಲೆಯಾಗಿ ಪೂರ್ವ ವಾಸನಾನುಸಾರವಾಗಿ ಶಿವನನ್ನು ಪೂಜಿಸುತ್ತಿದ್ದಳು ಈ ದಂಪತಿಗಳಿಬ್ಬರೂ ಭಕ್ತಿಯಿಂದ ಶಿವನನ್ನು ಅರ್ಚಿಸುತ್ತಿದ್ದರು ಇವರು ಹೀಗೆ ಶನಿಪ್ರದೋಷದಲ್ಲಿ ಶಿವಪೂಜೆಮಾಡುತ್ತಾ ಹದಿನಾರು ವರ್ಷಗಳಾದಮೇಲೆ ಈಕೆಯು ಗರ್ಭಿಣಿಯಾದಳು ಈಕೆಗೆ ಮೂರು ಐದನೇ ತಿಂಗಳುಗಳಲ್ಲಿ ಬ್ರಹ್ಮಜ್ಞಾನವನ್ನು ಬೋಧಿಸಿದರು ಮಾಧವನು ಏಳನೇತಿಂಗಳಲ್ಲಿ ಈಕೆಗೆ ಸೀಮಂತವನ್ನು ಮಾಡಿದನು ಸುವಾಸಿನಿಯರು ಈಕೆಗೆ ಆರತಿಯನ್ನೆತ್ತಿದರು ಈಕೆಯು ನವಮಾಸವಾದ ಬಳಿಕ ಶುಭದಿನದಲ್ಲಿ ಸುಕುಮಾರನನ್ನು ಪಡೆದಳು ಈ ದಂಪತಿಗಳು ಆನಂದ ಹೊಂದಿದರು ಈ ಮಗುವು ಹುಟ್ಟಿದೊಡನೆಯೇ "ಓಂ" ಎಂಬ ಶಬ್ದವನ್ನು ಉಚ್ಚರಿಸಿತು ಈ ಆಶ್ಚರ್ಯವನ್ನು ನೋಡಿ ಜನರು ಆನಂದ ಹೊಂದಿದರು ಮಾಧವನು ಈ ಶಿಶುವಿಗೆ ಜಾತಕರ್ಮವನ್ನುಮಾಡಿ ವಿಪ್ರರಿಗೆ ದಕ್ಷಿಣೆಯನ್ನು ಕೊಟ್ಟನು. ಮತ್ತು ಜ್ಯೋತಿಷ್ಕರನ್ನು ಕರೆಯಿಸಿ ಶಿಶುವಿನ ಜಾತಕವನ್ನು ಮಾಡಿಸಿ ಫಲವನ್ನು ಕೇಳಿದನು

ಆಗ ಜೋಯಿಸರು ಜಾತಕವನ್ನು ನೋಡಿ ಅಯ್ಯಾ, ಈ ಶಿಶುವು ಉದಿಸಿದ ಮುಹೂರ್ತವು ಒಳ್ಳೆಯದಾಗಿದೆ. ಈತನು ಎಲ್ಲರಿಗೂ ಗುರು

ವಾಗುವನು. ಈತನ ಅನುಗ್ರಹ ಹೊಂದಿದವರು ವಿಶ್ವವಂದ್ಯರಾಗುವರು. ಇವನ ಚರಣವು ಚಿಂತಾಮಣಿಗೆ ಸಮವಾಗಿದೆ. ಈತನಿರುವಲ್ಲಿ ಅಷ್ಟ ಸಿದ್ಧಿಗಳೂ ನವನಿಧಿಗಳೂ ಸಾಕಾರವಿರುವುವು. ಈತನು ತ್ರಿಭುವನ ಗಳಲ್ಲಿಯೂ ಪೂಜ್ಯನಾಗುವನು. ಇವನ ದರ್ಶನದಿಂದ ಸರ್ವರೂ ಪುನೀತ ನಾಗುವನು. ಈತನು ಅವತಾರಪುರುಷನು. ಇದರಲ್ಲಿ ಸಂದೇಹವಿಲ್ಲ. ಇವನಿಗೆ ದೀನತೆಯೂ ಕಲಿಭಯವೂ ಇಲ್ಲ ಎಂದು ಜಾತಕಫಲವನ್ನು ಹೇಳಿದರು.

ಮಾಧವನು ಇದನ್ನು ಕೇಳಿ ಆ ಜೋಯಿಸರನ್ನು ವಸ್ತ್ರಾಭರಣಾ ದಿಗಳಿಂದ ಬಹುಮಾನಿಸಿದನು. ಬಳಿಕ ಆ ತಾಯಿತಂದೆಗಳು ಮಗುವಿಗೆ ದೃಷ್ಟಿಯಾದೀತೆಂದು ನಿಂಬೆಯ ಹಣ್ಣನ್ನು ನಿವಾಳಿಸಿದರು. ಈ ಮಗುವು ಓಂಕಾರವನ್ನುಚ್ಚರಿಸುವ ವಾರ್ತೆಯನ್ನು ಕೇಳಿ ಜನರೆಲ್ಲರೂ ಆಶ್ಚರ್ಯ ಹೊಂದಿದರು. ಇಷ್ಟಮಿತ್ರರು ಈ ಶಿಶುವನ್ನು ನೋಡಲು ಬರುತ್ತಿದ್ದರು. ಶಿಶುವಿಗೆ ದೃಷ್ಟಿಯಾದೀತೆಂದು ಅಂಗಾರವನ್ನು ಹಚ್ಚುತ್ತಿದ್ದರು. ಮತ್ತು ಮಂತ್ರಿಸಿ ರಕ್ಷೆಯನ್ನು ಕಟ್ಟುತ್ತಿದ್ದರು. ಅವತರಿಸಿದ ಪರಮಾತ್ಮನಿಗೆ ದೃಷ್ಟಿಯೆಲ್ಲಿಯದು? ಇದು ಲೌಕಿಕ ಜನರ ತರ್ಕವು. ಹತ್ತು ದಿನಗಳಾದ ಬಳಿಕ ಈ ಶಿಶುವಿಗೆ "ಶಾಲಿಗ್ರಾಮದೇವ" ಎಂದೂ "ನರಹರಿ" ಯೆಂದೂ ನಾಮಕರಣ ಮಾಡಿದರು. ತಾಯಿಯು ಬಾಲಕನಲ್ಲಿ ಮಮತೆ ಯಿಟ್ಟು ಸಲಹುತ್ತಾ, ಈ ಮಗುವಿಗೆ ಹಾಲು ಸಾಲದೆನ್ನುತ್ತಾ ಪತಿಯನ್ನು ಕುರಿತು ಸ್ವಾಮಿ ಮಗುವಿಗೆ ನನ್ನ ಸ್ತನ್ಯವು ಸಾಲದು. ಸ್ತನ್ಯವನ್ನು ಕೊಡಲು ದಾದಿಯೊಬ್ಬಳನ್ನು ಗೊತ್ತುಮಾಡಿರಿ ಅಥವಾ ಆಕಳನ್ನಾದರೂ ಗೊತ್ತುಮಾಡಿರಿ ಎಂದಳು.

ಈ ಮಾತನ್ನು ಕೇಳಿ ಮಗುವು ನಗುತ್ತಾ ಬಲಗೈಯಿಂದ ಸ್ತನವನ್ನು ಮುಟ್ಟಿತು. ಆಗ ಆಕೆಯ ಸ್ತನದಿಂದ ಮೂವತ್ತೆರಡು ಧಾರೆಗಳಾಗಿ ಹಾಲು ಹರಿದು ಆಕೆಯುಟ್ಟ ವಸ್ತ್ರವು ನೆನೆದು ಭೂಮಿಯಲ್ಲಿ ಹರಿಯ ತೊಡಗಿತು. ದಂಪತಿಗಳದನ್ನು ನೋಡಿ ಆಶ್ಚರ್ಯದಿಂದ ಈ ಸಂಗತಿಯನ್ನು ಗುಟ್ಟಾಗಿಟ್ಟು ಮಗನನ್ನು ಪ್ರೀತಿಸುತ್ತಿದ್ದರು. ತಾಯಿಯು ಮಗುವನ್ನು ತೊಟ್ಟಿಲಲ್ಲಿ ಹಾಕುತ್ತಿದ್ದಳು, ಅದರ ಮಗುವು ತೊಟ್ಟಿಲಲ್ಲಿ ನಿಲ್ಲದೆ ಭೂಮಿ

ಯಲ್ಲಿ ಆಡುತ್ತಿತ್ತು. ಈ ಮಗುವು ಒಂದು ವರ್ಷವಾದರೂ ಒಂದು ಮಾತನ್ನೂ ಆಡಲಿಲ್ಲ. ಈ ದಂಪತಿಗಳು ಮಗನು ಮೂಕನಾದನೆಂದು ಚಿಂತಿಸುತ್ತಿದ್ದರು.

ಆಗ ಜೋಯಿಸರು ಕುಲದೇವತೆಯನ್ನು ಪೂಜಿಸಿರಿ ಭಾನುವಾರ ಅಶ್ವತ್ಥದೆಲೆಯಲ್ಲಿ ಮೂರುಬಾರಿ ಮಗುವಿಗೆ ಅನ್ನವನ್ನು ಹಾಕಿರಿ ಎಂದು ಹೇಳಿದರು ಜನರು ಮಗುವಿಗೆ ಬಾಲಭಾಷೆಯನ್ನು ಹೇಳಿಕೊಟ್ಟರೂ ಮಗುವು ಓಂಕಾರವನ್ನು ಮಾತ್ರ ಉಚ್ಚರಿಸಿತು. ಜನರು ವಿಸ್ಮಿತರಾದರು. ಏನುಮಾಡಿದರೂ ಮಗುವು ಮಾತಾಡಲಿಲ್ಲ ದಂಪತಿಗಳು ತಾವು ಅದೃಷ್ಟ ಹೀನರಾದುದರಿಂದ ಮಗುವು ಮೂಕನಾದನೆಂದು ದುಃಖಿಸಿದರು. ಶನಿ ತ್ರಯೋದಶಿಯ ವ್ರತವನ್ನು ಮಾಡಿದೆವು ಈಶ್ವರನು ವರವನ್ನು ಕೊಟ್ಟು ದರಿಂದ ಸುಕುಮಾರನಾದನು ಆದರೆ ಮಗನು ಮಾತಾಡುವುದಿಲ್ಲ. ಒಬ್ಬನೇ ಮಗನಿದ್ದಾನೆ, ಬೇರೆ ಮಕ್ಕಳನ್ನು ನಾವು ನೋಡಲಿಲ್ಲ. ಮಗನು ರಕ್ಷಿಸುವನೆಂದು ತಿಳಿದಿದ್ದೆವು ಶಂಕರನು ಎಂಥಾವರವನ್ನು ಕೊಟ್ಟನು? ಎಂದು ದುಃಖಿಸಿದರು.

ತಾಯಿ ತಂದೆಗಳು ದುಃಖಿಸುವುದನ್ನು ನೋಡಿ ಬಾಲಕನು ಮನೆ ಯೊಳಗಿದ್ದ ಒಂದು ಕಬ್ಬಿಣದ ಕೋಲನ್ನು ತೆಗೆದುಕೊಂಡು ಬರಲು ಅದು ಶುದ್ಧ ಸುವರ್ಣವಾಯಿತು ಇದನ್ನು ತಾಯಿಯು ತೆಗೆದುಕೊಂಡು ವಿಸ್ಮಿತಳಾಗಿ ತನ್ನ ಪತಿಗೆ ತೋರಿಸಿ ಸಂತೋಷಿಸಿದಳು. ಈ ಸಂಗತಿ ಯನ್ನು ಯಾರಿಗೂ ಹೇಳಲಿಲ್ಲ ಬಾಲಲೀಲೆಯನ್ನು ನೋಡಿ ಸಂತೋಷಿ ಸಿದಳು. ಮತ್ತು ಬೇರೆ ಕಬ್ಬಿಣದ ತುಂಡನ್ನು ಬಾಲನ ಕೈಗೆ ಕೊಟ್ಟಳು. ಈ ಬಾಲಕನದನ್ನು ಅಮೃತಮಯ ದೃಷ್ಟಿಯಿಂದ ನೋಡಲು ಸುವರ್ಣ ವಾಯಿತು ಆಗ ಆಕೆಯು ಈ ಬಾಲಕನು ಕಾರಣ ಪುರುಷನು ಎಂದಾ ಲಿಂಗಿಸಿದಳು. ಈ ದಂಪತಿಗಳು ಮಗನನ್ನು ಕುರಿತು ಕುಲದೀಪಕ, ಶಿರೋ ಮಣಿಯೇ ನಿನ್ನಿಂದ ಸುಖವುಂಟಾಗಿದೆ ಅಜ್ಞಾನದಿಂದ ನೀನು, ಮೂಕ ನೆಂದು ತಿಳಿದೆವು ನಮ್ಮ ಇಷ್ಟವನ್ನು ಪೂರ್ಣಮಾಡು ಎಂದು ಹೇಳಿದರು.

ಆಗ ಬಾಲಕನು ಮಂದಹಾಸದಿಂದ ತನಗೆ ಉಪನಯನಮಾಡಿ ಯಜ್ಞೋಪವೀತವನ್ನೂ, ಸೊಂಟಕ್ಕೆ ಮೌಂಜಿಯನ್ನೂ ಧಾರಣೆ ಮಾಡಿ

ಸಿದರೆ ಆಗ ನನಗೆ ಮಾತುಬರುವುದು ಎಂದು ಸನ್ನೆಯಿಂದ ತಿಳಿಸಿದನು. ಆಗ ತಾಯಿ ತಂದೆಗಳು ಜೋಯಿಸರ ಮಾತಿನಂತೆ ಉಪನಯನಕ್ಕೆ ಮುಹೂರ್ತವನ್ನು ನಿಶ್ಚಯಮಾಡಿದರು. ಮಗನನ್ನು ನವರತ್ನದ ಆಭರಣ ಗಳಿಂದಲಂಕರಿಸಿದರು. ನಾಲ್ಕು ವೇದಗಳನ್ನೂ ಬಲ್ಲ ಬ್ರಾಹ್ಮಣರು ಬಂದು ವೇದಪಾರಾಯಣ ಮಾಡುತ್ತಿದ್ದರು ಇಷ್ಟಮಿತ್ರರೂ ಬಂದರು. ಉಪನ ಯನ ಮಂಟಪವನ್ನು ವಿಚಿತ್ರತರವಾಗಿ ಅಲಂಕರಿಸಿದರು ಮೂಕ ಹುಡುಗನಿಗೆ ಉಪನಯನವೆಂದು ಕೇಳಿ ಜನರು ಆಹಾ! ಈ ವಿಪ್ರನು ಈ ಮೂಕನಿಗೆ ವ್ಯರ್ಥವಾಗಿ ಖರ್ಚುಮಾಡಿ ಉಪನಯನ ಮಾಡುವನು. ಮೂಕನಿಗೆ ಗಾಯತ್ರಿ ಉಪದೇಶವೆಂತು ಮಾಡುವನು ? ಆಚರಣೆಯು ಹೇಗೆ? ಎಂದೂ, ಕೆಲವರು ತಮಗೆ ಮೃಷ್ಟಾನ್ನಭೋಜನವೂ ದಕ್ಷಿಣೆಯೂ ದೊರೆಯುವುವು ಎಂದೂ, ಹೇಳುತ್ತಿದ್ದರು. ಚೌಲಪಜ್ಞ್ಕಿಯೂಟವೂ ಚೌಲವೂ ಅಭ್ಯಂಗವೂ ಆದಮೇಲೆ ಮಗನಿಗೆ ಯಜ್ಞೋಪವೀತಧಾರಣೆ ಮಾಡಿದರು. ಮೌಂಜಿಯನ್ನು ಕಟ್ಟಿ ಸುಮುಹೂರ್ತದಲ್ಲಿ ಮಂತ್ರೋಪ ದೇಶಮಾಡಿದರು. ಗಾಯತ್ರೀ ಮಂತ್ರವನ್ನು ವಟುವು ಮನಸ್ಸಿನಲ್ಲಿ ಉಚ್ಚರಿಸಿದನು ಬಹಿರಂಗವಾಗಿ ಹೇಳಲಿಲ್ಲ. ತಾಯಿಯು ಬಂದು ರತ್ನಖಚಿತವಾದ ಒಡವೆಗಳನ್ನೂ ವಸ್ತ್ರಗಳನ್ನೂ ತೆಗೆದುಕೊಂಡು ಭಿಕ್ಷೆಹಾಕಲು ಬಂದಳು ಆಗ ವಟುವು ಋಗ್ವೇದದ " ಅಗ್ನಿಮೀಳೆ " ಎಂಬ ಮಂತ್ರವನ್ನು ಹೇಳಿ ಭಿಕ್ಷೆಯನ್ನು ಸ್ವೀಕರಿಸಿದನು ಎರಡನೇ ಬಾರಿ " ಇಷೇತ್ವೋರ್ಜೇತ್ವಾದಿ " ಮಂತ್ರದಿಂದ ಭಿಕ್ಷೆಯನ್ನು ಗ್ರಹಿಸಿ ದನು. ಮೂರನೇಸಾರಿ " ಅಗ್ನಆಯಾಹಿ " ಎಂಬ ಸಾಮವೇದದ ಮಂತ್ರವನ್ನುಚ್ಚರಿಸಿ ಭಿಕ್ಷೆಯನ್ನು ಗ್ರಹಿಸಿದನು ಸಭಿಕರೆಲ್ಲರೂ ವಿಸ್ಮಿತ ರಾದರು. ಆಗ ತಂದೆಯು ಈ ಮೂಕಬಾಲಕನು ನಾಲ್ಕು ವೇದ ಗಳನ್ನೂ ಹೇಳಿದುದರಿಂದ ಈತನು ಕಾರಣಿಕನಾದ ಅವತಾರ ಪುರುಷ ನೆಂದು ಸಂತೋಷಿಸಿದನು

ಬ್ರಹ್ಮಚಾರಿಯು ಅಮ್ಮಾ ! ನೀನು ನನಗೆ ಭಿಕ್ಷೆಯನ್ನು ಬೇಡೆಂದು ಉಪದೇಶಿಸಿದೆಯಷ್ಟೆ ? ನಿನ್ನ ಮಾತು ಸುಳ್ಳಾಗದು ನನಗೆ ಅನುಜ್ಞೆ ಕೊಡು. ತೀರ್ಥಯಾತ್ರೆ ಮಾಡಬೇಕೆಂದು ನಿರ್ಧರಿಸಿರುವೆನು ಬ್ರಹ್ಮ

ಚಾರಿಯಾದ ನಾನು ಮನೆಮನೆಯಲ್ಲಿ ಭಿಕ್ಷೆಬೇಡಿ, ವೇದಾಭ್ಯಾಸಮಾಡು ವೆನು ಎಂದನು

ಈ ಮಾತನ್ನು ಕೇಳಿ ತಾಯಿಯು ಕಣ್ಣೀರನ್ನು ತುಂಬಿ ದುಃಖದಿಂದ ಮೂರ್ಛಿಸಿದಳು. ಬಳಿಕ ಎಚ್ಚೆತ್ತು ಪುತ್ರನೇ, ನೀನು ನಮ್ಮನ್ನು ಮುಪ್ಪಿನಲ್ಲಿ ರಕ್ಷಿಸುವಿಯೆಂದು ಆಶಿಸಿದ್ದೆವು ಇದುವರಿವಿಗೆ ನೀನು ಮೂಕನಾಗಿದ್ದೆ ಈಗ ನಿನ್ನ ಮಾತನ್ನು ಕೇಳಿ ಸಂತೋಷಿಸಿದೆವು. ಶಿವಪೂಜಾ ಫಲವು ಸಿದ್ಧಿಸಿತೆಂದು ನಂಬಿದ್ದೆವು ಎಂದು ಹೇಳಿ ಕುಮಾರನನ್ನು ಆಲಿಂಗಿಸಿ ಬಾಲಕನೇ, ನಮ್ಮಲ್ಲಿ ದಯದೋರು ಎಂದಳು

ಆಗ ಬಾಲಕನು ಅಮ್ಮಾ! ದುಃಖಿಸದಿರು ನಿನಗೆ ಇನ್ನೂ ನಾಲ್ಕು ಮಂದಿ ಮಕ್ಕಳಾಗುವರು. ಅವರು ನಿನ್ನನ್ನು ಸೇವಿಸುವರು. ನೀನು ಪೂರ್ವದಲ್ಲಿ ಶಂಕರನನ್ನು ಆರಾಧಿಸಿದ್ದೆ ಎಂದು ಆಕೆಯ ತಲೆಯಮೇಲೆ ತನ್ನ ಕರವನ್ನಿಟ್ಟು ಅನುಗ್ರಹಿಸಿದನು

ಆಗ ಆಕೆಯು ತನ್ನ ಪೂರ್ವಜನ್ಮದ ಸಂಗತಿಯನ್ನು ತಿಳಿದು ವಿಸ್ಮಿತಳಾಗಿ ಮಗನನ್ನು ಶ್ರೀಪಾದರೆಂದು ತಿಳಿದಳು ಈ ಬಾಲಕನು ತಾಯಿಯನ್ನು ಸಂತೈಸಿ ಈ ಸಂಗತಿಯನ್ನು ಗುಟ್ಟಾಗಿರಿಸು ಎಂದು ಹೇಳಿ ಅಮ್ಮಾ ' ನಾನು ಯತಿಯು, ಸಂಸಾರದಲ್ಲಿ ಲಿಪ್ತನಾಗುವುದಿಲ್ಲ, ಈಗ ತೀರ್ಥಯಾತ್ರೆಗೆ ಹೊರಡಲು ನಿನ್ನನುಜ್ಞೆಯನ್ನು ಕೇಳುವೆನು ಎಂದನು. ಈ ರೀತಿಯಿಂದ ತಾಯಿಗೆ ಗುರುವು ವಿನಯದಿಂದ ಹೇಳಲು ,

ತಾಯಿಯು ಪುತ್ರನೇ, ನೀನು ಇನ್ನೂ ಹುಡುಗನಾಗಿದ್ದೀಯೆ. ಇನ್ನೂ ಚೆನ್ನಾಗಿ ಕಣ್ದೆರೆಯಲಿಲ್ಲ. ಈ ಬಾಲ್ಯದಲ್ಲಿ ಸನ್ಯಾಸವೆಲ್ಲಿ ? ಬ್ರಾಹ್ಮಣನು ನಾಲ್ಕು ಆಶ್ರಮಗಳನ್ನು ಹೊಂದಬೇಕೆಂದು ಧರ್ಮಶಾಸ್ತ್ರದಲ್ಲಿ ಹೇಳಿದೆ. ಬ್ರಹ್ಮಚರ್ಯೆಯನ್ನು ಹನ್ನೆರಡು ವರ್ಷಗಳು ಆಚರಿಸಬೇಕು. ಬಳಿಕ ಗೃಹಸ್ಥಾಶ್ರಮವು ಬರುವುದು. ಇದು ಮುಖ್ಯವಾದುದು. ಇದನ್ನಾಚರಿಸಿ ಸನ್ಯಾಸವನ್ನು ತೆಗೆದುಕೊಳ್ಳಬೇಕು ಎಂದು ಧರ್ಮಶಾಸ್ತ್ರವು ಹೇಳುವುದು. ಬ್ರಹ್ಮಚರ್ಯಾಶ್ರಮದಲ್ಲಿ ವೇದಾಧ್ಯಯನಮಾಡಬೇಕು. ಮದುವೆಯಾದ ಮೇಲೆ ಗೃಹಸ್ಥಾಶ್ರಮವು ಬರುವುದು. ಇದರಲ್ಲಿ ಪುತ್ರರನ್ನು ಪಡೆದು

ಯಾಗಾದಿ ಕರ್ಮಗಳನ್ನು ಮಾಡಿ ಬಳಿಕ ಸನ್ಯಾಸವನ್ನು ತೆಗೆದುಕೊಳ್ಳಬೇಕು. ಬಾಲ್ಯದಲ್ಲಿ ಸನ್ಯಾಸವನ್ನು ತೆಗೆದುಕೊಳ್ಳಬಾರದು ಗೃಹಸ್ಥಾಶ್ರಮದಲ್ಲಿ ಸರ್ವೇಂದ್ರಿಯಗಳನ್ನೂ ತೃಪ್ತಿಪಡಿಸಿ ಮನೋಭಿಲಾಷೆಗಳನ್ನು ಪೂರ್ಣಮಾಡಿ ಬಳಿಕ ತಪೋಮಾರ್ಗವಾದ ಸನ್ಯಾಸವನ್ನು ಹೊಂದಬೇಕು ಎಂದಳು.

ಆಗ ಬಾಲಕನು ತಾಯಿಗೆ ಬ್ರಹ್ಮಜ್ಞಾನವನ್ನು ಬೋಧಿಸಿದನು. ನಾಮಧಾರಕನೇ ಕೇಳು ಎಂದು ಸಿದ್ಧರು ನಿರೂಪಿಸಿದರು ಎಂದು ಸರಸ್ವತೀಗಂಗಾಧರನು ಹೇಳಿದನೆಂಬಲ್ಲಿಗೆ ಗುರುಚರಿತ್ರಾಮೃತದಲ್ಲಿ ಹನ್ನೊಂದನೇ ಅಧ್ಯಾಯವು ಮುಗಿದುದು

|| ಶ್ರೀ ಗು ರ ವೇ ನ ಮಃ ||

## ೧೨ನೆಯ ಅಧ್ಯಾಯ.

ಶ್ರೀ ಗಣೇಶಾಯನಮಃ|| ಸಿದ್ಧರು ಹೇಳುವರು, ಶಿಷ್ಯನೇ ಕೇಳು- ಆಗ ಶ್ರೀಗುರುವು ಅಮ್ಮಾ, ನೀನು ಈ ರೀತಿಯಾಗಿ ಹೇಳುತ್ತೀಯೆ. ಆದರೆ ಈ ದೇಹವು ಸ್ಥಿರವಲ್ಲ. ಉದುಕುವೆವೆಂಬ ನಂಬಿಕೆಯೇನು ?

ಅನಿತ್ಯಾನಿಶರೀರಾಣಿ ವಿಭವೋನೈವಶಾಶ್ವತಃ |
ನಿತ್ಯಂಸನ್ನಿಹಿತೋಮೃತ್ಯುಃ ಕರ್ತವ್ಯೋಧರ್ಮಸಂಗ್ರಹಃ ||

ಎಂದರೆ ಈ ದೇಹವು ಸ್ಥಿರವಲ್ಲವು. ಐಶ್ವರ್ಯ ಸುಖಾದಿಗಳು ಅಸ್ಥಿರವು. ಮೃತ್ಯುವು ಸಹಾ ಹತ್ತಿರದಲ್ಲೇ ಇರುವುದು. ಆದುದರಿಂದ ನರನು ಧರ್ಮಾಚರಣೆಯನ್ನು ಮಾಡಬೇಕು ಎಂದರ್ಥವು. ಚಿರಂಜೀವಿಯಾಗಿದ್ದರೆ ನೀನು ಹೇಳಿದಂತಿರಬಹುದು. ಆದರೆ ದೇಹವೂ ವೈಭವವೂ ಸ್ಥಿರವಲ್ಲ ; ಕ್ಷಣಭಂಗುರವಾದುದು. ಶರೀರವು ದೃಢವಾಗಿರುವಾಗಲೇ ಪುಣ್ಯಸಂಪಾದನೆ ಮಾಡಬೇಕು. ಮೃತ್ಯುವನ್ನು ಯಾರು ಗೆಲ್ಲುವರೋ ಅವರ ಶರೀರವು ಶಾಶ್ವತವಾದೀತು. ಅವರಿಗೆ ನಿನ್ನಮಾತು ಸತ್ಯವಾದೀತು. ಅಹೋ

ರಾತ್ರಿಯಲ್ಲಿಯೂ ಆಯುಷ್ಯವು ಕಮ್ಮಿಯಾಗುತ್ತಿರುವುದು ಆದುದರಿಂದ ಪೂರ್ವ ವಯಸ್ಸಿನಲ್ಲಿಯೇ ಧರ್ಮಸಂಗ್ರಹ ಮಾಡಬೇಕು ಸೂರ್ಯನ ರಥವು ಇಪ್ಪತ್ತೆರಡು ಸಾವಿರ ಗ್ರಾಮಗಳನ್ನು ತಿರುಗುವಷ್ಟು ಕಾಲವು ನಿಮಿಷದಂತೆ ತೋರುವುದು ಹಾಗೆಯೇ ಆಯುಷ್ಯವು ಕ್ಷೀಣಿಸುವುದು. ಸ್ವಲ್ಪ ನೀರಿನಲ್ಲಿರುವ ಮೀನಿನಂತೆ ನರನು ಅಲ್ಪಾಯುಷ್ಯವುಳ್ಳವನಾಗಿದ್ದಾನೆ ಆದುದರಿಂದ ನಾವು ಧರ್ಮಮಾಡಬೇಕು ಮರದೆಲೆಗಳ ತುದಿಯಲ್ಲಿರುವ ನೀರು ನಿಂತಿದ್ದರೂ ಅದು ಹೇಗೆ ಸ್ಥಿರವಾಗಿರದೆ ಬೀಳುವುದೋ ಹಾಗೆ ಈ ದೇಹವೂ ಸ್ಥಿರವಾಗಿರದು. ಈ ಯೌವ್ವನವೂ ಜೀವನವೂ ಸ್ಥಿರವಲ್ಲ. ಮುಪ್ಪೂ ಮರಣವೂ ಬಂದು ದೇಹವು ಯಾವಾಗ ಬೀಳುವುದೋ ತಿಳಿಯದು. ಆದುದರಿಂದ ದೇಹವನ್ನು ನಂಬಬಾರದು. ಮೃತ್ಯುವು ದೇಹವನ್ನು ಬೀಳಿಸುವುದು ಆದುದರಿಂದ ಧರ್ಮವನ್ನು ಮಾಡಬೇಕು. ಹಣ್ಣಾದ ಮರದೆಲೆಗಳು ಬೀಳುವಂತೆ ಈ ದೇಹವು ನಂಬತಕ್ಕದ್ದಲ್ಲ. ಒಬ್ಬ ಮನುಷ್ಯನು ತನ್ನ ಹೆಂಡತಿಗೆ ದಿನಗಳನ್ನೆಣಿಸಿ ಧನವನ್ನು ಕೊಡುವಂತೆ ಯಮನು ರಾತ್ರಿಗಳನ್ನು ಎಣಿಸುತ್ತಿರುವನು ನದಿಗಳೆಲ್ಲವೂ ಸಮುದ್ರಕ್ಕೆ ನೀರನ್ನು ತೆಗೆದುಕೊಂಡು ಹೋಗುವುವು ಆದರೆ ಆ ನೀರನ್ನು ಹಿಂದಕ್ಕೆ ತೆಗೆದುಕೊಂಡು ಬರಲಾರವು ಇದರಂತೆಯೇ ಕಳೆದುಹೋದ ಆಯುಷ್ಯವು ಹಿಂತಿರುಗಿ ಬಾರದು. ಹಗಲು ರಾತ್ರಿಗಳು ಅಸ್ಯಂಖಾತವಾಗಿ ಓಡಿ ಹೋಗುತ್ತಿವೆ. ಆದುದರಿಂದ ಪುಣ್ಯವನ್ನು ಸಂಪಾದಿಸದಿದ್ದವನು ಪಶುವಿಗೆ ಸಮಾನನು ಮನುಷ್ಯನು ಯಾವ ದಿನದಲ್ಲಿ ಪುಣ್ಯವನ್ನು ಮಾಡದೇ ವ್ಯರ್ಥವಾಗಿ ಕಾಲಕಳೆಯುವನೋ ಅಂಥವನಲ್ಲಿ ಯಮನಿಗೆ ಕರುಣವಿಲ್ಲ. ಆದುದರಿಂದ ಪುಣ್ಯಮಾಡಬೇಕು. ಪುತ್ರನೂ, ಸತಿಯೂ, ಧನವೂ, ಗೋಧನವೂ, ಆಯುಷ್ಯವೂ, ಮನೆಯೂ ನಿಜವೆಂದು ನಂಬಿದವನು ಪಶುವಿಗೆ ಸಮಾನನು. ಮೊಸಳೆಯು ನರರನ್ನು ಹಿಡಿದು ತಿನ್ನುವಂತೆ ಮೃತ್ಯುವು ಹಿಡಿದು ತಿನ್ನುವುದು. ಆದುದರಿಂದ ವಿದ್ವಾಂಸರು ಯೌವನದಲ್ಲಿ ಪುಣ್ಯವನ್ನು ಮಾಡಬೇಕು. ಇದನ್ನು ಬಿಟ್ಟು ನೀನು ನನಗೆ ಯಾವ ಬುದ್ಧಿಯನ್ನು ಹೇಳುವಿ ? ಯಮನಿಗೆ ಯಾರು ಇಷ್ಟರಾಗಿರುವರೋ ಅವರು ಈ ರೀತಿಯಾಗಿ ಸಂಸಾರದಲ್ಲಿರಲು ಹಟಮಾಡಬೇಕು. ಜ್ಞಾನಿಯಾದವನು ಪುಣ್ಯಮಾಡಬೇಕು. ಸಂಸಾರವು ಸ್ವಪ್ನದಂತಿರುವುದು. ಮಲ್ಲಿಗೆಯು

ಹೂವು ಬಾಡುವಂತೆ ಈ ದೇಹವು ಒಣಗಿ ಹೋಗುವುದು ಮಿಂಚು ದಾರಿಗನಿಗೆ ಹಾದಿಯನ್ನು ತೋರಿಸಿ ಮಾಯವಾಗುವಂತೆ ಈ ದೇಹವು ಸ್ಥಿರವಲ್ಲ ಎಂದು ಬೋಧಿಸಿದರು ಈ ರೀತಿಯಾದ ಬೋಧೆಯನ್ನು ಕೇಳಿ ತಂದೆಯೂ ಜನರೂ ವಿಸ್ಮಿತರಾಗಿದ್ದರು

ಆಗ ತಾಯಿಯು, ಪುತ್ರನೇ! ನೀನು ನನಗೆ ಜ್ಞಾನವನ್ನು ಬೋಧಿಸಿದೆ ಯಷ್ಟೆ? ಆದರೆ ನನಗೆ ನಾಲ್ವರು ಸುತರಾಗುವರೆಂದು ಹೇಳಿದುದು ನನಗೆ ನಂಬಿಕೆ ಯಾಗದು. ನನಗೊಬ್ಬ ಮಗನಾಗುವವರೆಗಾದರೂ ನೀನು ನನ್ನ ಹತ್ತಿರದಲ್ಲಿರಬೇಕು. ನನ್ನ ಈ ಮಾತನ್ನು ಮೀರಿ ನೀನು ಹೊರಟುಹೋ ದರೆ ನಾನು ಪ್ರಾಣವನ್ನೇ ಬಿಡುವೆನು ಇದು ಸತ್ಯವು. ನೀನು ನನ್ನ ಮಗ ನಲ್ಲ, ಕುಲದೈವವಾಗಿದ್ದೀಯೆ. ಈ ನನ್ನ ಮಾತನ್ನು ನಡೆಸೆಂದಳು.

ಈ ವಚನವನ್ನು ಕೇಳಿ ಗುರುವು ಅಮ್ಮಾ! ನೀನು ನನ್ನ ಮಾತನ್ನು ಸತ್ಯವೆಂದು ತಿಳಿ ನಿನಗೆ ಇಬ್ಬರು ಮಕ್ಕಳಾದಮೇಲೆ ನನಗನುಜ್ಞೆಯನ್ನು ಕೊಡು. ಬಳಿಕ ನಾನು ನಿಲ್ಲುವುದಿಲ್ಲ. ಇದು ಸತ್ಯವು ಒಂದು ವರ್ಷ ನಿನ್ನ ಮನೆಯಲ್ಲಿರುವೆನು. ನಿನ್ನ ಇಷ್ಟವು ನೆರವೇರಿದಮೇಲೆ ನನಗೆ ಅಪ್ಪಣೆ ಕೊಡು ಎಂದು ಹೇಳಿ ಶ್ರೀಗುರುವು ಪ್ರೀತಿಯಿಂದ ಶಿಷ್ಯರಿಗೆ ವೇದಾಭ್ಯಾಸ ಮಾಡಿಸುತ್ತಿದ್ದರು. ಜನರು ವಿಸ್ಮಿತವಾದರು. ಈರೀತಿ ಯಾಗಿ ಏಳುವರ್ಷದ ಬ್ರಹ್ಮಚಾರಿಯು ನಾಲ್ಕು ವೇದಗಳನ್ನೂ ಹೇಳು ತ್ತಿದ್ದನು. ವಿದ್ವಾಂಸರು ವೇದವನ್ನೋದಲು ಇವರ ಹತ್ತಿರ ಬರು ತ್ತಿದ್ದರು.

ಹೀಗಿರಲು ತಾಯಿಯು ಗರ್ಭಿಣಿಯಾಗಿ ನವಮಾಸಾಂತ್ಯದಲ್ಲಿ ಅವಳಿ ಮಕ್ಕಳನ್ನು ಹಡೆದಳು. ಈ ದಂಪತಿಗಳು ಈ ಸುಂದರ ಪುತ್ರರನ್ನು ನೋಡಿ ಆಶೀರ್ವದಿಸಿ ಆಗ ಗುರುವಾಕ್ಯವು ನಿಜವೆಂದು ತಿಳಿದರು. ಹೀಗೆ ಒಂದು ವರ್ಷವೂ ಮೂರು ತಿಂಗಳುಗಳೂ ಕಳೆದುವು. ಶಿಶುಗಳು ಆಡು ತ್ತಿದ್ದುವು. ಆಗ ಗುರುವು ಬಂದು ಜನನಿಯೆ! ನನ್ನ ಮಾತು ನಿಜವಾಯಿ ತು. ನಿನ್ನ ಇಷ್ಟವೂ ನೆರವೇರಿತು. ಪೂರ್ಣಾಯುಷ್ಯವುಳ್ಳ ಇಬ್ಬರು ಮಕ್ಕಳಾದರು. ಇನ್ನೂ ಇಬ್ಬರು ಸುತರಾಗುವರು. ಬಳಿಕ ಬಹಳ

ಮಗಳಾಗುವಳು. ನೀನು ಸುಖಸಂತೋಷಗಳಿಂದಿರು. ನನಗೆ ನಿರೂಪ ವನ್ನು ಕೊಡು ಎಂದರು.

ಆಗ ದಂಪತಿಗಳು ಪುತ್ರನೆ! ನೀನು ಕುಲದೇವತೆಯಾಗಿದ್ದೀಯೆ. ಹೆಚ್ಚಾಗಿ ಹೇಳಲು ಶಕ್ತಿಯಿಲ್ಲ. ನಿನ್ನ ಸ್ವರೂಪಜ್ಞಾನವು ತಿಳಿಯದು. ನಾವು ಮಾಯಾಮೋಹಿತರಾಗಿದ್ದೇವೆ. ನೀನು ಮಗನೆಂದು ನಿಷ್ಠುರ ವಚನವನ್ನು ನುಡಿದೆವು ಇದನ್ನು ಮನ್ನಿಸು. ನಿನ್ನೊಡನೆ ಭೋಜನ ವನ್ನೂ ಶಯನವನ್ನೂ ಮಾಡಿದೆವು ನಿನ್ನನ್ನೆತ್ತಿಕೊಂಡು ತೊಡೆಯಲ್ಲಿ ಕುಳ್ಳಿರಿಸಿದೆವು. ನಮ್ಮನ್ನು ಮನ್ನಿಸು. ನಮ್ಮ ವಂಶಕ್ಕೆ ನೀನು ತಾರಕ ನಾಗಿದ್ದೀಯೆ. ಪ್ರದೋಷ ಪೂಜೆಯ ಫಲವು ಫಲಿಸಿತು. ನೀನು ಹೊರಟು ಹೋದರೆ ನಮ್ಮ ಗತಿಯೇನು ? ದಯವಿಟ್ಟು ಆಗಾಗ್ಯೆ ನಮಗೆ ದರ್ಶನ ಕೊಡುತ್ತಿರಬೇಕು ಗಂಗೆಯು ಸಗರ ಪುತ್ರರಮೇಲೆ ಹರಿದು ನಾಲ್ವತ್ತೆ ರಡು ಕುಲಗಳನ್ನೂ ಪಾವನಮಾಡಿದಂತೆ ನೀನು ಆಗಾಗ್ಯೆ ದರ್ಶನ ಕೊಡುತ್ತಾ ಇರು ಎಂದು ಹೇಳಿದರು

ಆಗ ಗುರುವು ತಾಯಿ ತಂದೆಗಳನ್ನು ಕುರಿತು ನೀವು ಸ್ಮರಿಸಿದಾಗ ನಾನು ಬರುವೆನು, ಸಂದೇಹವಿಲ್ಲ ನಿಮ್ಮ ಮನೆಯಲ್ಲಿ ದೀನತ್ವವಿಲ್ಲ. ಐಶ್ವ ರ್ಯವು ಸ್ಥಿರವಾಗಿರುವುದು. ಪೂರ್ವಜನ್ಮದಲ್ಲಿ ಮಾಡಿದ ಶಿವಪೂಜೆಯ ಪ್ರಭಾವದಿಂದ ಪ್ರತಿಜನ್ಮದಲ್ಲೂ ಐಶ್ವರ್ಯವಂತರಾಗಿರುವಿರಿ ಈ ಜನ್ಮದಲ್ಲಿ ಸೌಖ್ಯವನ್ನುಹೊಂದಿ ಅಂತ್ಯದಲ್ಲಿ ಮೋಕ್ಷವನ್ನು ಪಡೆಯುವಿರಿ ಶಿವಪೂಜೆ ಮಾಡಿದವರಿಗೆ ಪುನರ್ಜನ್ಮವಿಲ್ಲ ಶಂಕರನನ್ನಾರಾಧಿಸಿದುದರಿಂದ ನಿಮ್ಮ ಇಷ್ಟಾರ್ಥವನ್ನು ನೆರವೇರಿಸಲು ನಾನು ಅವತರಿಸಿದೆನು. ಒಂದು ವರ್ಷದ ಮೇಲೆ ಪುನಃ ದರ್ಶನ ಕೊಡುವೆನು ಈಗ ನಾನು ಬದರಿಕಾ ಶ್ರಮಕ್ಕೆ ಹೋಗಿ ಸಿದ್ಧರ ದರ್ಶನವನ್ನು ಮಾಡಿಕೊಂಡು ಬರುವೆನು ಎಂದು ನುಡಿದು ಜನನೀಜನಕರ ಅನುಜ್ಞೆಯನ್ನು ಹೊಂದಿ ಹೊರಟು ಹೋದರು ಆಗ ಅನೇಕ ಜನರು ಬಂದು ಈ ದಂಪತಿಗಳನ್ನು ಕುರಿತು ನಿಮ್ಮ ಪುತ್ರನಾದ ಬ್ರಹ್ಮಚಾರಿಯು ತಪಸ್ವಿಯಾದ ಅವತಾರ ಪುರುಷನಾಗಿ ರುವನು ಎಂದು ಸಮಾಧಾನ ಮಾಡಿದರು. ಆಗ ಇನ್ನು ಕೆಲವರು ಈ ಮಗನನ್ನು ಇವರು ತಪಸ್ಸಿಗೆ ಕಳುಹಿಸಿದುದು ಆಶ್ಚರ್ಯವೇಸರಿ.

ಈ ಬ್ರಹ್ಮಚಾರಿಯು ಬಾಲಕನಲ್ಲ ಲೋಕವಂದ್ಯನು! ಏಳು ವರ್ಷದ ಈ ಬಾಲಕನು ನಾಲ್ಕು ವೇದಗಳನ್ನೂ ಹೇಳಿದನಷ್ಟೆ? ಇವನು ಮನುಷ್ಯಮಾತ್ರನಲ್ಲ ಎಂದು ವಂದಿಸಿ ಹೊರಟುಹೋದರು. ತಾಯಿ ತಂದೆಗಳು ಮಗನನ್ನು ಕಳುಹಿಸುತ್ತಾ ಬರುತ್ತಿದ್ದರು.

ಆಗ ಶ್ರೀಗುರುವು ತಮ್ಮ ದತ್ತಾತ್ರೇಯಾವತಾರವನ್ನು ನೈಜವಾಗಿ ತೋರಿಸಿದರು. ನರಹರಿಯು! ತ್ರಿಮೂರ್ತಿಗಳ ಅವತಾರರಾಗಿರುವರೆಂದು ತಿಳಿದು ಈ ತಾಯಿ ತಂದೆಗಳು ಗುರುವನ್ನು ವಂದಿಸಿದರು ತ್ರಿಮೂರ್ತಿ ರೂಪರಾದ ಜಗದ್ಗುರುವೇ, ಜಯವು! ನಮ್ಮ ಪುಣ್ಯವುದೊಡ್ಡದು. ಆದುದರಿಂದ ನಿನ್ನ ರೂಪವನ್ನು ನೋಡಿದೆವು. ನೀನು ನಮ್ಮನ್ನು ರಕ್ಷಿಸಿದೆ. ನಮಗೆ ಪುನಃ ದರ್ಶನಕೊಡು ಎಂದು ಗುರುವನ್ನಾಲಿಂಗಿಸಿದರು ಆಗ ಗುರುವು ತಂದೆ ತಾಯಿಗಳನ್ನು ಕುರಿತು ಪುನಃ ದರ್ಶನಕೊಡುವೆನೆಂದು ಸಮಾಧಾನಮಾಡಿ ಕಳುಹಿಸಿದನು ವರದ ಮೂರ್ತಿಯಾದ ಗುರುರಾಯನು ಬದರಿಕಾಶ್ರಮಕ್ಕೆ ಹೊರಟು ಶ್ರೀಕಾಶೀಕ್ಷೇತ್ರಕ್ಕೆ ಬಂದು ಅಲ್ಲಿ ವಿಶ್ವೇಶ್ವರಸ್ವಾಮಿಯ ಸಂದರ್ಶನವನ್ನು ಮಾಡಿ ಆತ್ಮಾರಾಮರಾಗಿರುತ್ತಿದ್ದರು. ಅಲ್ಲಿ ಇವರು ಅಷ್ಟಾಂಗಯೋಗದಿಂದ ತಪಸ್ಸನ್ನು ಮಾಡುತ್ತಿದ್ದರು. ಈ ಕಾಶಿಯಲ್ಲಿ ಬಹುಜನ ತಪಸ್ವಿಗಳಿದ್ದರು. ಸನ್ಯಾಸಿಗಳೂ ಅವಧೂತರೂ ತಪಸ್ಸು ಮಾಡುತ್ತಿದ್ದರು. ಶ್ರೀಗುರುವು ಯೋಗಾಭ್ಯಾಸಧುರಂಧರರಾಗಿರುವುದನ್ನು ನೋಡಿ ಯತಿಗಳನೇಕರು ಬಂದು ಈ ಬ್ರಹ್ಮಚಾರಿಯು ವೈರಾಗ್ಯದಿಂದ ನಾನಾ ವಿಧವಾಗಿ ತಪಸ್ಸನ್ನು ಮಾಡುತ್ತಾ ದೇಹದ ಆಶೆಯಿಲ್ಲದೆ ತ್ರಿಕಾಲದಲ್ಲಿಯೂ ಸ್ನಾನವನ್ನು ಮಾಡಿ ಸನ್ಯಾಸಿಯಾಗಿರುವನು ಎಂದು ಸ್ತುತಿಸಿದರು. ಸನ್ಯಾಸಿಗಳೆಲ್ಲರೂ ಗುರುದರ್ಶನಕ್ಕೆ ಬಂದರು. ಆಗ ಕೃಷ್ಣಸರಸ್ವತಿಯೆಂಬ ವೃದ್ಧ ಸನ್ಯಾಸಿಯು ಜ್ಞಾನಿಯಾಗಿದ್ದು ಯತಿಗಳನ್ನು ಕುರಿತು ಈ ಬ್ರಹ್ಮಚಾರಿಯು ... ನಲ್ಲ ಅವತಾರಪುರುಷನಾಗಿಯೂ ಶ್ರೇಷ್ಠತಾಪಸಿಯಾಗಿಯೂ ವಿಶ್ವವಂದ್ಯನಾಗಿಯೂ ಇರುವನು ವೃದ್ಧರಾದ ನಾವು ಈ ಬ್ರಹ್ಮಚಾರಿಯನ್ನು ವಂದಿಸಿದರೆ ಮೂರ್ಖರು ನಿಂದಿಸುವರು ಆದರೂ ನಮಗ ಈತನು ವಂದ್ಯನಾಗಿರುವನು ಈತನು ಎಲ್ಲರಿಗೂ ಸನ್ಯಾಸವನ್ನು ಕೊಡಲು ಬುದ್ಧಿಯು ಸ್ಥಿರವಾದೀತು. ಲೋಕಾ

ನುಗ್ರಹಕಾರಣನಾದ ಈ ಗುರುವು ಶಕ್ತನಾಗಿರುವನು. ಇವರ ದರ್ಶನ ದಿಂದಲೇ ಪತಿತನೂ ಪುನೀತನಾಗುವನು ಆದುದರಿಂದ ಈ ಬಾಲಕನಿಗೆ ನಾವು ವಿಜ್ಞಾಪಿಸಿ ಸನ್ಯಾಸವನ್ನು ಹೊಂದಿ ಬಂದೇ ಮನಸ್ಸಿನಿಂದ ಪೂಜಿ ಸೋಣ ಎಂದು ಅನೇಕ ತಪಸ್ವಿಗಳು ಬಂದು ಗುರುವಿನಲ್ಲಿ ವಿಜ್ಞಾಪಿಸಿದರು. ಕಲಿಯುಗದಲ್ಲಿ ಜನರು ಸನ್ಯಾಸಿಗಳನ್ನು ನಿಂದಿಸುವರು. ಈ ಸನ್ಯಾಸ ಧರ್ಮವನ್ನು ಸ್ಥಾಪಿಸುವವರು ಈ ಭೂಮಿಯಲ್ಲಿ ಯಾರೂ ಕಾಣುವುದಿಲ್ಲ.

ಅಗ್ನಿಹೋತ್ರಂಗವಾಲಂಭಂ ಸನ್ಯಾಸಂಪಲಪೈತೃಕಂ |
ದೇವರಾಚಸುತೋತ್ಪತ್ತಿಃ ಕಲೌಪಂಚವಿವರ್ಜಯೇತ್||

ಅಗ್ನಿಹೋತ್ರವನ್ನೂ ಗೋಮೇಧಯಾಗವನ್ನೂ ಸನ್ಯಾಸವನ್ನೂ ಮಾಂಸಶ್ರಾದ್ಧವನ್ನೂ ಮೈದುನನಿಂದ ಪುತ್ರೋತ್ಪತ್ತಿಯನ್ನೂ ಕಲಿಯುಗ ದಲ್ಲಿ ಬಿಡಬೇಕೆಂದರ್ಥವು ಕಲಿಯುಗದಲ್ಲಿ ಇವು ನಿಷಿದ್ಧಗಳಾಗಿವೆ. ಆದರೆ ಸನ್ಯಾಸವು ವೇದಸಮ್ಮತವಾದ ಮಾರ್ಗವಾಗಿರುವುದು. ಪೂರ್ವದಲ್ಲಿ ಸಕ ಲರೂ ಸನ್ಯಾಸವನ್ನು ನಿಷಿದ್ಧಮಾಡಿರಲು ಶಂಕರಾಚಾರ್ಯರು ಅವತರಿಸಿ ಸನ್ಯಾಸ ಧರ್ಮವನ್ನು ಸ್ಥಾಪಿಸಿದರು. ಆದುದರಿಂದ ಸನ್ಯಾಸಧರ್ಮವು ಈ ವರೆಗೆ ನಡೆದು ಬಂದಿದೆ ಆದರೆ ಕಲಿಯ ಪ್ರಾಬಲ್ಯದಿಂದ ಮತ್ತೆ ನಾಶ ವಾಯಿತು. ಆದುದರಿಂದ ಈ ಸನ್ಯಾಸಾಶ್ರಮವನ್ನು ಸ್ಥಾಪಿಸಿ ದಯಾ ಮಯರಾದ ತಾವು ಸರ್ವರಿಗೂ ಉಪಕಾರಮಾಡಬೇಕೆಂದು ಪ್ರಾರ್ಥಿಸಿ ದರು ಇದನ್ನು ಕೇಳಿ ಗುರುವು ವೃದ್ಧರಾದ ಕೃಷ್ಣಸರಸ್ವತಿಗಳಿಂದ ಸನ್ಯಾಸಾಶ್ರಮವನ್ನು ತೆಗೆದುಕೊಂಡರು ಎಂದು ಸಿದ್ಧರು ಹೇಳಲು, ನಾಮಧಾರಕನು ಸ್ವಾಮಿ, ತ್ರಿಮೂರ್ತಿಗಳ ಅಂಶಭೂತರಾದ ಗುರುಗ ಳಿಗೂ ಬಬ್ಬ ಗುರುವು ಉಂಟಾದರೇ ? ಎಂದು ಕೇಳಿದನು.

ಆಗ ಸಿದ್ಧರು ಶಿಷ್ಯನೇ, ಕೇಳು—ಪೂರ್ವದಲ್ಲಿ ಶ್ರೀರಾಮನಿಗೆ ವಸಿ ಷ್ಠರು ಹೇಗೆ ಗುರುಗಳಾಗಿದ್ದರೋ, ಶ್ರೀ ಕೃಷ್ಣನಿಗೆ ಸಾಂದೀಪಿನಿಯು ಹೇಗೆ ಗುರವಾಗಿದ್ದನೋ ಹಾಗೆ ಶ್ರೀಪಾದರಿಗೆ ಕೃಷ್ಣಸರಸ್ವತಿಗಳು ಗುರು ಗಳಾದರು ಎಂದನು. ಆಗ ಶಿಷ್ಯನು ಸ್ವಾಮಿ, ಈ ಕೃಷ್ಣಸರಸ್ವತಿಗಳು ಪೂರ್ವದಲ್ಲಿ ಯಾರು ? ಯಾವ ಗುರುಪೀಠದವರು ? ಎಂಬುದನ್ನು ವಿಸ್ತಾರವಾಗಿ ನಿರೂಪಿಸಿರಿ ಎಂದು ವಿಜ್ಞಾಪಿಸಿದನು.

ಆಗ ಸಿದ್ಧರು ಹೇಳುವರು-ಮೊದಲು ಶಂಕರನೂ, ಬಳಿಕ ವಿಷ್ಣುವೂ ಆಮೇಲೆ ಬ್ರಹ್ಮನೂ ಗುರುಪೀಠಕ್ಕೆ ಆಧಾರರಾದರು ಬಳಿಕ ವಸಿಷ್ಠರೂ, ಬಳಿಕ ಪರಾಶರರೂ, ಬಳಿಕ ವ್ಯಾಸರೂ, ಬಳಿಕ ಶುಕರೂ, ಬಳಿಕ ಗೌಡ ಪಾದರೂ, ಬಳಿಕ ಗೋವಿಂದಾಚಾರ್ಯರೂ, ಬಳಿಕ ಶಂಕರಾಚಾರ್ಯರೂ, ಬಳಿಕ ವಿಶ್ವರೂಪವರ್ಯರೂ, ಬಳಿಕ ಜ್ಞಾನಬೋಧನಗಿರಿಯುವರೂ, ಬಳಿಕ ಸಿದ್ಧಗಿರಿಯುವರೂ, ಈಶ್ವರತೀರ್ಥರೂ, ನೃಸಿಂಹತೀರ್ಥರೂ, ವಿದ್ಯಾತೀರ್ಥರೂ, ಶಿವತೀರ್ಥರೂ, ಭಾರತೀತೀರ್ಥರೂ, ವಿದ್ಯಾರಣ್ಯ ಶ್ರೀಪಾದಮುನಿಯೂ, ವಿದ್ಯಾತೀರ್ಥರೂ, ಮಲಯಾನಂದ ದೇವತೀರ್ಥರೂ, ಸರಸ್ವತಿ ವೃದ್ಧರೂ ಸರಸ್ವತೀಯಾದವೇಂದ್ರರೂ ಆದರು ಈ ಯಾದ ವೇಂದ್ರರಶಿಷ್ಯರೇ ಕೃಷ್ಣಸರಸ್ವತಿಗಳು ಇವರೇ ಗುರುಪೀಠಸ್ಥರಾದರು. ಶ್ರೀ ನೃಸಿಂಹ ಸರಸ್ವತಿಗಳು ಇವರಿಂದ ಸನ್ಯಾಸವನ್ನು ಸ್ವೀಕರಿಸಿದರು. ಇವರು ಕಾಶೀಕ್ಷೇತ್ರದಲ್ಲಿರಲು ಅಲ್ಲಿದ್ದ ಯತಿಗಳೆಲ್ಲರೂ ಇವರನ್ನು ಸೇವಿ ಸುತ್ತಿದ್ದರು. ಗುರುಗಳು ಸಮಸ್ತ ಯತಿಗಳೊಡನೆ ಬದರಿಕಾಶ್ರಮಕ್ಕೆ ಹೊರಟರು. ಇವರು ಮೇರುಗಿರಿಯನ್ನು ಬಳಸಿಕೊಂಡು ನವಖಂಡಕ್ಷಿತಿ ಯಲ್ಲಿರುವ ತೀರ್ಥಗಳನ್ನು ನೋಡುತ್ತಾ ಭೂಪ್ರದಕ್ಷಿಣೆಮಾಡುತ್ತಾ ಗಂಗಾ ಸಾಗರ ಸಂಗಮಕ್ಕೆ ಬಂದರು. ಸರ್ವತೀರ್ಥಗಳನ್ನೂ ವಿಸ್ತಾರವಾಗಿ ಹೇಳಲು ಗ್ರಂಥ ವಿಸ್ತಾರವಾಗುವುದು ತೀರ್ಥಗಳ ಮಹಿಮೆಯನ್ನು ಹೇಳಲು ನಮಗೆ ಶಕ್ತಿಯಿಲ್ಲ. ಗುರುಗಳು ಗಂಗಾಸಾಗರ ಸಂಗಮದಿಂದ ಹೊರಟು ತಟಾಕಯಾತ್ರೆಗೈಯುತ್ತಾ ಪ್ರಯಾಗಕ್ಕೆ ಬಂದರು ಅಲ್ಲಿ ಮಾಧವನೆಂಬ ವಿಪ್ರನು ಗುರುದರ್ಶನಕ್ಕೆ ಬಂದನು ಗುರುಗಳು ಈತನಿಗೆ ಬ್ರಹ್ಮಜ್ಞಾನೋಪದೇಶಮಾಡಿ ತಮ್ಮ ಮುಖ್ಯಶಿಷ್ಯನನ್ನಾಗಿಟ್ಟುಕೊಂಡು ಸನ್ಯಾಸಧರ್ಮವನ್ನು ಬೋಧಿಸಿದರು. ಈ ರೀತಿಯಿಂದ ಗುರುಗಳಿಗೆ ಅನೇಕ ಶಿಷ್ಯರಾದರು. ಈ ಗುರುಚರಿತ್ರೆಯನ್ನು ಕೇಳಿದವರು ಮಹಾ ಜ್ಞಾನವನ್ನೂ ಚತುರ್ವಿಧ ಪುರುಷಾರ್ಥಗಳನ್ನೂ ಪಡೆಯುವರೆಂದು ಸಿದ್ಧರು ಹೇಳಿದರೆಂದು ಸರಸ್ವತೀಗಂಗಾಧರನು ಹೇಳಿದನು ಎಂಬಲ್ಲಿಗೆ ಗುರು ಚರಿತ್ರಾಮೃತದಲ್ಲಿ ಹನ್ನೆರಡನೇ ಅಧ್ಯಾಯವು ಮುಗಿದುದು.

|| ಶ್ರೀ ಗು ರು ದೇ ವ ಮ ||

# ೧೩ ನೆಯ ಅಧ್ಯಾಯ.

ಶ್ರೀ ಗಣೇಶಾಯನಮಃ ॥ ನಾಮಧಾರಕನು ಸಿದ್ಧಮುನಿವರ್ಯರೇ! ನೀವು ಸಂಸಾರತಾರಕರಾಗಿದ್ದೀರಿ ನಿಮ್ಮಿಂದ ನನಗೆ ಜ್ಞಾನಪ್ರಕಾಶ ಉಂಟಾಗಿ ಮನಸ್ಸಿಗೆ ಸುಖ ಉಂಟಾಯಿತು ಗುರುಚರಿತ್ರೆಯನ್ನು ಕೇಳ ಬೇಕೆಂಬಾಸೆಯು ನನಗುಂಟಾಗಿದೆ. ಈ ಚರಿತ್ರೆಯನ್ನು ಎಷ್ಟು ಕೇಳಿ ದರೂ ತೃಪ್ತಿಯುಂಟಾಗದು. ಹಸಿವೆಯಿಂದ ಪೀಡಿತನಾದವನು ಅರವ ಟಿಗೆಯನ್ನು ಹೊಗುವಂತೆಯೂ, ಕನಸಿನಲ್ಲಿ ಮಜ್ಜಿಗೆ ಕಾಣದವನು ಕ್ಷೀರ ದಿಂದ ತುಂಬಿದ ಪಾತ್ರೆಯನ್ನು ಹೊಂದಿದಂತೆಯೂ ಅಲ್ಪಜ್ಞಾನಿಯಾದ ನಾನು ಅವಿದ್ಯಾಮೋಹದಿಂದ ಸುತ್ತಲ್ಪಟ್ಟವನಾಗಿ ಕಷ್ಟಪಡುತ್ತಿದ್ದೆನು. ಅಜ್ಞಾನ ವೆಂಬ ಕತ್ತಲೆಗೆ ನೀವು ಸೂರ್ಯಸಮಾನರಾಗಿ ಶ್ರೀ ಗುರುಗಳ ನಿಜರೂಪ ವನ್ನು ಪ್ರಕಾಶಪಡಿಸಿದಿರಿ ನೀವು ಮಾಡಿದ ಈ ಉಪಕಾರಕ್ಕೆ ಕಲ್ಪ ವೃಕ್ಷ ಚಿಂತಾಮಣಿಗಳನ್ನಿತ್ತರೂ ಭೂಮಿಯೆಲ್ಲವನ್ನಿತ್ತರೂ ಸಾಲದು. ಇದಕ್ಕೆ ಯಾವ ಪ್ರತ್ಯುಪಕಾರ ಮಾಡಲಿ? ನಾನು ವಂಶಪಾರಂಪರ್ಯವಾಗಿ ನಿಮ್ಮ ಪಾದಗಳಲ್ಲಿ ಭಕ್ತಿಯುಳ್ಳವನಾಗಿರುವೆನು. ನೀವು ನಿರೂಪಿಸಿದ ಧರ್ಮವೆಂಬ ಸ್ವಾರ್ಥವು ಸಿದ್ಧಿಸಿ ನನ್ನ ಪರಮಾರ್ಥವಾದ ಗುರುಭಜನೆ ಯಲ್ಲಿ ಸದಾ ಲೀನನಾಗಿರುವೆನು. ಶ್ರೀ ಗುರುಗಳು ಪ್ರಯಾಗದಲ್ಲಿ ಮಾ ಧವ ಸರಸ್ವತಿಗಳಿಗೆ ಧರ್ಮೋಪದೇಶ ಮಾಡಿದರಷ್ಟೆ? ಮುಂದೇನಾಯಿತು ಎಂಬುದನ್ನು ವಿಸ್ತಾರವಾಗಿ ಹೇಳಬೇಕೆಂದನು ಈ ಶಿಷ್ಯನ ವಚನವನ್ನು ಕೇಳಿ, ಸಿದ್ಧರು ಸಂತೋಷದಿಂದ ಶಿಷ್ಯನ ತಲೆಯಲ್ಲಿ ಹಸ್ತವನ್ನಿಟ್ಟು ಶಿಷ್ಯನೇ, ನೀನು ಧನ್ಯನು. ಸಗುಣವಾದ ಗುರುಚರಣದಲ್ಲಿ ಭಕ್ತಿಯುಳ್ಳವನಾಗಿ ಸಂಸಾರಸಾಗರವನ್ನು ದಾಟುವವನಾದೆ. ಮುಂದೆ ಹೇಳುವುದನ್ನು ಕೇಳು.

ಶ್ರೀಗುರುಗಳು ಮಾಧವನಿಗೆ ಜ್ಞಾನೋಪದೇಶ ಮಾಡುತ್ತಾ ಇರಲು ಅನೇಕ ಮುನಿಗಳು ಬಂದು ಶಿಷ್ಯರಾದರು. ಈ ಶಿಷ್ಯರ ಹೆಸರನ್ನು ಹೇಳಲು ಗ್ರಂಥವಿಸ್ತಾರವಾದೀತು. ಇವರಲ್ಲಿ ಏಳು ಜನ ಶಿಷ್ಯರು ಯಾ ರೆಂದರೆ:—ಬಾಲಸರಸ್ವತಿ, ಕೃಷ್ಣಸರಸ್ವತಿ, ಉಪೇಂದ್ರಸರಸ್ವತಿ, ಸದಾ ನಂದಸರಸ್ವತಿ, ಜ್ಞಾನಜ್ಯೋತಿಸರಸ್ವತಿ, ಏಳನೇ ಸಿದ್ಧನಾಮಕನಾದ

ನಾಸು ಬಬ್ಬನು. ಮತ್ತು ಅನೇಕ ಶಿಷ್ಯರಿದ್ದರು. ಇವರಲ್ಲಿ ಬಬ್ಬರಿಗಿಂತ ಬಬ್ಬರು ಶ್ರೇಷ್ಠರಾಗಿದ್ದರು. ಶ್ರೀ ಗುರುಗಳು ಈ ಶಿಷ್ಯರೊಡನೆ ದಕ್ಷಿಣದೇಶಾಭಿಮುಖರಾಗಿ ತೀರ್ಥಯಾತ್ರೆ ಮಾಡುತ್ತಾ ಕರಂಜನಗರಿಗೆ ಬಂದರು. ಅಲ್ಲಿ ಗುರುಗಳ ತಾಯಿತಂದೆಗಳೂ, ನಾಲ್ವರು ತಮ್ಮಂದಿರೂ, ತಂಗಿಯೂ ಬಂದು ಗುರುಗಳನ್ನು ಕಂಡು ವಂದಿಸಿದರು. ಆ ನಗರದವರೆಲ್ಲರೂ ದರ್ಶನಕ್ಕೆ ಬಂದು ಗುರುಗಳನ್ನು ಪೂಜಿಸಿದರು. ಗುರುಗಳು ಮನೆಮನೆಗೂ ಹೋಗಿ ಭಿಕ್ಷೆಯನ್ನೂ ಪೂಜೆಯನ್ನೂ ಸ್ವೀಕರಿಸಿದರು.

ಎಲ್ಲರೂ ಗುರುಗಳು ವಿಷ್ಣುಸ್ವರೂಪರಾದ ಯತಿಗಳೆಂದೂ ಪರಮಪೂಜ್ಯರೆಂದೂ ನಿಶ್ಚಯ ಮಾಡಿದರು. ಇವರನ್ನು ಯಾರು ನರರೆನ್ನುವರೋ ಅವರು ನರಕಕ್ಕೆ ಹೋಗುವರು ತ್ರಿಮೂರ್ತಿಗಳೇ ಕಾರ್ಯಕಾರಣಕ್ಕಾಗಿ ನರವೇಷದಿಂದ ಅವತರಿಸಿದರು ಗುರುಗಳನ್ನು ತಾಯಿತಂದೆಗಳು ಪೂಜಿಸಿದರು. ಆಗ ಗುರುವು ಶ್ರೀಪಾದಯತಿಗಳಾದರು ಆಗ ತಾಯಿಗೆ ಪೂರ್ವಸ್ಮೃತಿ ಯುಂಟಾಯಿತು. ಆಗ ಆಕೆಯು ವಂದಿಸಿ ಸತ್ಯಸಂಕಲ್ಪನಾದ ಚಂದ್ರಮೌಳಿಯೆ! ನನ್ನ ಪ್ರದೋಷಪೂಜೆಯುಫಲವು ಸಿದ್ಧಿಸಿತು ಎನ್ನುತ್ತಾ ತನ್ನ ಪತಿಯನ್ನು ಕುರಿತು ತನ್ನ ಪೂರ್ವಜನ್ಮದ ಚರಿತ್ರೆಯನ್ನು ಹೇಳಿ ವಿಶ್ವವಂದ್ಯನಾದ ಪ್ರಬಲನಾದ ಪುತ್ರನನ್ನು ಪ್ರಾರ್ಥಿಸಿ ಪೂಜಿಸಿದುದರಿಂದ ಈಗ ಶ್ರೀಪಾದರು ಪುತ್ರರಾಗಿ ನಮ್ಮನ್ನು ಸಫಲರನ್ನಾಗಿ ಮಾಡಿದರು ಎಂದು ಬಿನ್ನವಿಸಿದಳು. ಈ ರೀತಿಯಿಂದ ಈ ತಾಯಿ ತಂದೆಗಳು ಗುರುವನ್ನು ವಂದಿಸಿ ಜಗನ್ನಾಥನಾದ ಯತಿರಾಯನೆ! ಈ ಸಂಸಾರದಿಂದ ದಾಟಿಸುವನಾಗೆಂದು ಬಿನ್ನವಿಸಿದರು.

ಆಗ ಗುರುವು ತಾಯಿ ತಂದೆಗಳನ್ನು ಸಮಾಧಾನಮಾಡಿ ಹೇಳಿದರು, ಏನೆಂದರೆ:—ಯಾವ ಪುತ್ರನು ಸನ್ಯಾಸಿಯಾಗುವನೋ ಅವನ ನಾಲ್ವತ್ತೆರಡು ಕುಲದವರೂ ಉದ್ಧೃತರಾಗುವರು ಮತ್ತು ಶಾಶ್ವತಬ್ರಹ್ಮಪದವಿಯನ್ನೂ ಹೊಂದುವರು. ಆ ವಂಶದವರಿಗೆ ಯಮಭೀತಿಯಿಲ್ಲ. ಈ ವಂಶದ ಹಿಂದಿನವರು ನರಕದಲ್ಲಿದ್ದರೂ ಅವರಿಗೂ ಶಾಶ್ವತ ಬ್ರಹ್ಮಲೋಕವಾಗುವುದು. ಆದುದರಿಂದ ನಾವು ಸನ್ಯಾಸಾಶ್ರಮವನ್ನು ಹೊಂದಿದೆವು. ನಿಮಗೆ ಯಮಭಯವಿಲ್ಲ, ಬ್ರಹ್ಮಪದವಿಯುಂಟಾಗುವುದು ಸತ್ಯವು. ನಿಮ್ಮ

ಮಕ್ಕಳು ಶತಾಯುಗಳಾಗಿ ಅಷ್ಟೈಶ್ವರ್ಯವನ್ನು ಹೊಂದುವರು. ನಿಮ್ಮ ಅಂತ್ಯಕಾಲದಲ್ಲಿ ಶ್ರೀ ಕಾಶೀಕ್ಷೇತ್ರವನ್ನು ಹೊಂದುವಿರಿ ಕಾಶೀಕ್ಷೇತ್ರವು ಮುಕ್ತಿಸ್ಥಾನವೆಂದು ಶಾಸ್ತ್ರಸಿದ್ಧವಾಗಿದೆ. ನೀವು ಸ್ವಲ್ಪವೂ ಚಿಂತಿಸದಿರಿ ಎಂದರು

ಗುರುವಿನ ತಂಗಿಯಾದ ರತ್ನಾಯಿಯು ಗುರುವನ್ನುವಂದಿಸಿ ಸ್ವಾಮಿ! ನಾನು ಈ ಸಂಸಾರಸಾಗರದಲ್ಲಿ ಮುಳುಗಿ ಮಾಯೆಯಿಂದ ಮೋಹಿತಳಾದೆನು ನಾನೂ ತಪಸ್ಸಿಗೆ ಹೋಗುವೆನೆಂದಳು

ಆಗ ಗುರುವು ಅಮ್ಮಾ ರತ್ನಾಯಿಯೇ, ಸ್ತ್ರೀಯರು ಪತಿಸೇವೆ ಮಾಡಿದರೆ ಮೋಕ್ಷಹೊಂದುವರು. ಬೇರೆ ವೃತ್ತಿಯನ್ನು ಹೊಂದಬಾರದು. ಪತಿಯೇ ಶಿವನಿಗೆ ಸಮಾನನು ಪತಿಯ ಸೇವೆಯಿಂದಲೇ ನಿನಗೆ ಗತಿಯಾಗುವುದು ಎಂದರು

ಆಗ ರತ್ನಾಯಿಯು ಸ್ವಾಮಿ, ನೀವು ಭೂತಭವಿಷ್ಯದ್ವರ್ತಮಾನಗಳನ್ನರಿತಿರುವಿರಿ ನನ್ನ ಮುಂದಿನ ಗತಿಯೇನು ? ಎಂದು ಕೇಳಿದಳು.

ಆಗ ಗುರುವು ರತ್ನಾಯಿಯೇ, ನೀನು ಈಗ ತಪಸ್ಸು ಮಾಡಲು ಇಚ್ಛಿಸುತ್ತೀಯೆ. ನೀನು ಪೂರ್ವಜನ್ಮದ ಕರ್ಮಫಲವನ್ನು ಅನುಭವಿಸಬೇಕು. ನೀನು ಪೂರ್ವಜನ್ಮದಲ್ಲಿ ಒಂದು ಗೋವನ್ನು ಪಾದದಿಂದ ಪ್ರಹರಿಸಿದೆ ಮತ್ತು ನೆರೆಹೊರೆಯ ದಂಪತಿಗಳಿಗೆ ವಿರೋಧವನ್ನುಂಟುಮಾಡಿದೆ. ಈ ದೋಷಗಳಿಂದ ನಿನಗೆ ಈಗ ಅನೇಕ ಬಾಧೆಗಳಾಗುವುವು. ಸರ್ವಾಂಗದಲ್ಲಿಯೂ ಕುಷ್ಠರೋಗ ಉಂಟಾದೀತು. ದಂಪತಿಗಳಿಗೆ ವಿರೋಧವನ್ನುಂಟುಮಾಡಿದೆಯಾದುದರಿಂದ ನಿನ್ನ ಪತಿಯು ತಾಪಸಿಯಾಗುವನು. ಇವನು ನಿನ್ನನ್ನು ಬಿಟ್ಟುಹೋಗುವನು. ಇದೇ ನಿನ್ನ ಭವಿಷ್ಯವೆಂದರು. ಇದನ್ನು ಕೇಳಿ ರತ್ನಾಯಿಯು ಅತಿಯಾಗಿ ದುಃಖಿಸಿ ಶ್ರೀಗುರುಚರಣದಲ್ಲಿ ಹೊರಳಾಡಿ ಬೇಗ ನನ್ನನ್ನು ರಕ್ಷಿಸು ಎಂದು ಗೋಳಾಡಿದಳು. ಆಗ ಶ್ರೀ ಗುರುವು ಬಾಲೆಯೇ ಕೇಳು, ನೀನು ಸ್ವಲ್ಪಕಾಲ ಸುಖವಾಗಿರು. ನಿನ್ನ ದೇಹವು ಕುಷ್ಟರೋಗಪೀಡಿತವಾದೀತು. ಬಳಿಕ ಶುದ್ಧ ದೇಹ ಉಂಟಾಗಿ ನಿನಗೆ ಗತಿಯಾದೀತು. ಮುಂದೆ ನಿನಗೆ ನನ್ನ ದರ್ಶನವಾಗುವುದು. ಆಗ

ನಿನ್ನ ಪಾಪವು ಹೋಗುವುದು ಭೀಮಾತೀರದಲ್ಲಿ ಪಾಪ ವಿನಾಶತೀರ್ಥ ವಿದೆ. ನೀನು ಅಲ್ಲಿಗೆ ಬಾ ಅಲ್ಲಿ ಅಮರಜಾಸಂಗಮದಲ್ಲಿರುವ ಗಂಧರ್ವಪುರ ವೆಂಬ ತೀರ್ಥವು ಪ್ರಸಿದ್ಧಿಯಾಗಿರುವುದು ಎಂದು ಹೇಳಿ ದಕ್ಷಿಣದಲ್ಲಿರುವ ತ್ರ್ಯಂಬಕ ಕ್ಷೇತ್ರಕ್ಕೆ ಬಂದರು ಅಲ್ಲಿ ಗೌತಮಿನದಿಯು ಉದ್ಭವಿಸಿದೆ ಶಿಷ್ಯರೊಡನೆ ಗುರುವು ನಾಸಿಕಕ್ಷೇತ್ರಕ್ಕೆ ಬಂದರು ಈ ತೀರ್ಥವು ಪುರಾಣ ಪ್ರಸಿದ್ಧವಾಗಿರುವುದು ಈ ತೀರ್ಥ ಮಹಿಮೆಯನ್ನು ಕೇಳು ಬ್ರಹ್ಮರ್ಷಿ ಯಾದ ಗೌತಮನು ತನ್ನ ಪರ್ಣಶಾಲೆಯ ಹತ್ತಿರದಲ್ಲಿ ಭತ್ತವನ್ನು ಬಿತ್ತಿ ಪ್ರತಿವರ್ಷದಲ್ಲಿಯೂ ಬೆಳೆಯುತ್ತಿದ್ದನು ಅನೇಕ ಮುನಿಗಳು ಸೇರಿ ಆಲೋಚಿಸಿ ಈಶ್ವರಭಕ್ತರಾದ ಗೌತಮರನ್ನು ಕುರಿತು ಸ್ವಾಮಿ, ಶಂಕರನು ಗಂಗೆಯನ್ನು ಜಡೆಯಲ್ಲಿ ಧರಿಸಿರುವನು. ಈ ಗಂಗೆಯನ್ನಿಲ್ಲಿಗೆ ತಂದರೆ ನಮ್ಮೆಲ್ಲರಿಗೂ ಪುಣ್ಯವು ಬರುವುದು ಎಂದು ಬಿನ್ನವಿಸಿದರು.

> ಯಾಗತಿರ್ಯೋಗಯುಕ್ತಾನಾಂ ಮುನೀನಾಂ ಊರ್ಧ್ವರೇತಸಾಂ |
> ಸಾಗರೆ ಸ್ಸರ್ವಭೂತಾನಾಂ ಗೌತಮೀತೀರವಾಸಿನಾಂ ||

ಎಂದರೆ ಜಿತೇಂದ್ರಿಯರಾದ ಯೋಗಿಗಳಿಗೆ ಯಾವ ಗತಿಯುಂಟಾಗುವುದೋ ಆ ಗತಿಯು ಈ ಗೌತಮೀತೀರದಲ್ಲಿ ವಾಸಿಸುವ ಜಂತುಗಳಿಗುಂಟಾಗು ವುದು ಎಂದಾಲೋಚಿಸಿ ಋಷಿಗಳೆಲ್ಲರೂ ಸೇರಿ ಮಾಯೆಯಿಂದ ಒಂದು ಹಸುವನ್ನೂ ಒಂದು ಕರುವನ್ನೂ ನಿರ್ಮಿಸಿ ಗೌತಮರ ಗದ್ದೆಗೆ ಕಳುಹಿಸಿ ದರು. ನಿತ್ಯಕರ್ಮಾನುಷ್ಠಾನದಲ್ಲಿರುವ ಈ ಗೌತಮರು ಈ ಹಸುವನ್ನೂ ಕರುವನ್ನೂ ನೋಡಿ ಅದನ್ನೋಡಿಸುವುದಕ್ಕಾಗಿ ದರ್ಭೆಯ ಹುಲ್ಲಿನ ಪವಿತ್ರ ವನ್ನು ಮಂತ್ರಿಸಿ ಬಿಟ್ಟರು. ಆಗ ಆ ಪವಿತ್ರವು ವಜ್ರಾಸ್ತ್ರವಾಗಿ ಈ ಹಸು ವನ್ನು ಕೊಂದಿತು. ಗೌತಮರಿಗೆ ಗೋಹತ್ಯಾದೋಷವು ಬಂದಿತು. ಇದ ನ್ನು ನೋಡಿ ಋಷಿಗಳೆಲ್ಲರೂ ಈ ಗೋಹತ್ಯಾ ದೋಷಕ್ಕೆ ಗಂಗೆಯನ್ನು ಭೂಮಿಗೆ ತೆಗೆದುಕೊಂಡು ಬರಬೇಕು; ಇದೇಪ್ರಾಯಶ್ಚಿತ್ತವು ಎಂದು ಗೌತಮರಿಗೆ ಹೇಳಿದರು ಆಗ ಗೌತಮರು ಶಂಕರನನ್ನು ಕುರಿತು ಸಾವಿ ವರ್ಷಗಳು ತಪಸ್ಸು ಮಾಡಿದರು. ಬಳಿಕ ಶಂಕರನು ಪ್ರತ್ಯಕ್ಷನಾಗಿ ವ ವನ್ನು ಬೇಡೆನ್ನಲು, ಗೌತಮರು ಸ್ವಾಮಿ! ಈ ಭೂಮಿಗೆ ಜಟಾಜ

ವಸ್ತುಗಳನ್ನು ರಕ್ಷಿಸುವುದಕ್ಕಾಗಿ ಗಂಗೆಯನ್ನು ಕಳುಹಿಸಬೇಕೆಂದು ಬೇಡಿಕೊಂಡರು. ಆಗ ಪರಶಿವನು ನರರ ಪಾಪಪರಿಹಾರಕ್ಕಾಗಿ ಗಂಗೆಯನ್ನು ಕಳುಹಿಸಿದನು ಈ ಭಾಗೀರಥಿಯನ್ನು ವರ್ಣಿಸಲು ಯಾರು ಶಕ್ತರು? ಗೌತಮರು ಈ ನದಿಯಲ್ಲಿ ಸ್ನಾನ ಮಾಡಿ ಗೋಹತ್ಯಾದೋಷವನ್ನು ಕಳೆದುಕೊಂಡರು. ಆದುದರಿಂದಲೇ ಶ್ರೀ ಗುರುವು ಈ ಗೌತಮಿ ತಟಾಕ ಯಾತ್ರೆಗೈಯುತ್ತಾ ಲೋಕಾನುಗ್ರಹಕ್ಕಾಗಿ ತಿರುಗುತ್ತಿದ್ದರು.

ಹೀಗೆ ಯಾತ್ರೆ ಮಾಡುತ್ತಿರುವಾಗ ಮಾಧವಾರಣ್ಯನೆಂಬ ಮುನಿಯು ಸದಾ ಶ್ರೀ ನೃಸಿಂಹಮೂರ್ತಿಯನ್ನು ಧ್ಯಾನಿಸಿ ಮಾನಸಪೂಜೆ ಮಾಡುತ್ತಿದ್ದವನಾಗಿ ಇಲ್ಲಿಗೆ ಬಂದು ಶ್ರೀಗುರುವನ್ನು ನೋಡಿ ವಿಸ್ಮಿತನಾಗಿ ಭಕ್ತಿಯಿಂದ ಈ ರೀತಿಯಿಂದ ಸ್ತುತಿಸಿದನು—

ಯದ್ದಿವ್ಯಪಾದದ್ವಯಮೇವಲಕ್ಷ್ಮಿ ತಂದೇವೈರ್ನದೃಷ್ಟಂಕದಿದಂಸಮೀಪೆ |
ಯದುತ್ತರೇತೀರನಿವಾಸಮಾನಂ ಲಕ್ಷ್ಮೀಸಮೀಪೆ ನಿವಸದ್ವಿನೀತಂ ||

ಯಾವ ಈ ನದಿಯ ಉತ್ತರತೀರದಲ್ಲಿ ಲಕ್ಷ್ಮಿದೇವಿಯಿಂದ ಕೂಡಿದ ಶ್ರೀ ನೃಸಿಂಹನ ಪಾದಗಳನ್ನು ನಾನು ಕಂಡೆನೋ ಇದನ್ನು ದೇವತೆಗಳೂ ಕೂಡ ನೋಡಲಿಲ್ಲ ಎಂದು ಸ್ತುತಿಸಿದನು ಆಗ ಶ್ರೀಗುರುವು ಆನಂದದಿಂದ

ಅತ್ಯಂತಮಾರ್ಗಸ್ಥಿತಿಮಾರ್ಗರೂಪಮತ್ಯಂತಯೋಗೈರಧಿಗಮ್ಯತತ್ತ್ವಂ |
ಮಾರ್ಗಪ್ರದಂಮಾರ್ಗವಿಚಿನ್ವತೇನೋಮಾರ್ಗೋದಯಂ ಮಾಧವದರ್ಶನಂಚ ||

ಎಂದರೆ ಶ್ರೇಷ್ಠವಾದ ಯೋಗಮಾರ್ಗದಿಂದ ತಿಳಿಯತಕ್ಕ ಶ್ರೇಷ್ಠವಾದ ಮಾರ್ಗವುಳ್ಳ ದಿವ್ಯಮಾರ್ಗವನ್ನು ಕೊಡುವುದರಿಂದ ಮಾರ್ಗವನ್ನು (ಮೋಕ್ಷವನ್ನು) ಹುಡುಕುವ ನನಗೆ ಮಾರ್ಗೋದಯವೂ (ತತ್ತ್ವಮಾರ್ಗೋದಯವೂ) ಮಾಧವದರ್ಶನವೂ ಉಂಟಾಯಿತು ಎನ್ನುತ್ತಾ ಈ ಮಾಧವನಿಗೆ ನಿಜರೂಪವನ್ನು ತೋರಿಸಿದರು ಆಗ ಈ ಮಾಧವನು ಹರ್ಷಿತನಾಗಿ ಅಂಜಲಿಬದ್ಧನಾಗಿ ನಾನಾವಿಧದಿಂದ ಸ್ತುತಿಸಿದನು. ಹೇಗೆಂದರೆ —

ಜಗದ್ಗುರುವೇ ! ತ್ರಿಮೂರ್ತಿಸ್ವರೂಪನೇ ! ಪರಮಪುರುಷನೇ !

ಜಗನ್ನಾಥನೆ! ವಿಶ್ವತಾರಕನೆ! ನಿಮ್ಮ ಪಾದಸಂದರ್ಶನವನ್ನಿತ್ತು ನನ್ನನ್ನು ಕೃತಾರ್ಥರನ್ನಾಗಿ ಮಾಡಿದಿರಿ ಎಂದು ವಂದಿಸಿದನು.

ಆಗ ಗುರುವು ಎಲೈ ಮಾಧವನೇ, ನಿನ್ನ ಮಂತ್ರವು ಫಲಿಸಿತು. ನಿನಗೆ ಬ್ರಹ್ಮಲೋಕದಲ್ಲಿ ಸದ್ಗತಿಯುಂಟಾಗುವುದು. ನೀನು ನಿತ್ಯವೂ ಶ್ರೀ ನೃಸಿಂಹ ಮಾನಸಪೂಜೆಯನ್ನು ಮಾಡುತ್ತೀಯೆ ನಿನಗೆ ಶ್ರೀ ನೃಸಿಂಹನು ಪ್ರತ್ಯಕ್ಷನಾಗುವನು. ಸಂದೇಹಿಸದಿರು ಎಂದು ಹೇಳಿ ಅಲ್ಲಿಂದ ಹೊರಟು ಗಂಗಾತೀರದಲ್ಲಿರುವ ವ್ಯಾಸರ ಬ್ರಹ್ಮೇಶ್ವರಕ್ಷೇತ್ರಕ್ಕೆ ಬಂದರು ಇಲ್ಲಿ ಶಿಷ್ಯರೊಡನೆ ಸ್ನಾನಮಾಡುತ್ತಿರಲು, ಹೊಟ್ಟೆಯನೋವಿನಿಂದ ಕಷ್ಟಪಡುತ್ತಿದ್ದ ಬ್ರಾಹ್ಮಣನೊಬ್ಬನು ಅಲ್ಲಿಗೆ ಬಂದು ಗಂಗೆಯಲ್ಲಿ ಬಿದ್ದು ಪ್ರಾಣವನ್ನು ಬಿಡಬೇಕೆಂದು ಯೋಚಿಸುತ್ತಿದ್ದನು. ಇವನಿಗೆ ನಿತ್ಯವೂ ಹೊಟ್ಟೆನೋವಿನ ವ್ಯಥೆಯು ಬಹಳವಾಗಿ, ಊಟಮಾಡಿದರೆ ಪ್ರಾಣಾಂತಿಕವಾದ ದುಃಖವುಂಟಾಗುತ್ತಿತ್ತು. ಆದ ದರಿಂದಾತನು ಉಪವಾಸಮಾಡುತ್ತಿದ್ದನು ಈ ರೀತಿಯಿಂದ ಅನ್ನವೈರವುಳ್ಳವನಾಗಿ ಸದಾ ಫಲಾಹಾರ ಮಾಡುತ್ತಿದ್ದನು. ಈತನು ಪಕ್ಷಕ್ಕೊಮ್ಮೆ ಊಟಮಾಡಿದರೂ ಉದರ ರೋಗ ಪೀಡಿತನಾಗಿದ್ದನು ಹಿಂದಿನ ದಿನ ಮಹಾನವಮಿಯ ಹಬ್ಬದದಿನ ಬಂದು ತಿಂಗಳಿಂದಲೂ ಉಪವಾಸದಿಂದ ಕೃಶನಾದವನಾಗಿ ಹಬ್ಬದೂಟವನ್ನುಂಡು ಹೊಟ್ಟೆನೋವಿನಿಂದ ದುಃಖಿಸುತ್ತಾ ಗಂಗಾತೀರಕ್ಕೆ ಬಂದು ಬಿದ್ದಾಡಿ ಪ್ರಾಣಬಿಡಬೇಕೆಂದಿದ್ದನು ಅನ್ನವೇ ಪ್ರಾಣವೂ ಜೀವನವೂ ಆಗಿದೆ ಅನ್ನವಿಲ್ಲದೆ ಯಾರು ಇದ್ದಾರು. ನನಗೆ ಅನ್ನವೇ ವೈರವಾಗಿರುವುದರಿಂದ ಇನ್ನು ಜೀವಿಸಲಾರೆನು ಎಂದು ಹೊಟ್ಟೆಗೊಂದು ಕಲ್ಲನ್ನು ಕಟ್ಟಿಕೊಂಡು ಪ್ರಾಣಬಿಡುವೆನೆಂದು ನೀರನ್ನು ಹೊಕ್ಕನು ಮನದಲ್ಲಿ ಪರಶಿವನನ್ನು ನೆನೆದು ಶಂಕರನೇ! ನಾನು ಭೂಭಾರಕನು ಅನ್ನದಾನವನ್ನು ಯಾವ ಜನ್ಮದಲ್ಲಿಯೂ ಮಾಡಲಿಲ್ಲ ಪೂರ್ವದಲ್ಲಿ ಬ್ರಾಹ್ಮಣರ ಗ್ರಾಮಗಳನ್ನಪಹರಿಸಿದೆನು ಕಪಿಲಾಧೇನುವನ್ನು ಕೊಂದೆನು. ಶಿವಪೂಜೆಯನ್ನು ಪೂರ್ತಿಯಾಗಿ ಮಾಡಲಿಲ್ಲ. ಗುರುವನ್ನು ನಿಂದಿಸಿದೆನು ಆದುದರಿಂದ ಈ ಕಷ್ಟವುಂಟಾಗಿದೆ ಪಶುಗಳನ್ನು ಕೊಂದೆನು. ಕಾಡಿಗೆ ಬೆಂಕಿಯನ್ನು ಹಾಕಿದೆನು. ತಾಯಿ ತಂದೆಗಳನ್ನು ಬೇರೆಯಾಗಿಟ್ಟು ಸತಿಯೊಡನೆ ಬೇರೆ

ಯಾಗಿದ್ದೆನು. ಅಥವಾ ಪೂರ್ವಗಲ್ಲಿ ವಿಪ್ರರನ್ನು ಧಿಕ್ಕರಿಸಿ ವೈಶ್ವದೇವ
ಮಾಡಲಿಲ್ಲ ಅತಿಥಿಗೆ ಅನ್ನವನ್ನು ಹಾಕಲಿಲ್ಲ ತಾಯಿ ತಂದೆಗಳನ್ನು
ಬಿಟ್ಟು ಸುಖದಿಂದ ಬದುಕಿದೆನು ಈ ಪೂರ್ವ ಕರ್ಮಗಳಿಂದ ಈಗ ಕಷ್ಟ
ಪಡುವೆನು ಎಂದೀಪರಿ ದುಃಖಿಸುತ್ತಾ ಗಂಗೆಯನ್ನು ಹೊಗುತ್ತಿದ್ದನು.
ಇವನನ್ನು ನೋಡಿ ಗುರುಗಳು ಶಿಷ್ಯರೇ ಈ ವಿಪ್ರನು ಪ್ರಾಣಬಿಡುತ್ತಿರು
ವನು ಈತನನ್ನು ಕರೆದು ತನ್ನಿರಿ ಆತ್ಮಹತ್ಯೆಯು ಮಹಾಪಾಪವು.
ಏಕೆ ಪ್ರಾಣವನ್ನು ಬಿಡಲಿಚ್ಛಿಸುವನು ? ಎಂದು ಹೇಳಿಕಳುಹಿಸಿದರು. ಶಿಷ್ಯ
ನೊಬ್ಬನು ಆ ವಿಪ್ರನನ್ನು ಗುರುಗಳ ಹತ್ತಿರಕ್ಕೆ ಕರೆತಂದನು ಅನಾಥ
ರಿಗೆ ಕಲ್ಪತರುವೂ, ದುಃಖಿಗಳಿಗೆ ದಯಾನಿಧಿಯೂ ಆದ ಗುರುವು ಆ ವಿಪ್ರನಂ
ಕುರಿತು ಎಲೈ ವಿಪ್ರನೇ ಪ್ರಾಣವನ್ನು ಬಿಡಲು ಏಕೆ ಬಯಸುತ್ತೀಯೆ.
ಆತ್ಮಹತ್ಯೆಯು ಮಹಾದೋಷವು ನಿನಗೇನಾಗಿದೆ ಹೇಳೆಂದು ಕೇಳಿದರು.

ಆಗ ಆತನು ಯತಿರಾಜರೇ! ನೀವು ಇದನ್ನು ಕೇಳಿ ಏನು ಮಾಡು
ವಿರಿ ? ನಾನು ಭೂಭಾರಕನಾಗಿದ್ದೇನೆ ಮಾಸಕ್ಕೋ ಪಕ್ಷಕ್ಕೋ ಒಮ್ಮೆ
ಊಟಮಾಡುತ್ತಾ ಕಷ್ಟಪಡುತ್ತಾ ಇರುವೆನು ಇದನ್ನು ಸಹಿಲಾರದೆ
ಪ್ರಾಣವನ್ನು ಬಿಡುವೆನು ನನಗೆ ಅನ್ನವೇ ವೈರಿಯಾಗಿದೆ. ಈ ದೇಹವು
ಅನ್ನಮಯವು ಅನ್ನವಿಲ್ಲದೆ ಬದುಕುವುದುಹೇಗೆ ? ಎಂದು ಬಿನ್ನವಿಸಿದನು.
ಬಳಿಕ ಗುರುವು ವಿಪ್ರನೇ, ನಿನ್ನ ರೋಗಕ್ಕೆ ಔಷಧವು ನಮ್ಮಲ್ಲಿದೆ ನಿನ್ನ
ವ್ಯಥೆಯು ಹೋದೀತು, ಹೆದರದಿರು ಹೊಟ್ಟೆತುಂಬಾ ಊಟಮಾಡು
ಎಂದರು ಆಗ ಆ ವಿಪ್ರನು ಸ್ಥಿರಚಿತ್ತನಾಗಿ ಗುರುಚರಣಗಳಲ್ಲಿ ತಲೆ
ಯನ್ನಿಟ್ಟು ವಂದಿಸಿದನು ಇಷ್ಟರಲ್ಲಿಯೇ ಆ ಗ್ರಾಮದ ಅಧಿಕಾರಿಯಾದ
ಒಬ್ಬ ವಿಪ್ರನು ಗಂಗಾಸ್ನಾನಕ್ಕೆ ಬಂದನು ಗುರುವನ್ನು ನೋಡಿ ಆತನು
ವಂದಿಸಿದನು ಗುರುವು ಆತನನ್ನು ಕುರಿತು ಎಲೈ ನೀನು ಯಾರು ?
ಯಾವ ಊರು ? ನಿನ್ನ ಹೆಸರೇನು ? ಎಂದು ಕೇಳಿದರು. ಆಗ ಆತನು
ಸ್ವಾಮಿ, ನಾನು ಕೌಂಡಿನ್ಯಗೋತ್ರದ ಆಪಸ್ತಂಭಶಾಖೆಯ ಸಾಯಂದೇವ
ನೆಂಬುವನು ನನ್ನ ವಾಸಸ್ಥಳವು ಕಾಂಚೀನಗರವು ನಾನು ಅಲ್ಲಿ
ಉದರನಿರ್ವಾಹಕ್ಕಾಗಿ ಒಬ್ಬ ಯವನನ ಸೇವೆಯಲ್ಲಿರುವೆನು. ಈ
ಗ್ರಾಮಕ್ಕೆ ಅಧಿಕಾರಿಯಾಗಿ ಬಂದು ಒಂದು ವರ್ಷವಾಯಿತು. ತಮ್ಮ

ದರ್ಶನ ಮಾತ್ರದಿಂದಲೇ ಧನ್ಯನಾದೆನು. ತಾವು ಈ ಸಂಸಾರವನ್ನು ದಾಟಿಸುವವರಾಗಿದ್ದೀರಿ. ತಮ್ಮ ದರ್ಶನದಿಂದ ಕೃತಾರ್ಥನಾದೆನು. ಈಗ ಜನ್ಮಾಂತರ ದೋಷಗಳೆಲ್ಲವೂ ಹೋದುವು. ತಮ್ಮ ಅನುಗ್ರಹವುಂಟಾದರೆ ಜನರು ಸಂಸಾರದಿಂದ ಮುಕ್ತರಾಗುವರು. ಪ್ರಯತ್ನವಿಲ್ಲದೆ ತಮ್ಮ ದರ್ಶನವಾಯಿತು.

> ಗಂಗಾಪಾಪಂಶಶೀತಾಪಂ ದೈನ್ಯಂಕಲ್ಪತರುಸ್ತಥಾ |
> ಪಾಪಂತಾಪಂಚದೈನ್ಯಂಚ ಸದ್ಯಃಸಾಧುಸಮಾಗಮಃ ||

ಗಂಗಾಸ್ನಾನದಿಂದ ಪಾಪವೂ ಚಂದ್ರನಿಂದ ಸಂತಾಪವೂ ಕಲ್ಪವೃಕ್ಷದಿಂದ ಬಡತನವೂ ಹೋಗುವುದು. ಸಾಧುದರ್ಶನವಾದರೋ ಪಾಪವನ್ನೂ ತಾಪವನ್ನೂ ದಾರಿದ್ರ್ಯವನ್ನೂ ನಾಶಮಾಡಿ ಧನ್ಯನನ್ನಾಗಿ ಮಾಡುವುದು ಎಂದು ವಂದಿಸಿದನು. ಆಗ ಗುರುವು ಸಾಯಂದೇವನನ್ನು ಕುರಿತು ವಿಪ್ರನೇ, ಈ ಬ್ರಾಹ್ಮಣನು ಹೊಟ್ಟೆನೋವಿನಿಂದ ಪ್ರಾಣಬಿಡುತ್ತಿದ್ದನು. ಇವನ ರೋಗಕ್ಕೆ ಉಪಶಮನವಾಗಿ ಒಂದು ಔಷಧವನ್ನು ಹೇಳುವೆವು. ನೀನು ಇವನನ್ನು ನಿನ್ನ ಮನೆಗೆ ಕರೆದೊಯ್ದು ಈತನಿಗೆ ಮೃಷ್ಟಾನ್ನ ಭೋಜನವನ್ನು ಮಾಡಿಸು. ಇವನು ಊಟಮಾಡಲು ಇವನ ಕಾಟವು ಹಿಂಗಿ ರೋಗನಿವಾರಣೆಯಾಗುವುದು. ಇವನು ಅತಿಯಾಗಿ ಹಸಿದಿದ್ದಾನೆಂದು ನಿರೂಪಿಸಿದರು. ಈ ಗುರುವಚನವನ್ನು ಕೇಳಿ ಆ ವಿಪ್ರನು ಸ್ವಾಮಿ, ನಾನು ನಿನ್ನೆಯದಿನ ಊಟಮಾಡಿದುದರಿಂದಲೇ ನನಗೆ ಉದರರೋಗವು ಬಲವಾಗಿ ಕಷ್ಟಪಡಲಾರದೆ ಸಾಯಲು ಯತ್ನಿಸಿದೆನು. ಈಗ ನನಗೆ ಅನ್ನವನ್ನು ಹಾಕಿಸಿದರೆ ತಮಗೆ ಬ್ರಹ್ಮಹತ್ಯಾದೋಷವುಂಟಾದೀತು ಎಂದು ಬಿನ್ನವಿಸಿದನು. ಆಗ ಗುರುವು ಸಾಯಂದೇವನೇ, ಈತನಿಗೆ ಔಷಧಿಯನ್ನುಕೊಡುವೆನು. ಈತನನ್ನುಕರೆದೊಯ್ದು ಹೋಳಿಗೆಯನ್ನೂ ಮಾಷಾನ್ನ (ಉದ್ದಿನಬೇಳೆಯ ಅನ್ನ)ವನ್ನೂ ಹಾಲುಪಾಯಸವನ್ನೂ ಊಟಮಾಡಿಸು, ಹೋಗು ಎಂದು ಅಪ್ಪಣೆಯಿತ್ತರು.

ಆಗ ಸಾಯಂದೇವನು ಅದಂತೆಯೇ ಮಾಡುವೆನೆಂದು ವಂದಿಸಿ ಸ್ವಾಮಿ, ತಾವು ನನ್ನಮನೆಗೆ ಭಿಕ್ಷೆಗೆ ದಯಮಾಡಬೇಕು ಎಂದು ವಿಜ್ಞಾಪಿ

ಸಿದನು. ಆಗ ಗುರುಗಳು ಭಿಕ್ಷೆಗೆ ಬರುವುದಾಗಿ ಒಪ್ಪಿದರು, ಮತ್ತು ಶಿಷ್ಯರೊಡನೆ ಆತನ ಮನೆಗೆ ಹೋದರು.

ಸಾಯಂದೇವನ ಪತ್ನಿಯಾದ ಜಾಬಾಯಿಯು ಶ್ರೀಗುರುವನ್ನು ಷೋಡಶೋಪಚಾರಗಳಿಂದರ್ಚಿಸಿದಳು. ರಕ್ತವರ್ಣವುಳ್ಳ ಮಂಡಲವನ್ನು ಅದರಲ್ಲಿ ಅಷ್ಟದಳಪದ್ಮವನ್ನೂ ಪಂಚವರ್ಣದ ರಂಗವಲ್ಲಿಯನ್ನೂ ಬರೆದಳು ಗುರುಗಳಿಗೆ ಚಿತ್ರಾಸನವನ್ನೂ, ಶಿಷ್ಯರಿಗೆ ಆಸನವನ್ನೂ ಕೊಟ್ಟು ಸಾಯಂದೇವನು ಗುರುಚರಣಗಳನ್ನೂ ಆ ಮಂಡಲವನ್ನೂ ಗಂಧಪುಷ್ಪಾದಿಗಳಿಂದರ್ಚಿಸಿ, ರುದ್ರಸೂಕ್ತವನ್ನು ಹೇಳಿ ಪೂಜೆಮಾಡಿ ಗುರುಚರಣತೀರ್ಥವನ್ನು ಧರಿಸಿ ಆ ತೀರ್ಥವನ್ನು ಪ್ರೋಕ್ಷಿಸಿದನು ಗೀತವಾದ್ಯಾದಿಗಳಿಂದಲೂ ಆನಂದದಿಂದಲೂ ನೀರಾಜನ (ಆರತಿ) ವನ್ನೆತ್ತಿದನು. ಈ ರೀತಿಯಿಂದ ಗುರುವನ್ನು ಪೂಜಿಸಿದನು ಬಳಿಕ ಪುಷ್ಪಾಂಜಲಿಯನ್ನರ್ಪಿಸಿ ಪ್ರೀತಿಯಿಂದ ನಮಸ್ಕರಿಸಿದನು. ಈತನ ಕಾಂತೆಯೂ ಗಾನಮಾಡಿ ವಂದಿಸಿದಳು. ಈ ರೀತಿಯಾಗಿ ದಂಪತಿಗಳು ಗುರುಗಳನ್ನು ಪೂಜಿಸಿದರು ಶಿಷ್ಯರನ್ನೂ ಹಾಗೆಯೇ ವಂದಿಸಿದರು ಗುರುಗಳು ಆನಂದದಿಂದ ಸಾಯಂದೇವನೇ, ನಿನಗೆ ಸಂತತಿಯಾಗುವುದು ನಿನ್ನ ವಂಶದವರೆಲ್ಲರಿಗೂ ಗುರುಭಕ್ತಿಯುಂಟಾದೀತು. ಗುರುಭಕ್ತಿಯುಳ್ಳ ನೀನು ಪುತ್ರ ಪೌತ್ರಾದಿಗಳಿಂದ ಕೂಡಿ ಏಳಿಗೆಯನ್ನು ಹೊಂದುವಿ ಎಂದು ವರವನ್ನಿತ್ತರು.

ಶ್ರೀ ಗುರುಗಳಿಗೂ ಶಿಷ್ಯರಿಗೂ ನಾನಾ ಪಕ್ವಾನ್ನಗಳನ್ನೂ ಹೋಳಿಗೆಯನ್ನೂ ಮಾಷಾನ್ನವನ್ನೂ ಎಂಟು ವಿಧಗಳಾದ ಪಾಯಸಗಳನ್ನೂ ಶಾಕಪಾಕಾದಿಗಳನ್ನೂ ಬಡಿಸಿ ಔತಣ ಮಾಡಿಸಿದನು. ಉದರರೋಗಿಯಾದ ವಿಪ್ರನೂ ಚೆನ್ನಾಗಿ ಭುಜಿಸಿದನು.

ಆ ಕ್ಷಣವೇ ಇವನ ರೋಗವು ಹೋಯಿತು ಸ್ಪರ್ಶಮಣಿಯು ಲೋಹಕ್ಕೆ ತಗಲಲು ಸುವರ್ಣವಾಗುವಂತೆ ಶ್ರೀಗುರು ಕೃಪೆಯಿಂದ ರೋಗನಿವಾರಣೆಯಾಯಿತು. ಸೂರ್ಯೋದಯವಾಗಲು ಕತ್ತಲೆಯು ಹೋಗುವಂತೆ ಶ್ರೀಗುರುಕೃಪೆಯಿಂದ ಆತನ ದೈನ್ಯವು ತೊಲಗಿತು. ಗುರುಗಳು ಶಿಷ್ಯರೊಡನೆ ಆರೋಗಣೆ ಗೈದರು. ಎಲ್ಲರೂ ಸಂತೋಷಿಸಿದರು. ಅನ್ನದ್ವೇಷಿಯಾದ ಭೂಸುರನಿಗೆ ಅನ್ನವೇ ಔಷಧವಾಯಿತು

ವ್ಯಾಧಿಯು ಹೋಯಿತು ಗುರುಕೃಪೆಯುಂಟಾದವರಿಗೆ ಜನ್ಮಾಂತರದ ದೋಷವೂ ವ್ಯಾಧಿಯೂ ತೊಲಗುವುವು ಎಂದು ಗಂಗಾಧರರು ಗುರು ಚರಿತ್ರೆಯನ್ನು ಹೇಳಿದರು ಶ್ರೋತೃವರ್ಯರೇ, ಏಕಚಿತ್ತದಿಂದ ಕೇಳಿರಿ. ಇದನ್ನು ಭಕ್ತಿಯಿಂದ ಕೇಳಿದವರು ರೋಗರಹಿತರಾಗಿ ಸುಖಿಸುವರು. ಇದು ಸತ್ಯವು. ಮೂರುಬಾರಿಗೂ ಸತ್ಯವು ಎಂಬಲ್ಲಿಗೆ ವಿಪ್ರೋದರ ವ್ಯಥಾನಿರಸನವೆಂಬ ತ್ರಯೋದಶಾಧ್ಯಾಯವು ಸಮಾಪ್ತವಾದುದು.

|| ಶ್ರೀ ಗು ರು ವೇ ನ ಮಃ ||

---

## ೧೪ನೆಯ ಅಧ್ಯಾಯ.

---

ನಾಮಧಾರಕನು ಭಕ್ತಿಯಿಂದ, ಸಿದ್ಧರನ್ನು ವಂದಿಸಿ ಸ್ವಾಮಿ, ಮುಂದಿನ ಕಥೆಯನ್ನು ವಿಸ್ತಾರವಾಗಿ ಹೇಳಬೇಕೆಂದು ಪ್ರಾರ್ಥಿಸಿದನು ಆಗ ಸಿದ್ಧರು, ಶಿಷ್ಯನೇ ಕೇಳು—ಗುರುಗಳು ಸಾಯಂದೇವನ ಮನೆಯಲ್ಲಿ ಭಿಕ್ಷೆಯನ್ನು ಸ್ವೀಕರಿಸಿ ಸಾಯಂದೇವನೇ, ನೀನು ನನ್ನ ಭಕ್ತನು ನಿನ್ನಲ್ಲಿ ನನಗತಿ ಪ್ರೀತಿಯಿದೆ. ನಿನ್ನ ವಂಶದವರೂ ಭಕ್ತರಾಗಲಿ ಎಂದ ನುಗ್ರಹಿಸಿದರು

ಆಗ ಸಾಯಂದೇವನು ಜಯ ಜಯ ಜಗದ್ಗುರುವೆ ! ತ್ರಿಮೂರ್ತಿಗಳ ಅವತಾರ ಪುರುಷರೇ ! ಅವಿದ್ಯಾ ಮಾಯೆಯಿಂದ ನರರಾಗಿ ಕಾಣುವಿರಿ. ನಿಮ್ಮ ಮಹಿಮೆಯು ಅಗೋಚರವಾದುದು. ವಿಶ್ವವ್ಯಾಪಕನೇ, ಭಕ್ತರಕ್ಷಣೆಗಾಗಿ ಅವತರಿಸಿದ್ದೀರಿ. ನಿಮ್ಮ ಮಹಿಮೆಯನ್ನು ವರ್ಣಿಸಲು ನಾನು ಶಕ್ತನಲ್ಲ ನನ್ನ ವಂಶದಲ್ಲಿ ಎಲ್ಲರಿಗೂ ಭಕ್ತಿಯನ್ನೂ, ಇಹದಲ್ಲಿ ಪುತ್ರಪೌತ್ರಾದಿ ಸುಖವನ್ನೂ ಪರದಲ್ಲಿ ಸದ್ಗತಿಯನ್ನೂ ಕರುಣಿಸಿರಿ ಎಂದು ಬಿನ್ನವಿಸಿದನು ಮತ್ತು ಸದ್ಗುರುವೇ! ನಾನು ಬಹು ಕ್ರೂರನಾದ ಯವನನ ಮನೆಯಲ್ಲಿ ಸೇವೆ ಮಾಡುತ್ತಿದ್ದೇನೆ. "ಕುಗ್ರಾಮವಾಸಃ ಕುಲಹೀನ ಸೇವಾ" ಎಂಬಂತೆ ಹೀನ ಸೇವೆಯನ್ನು ಮಾಡುತ್ತಿರುವೆನು. ಆ ಯವನನು ಪ್ರತಿ ವರ್ಷದಲ್ಲಿಯೂ ಅನೇಕ ಬ್ರಾಹ್ಮಣರನ್ನು ಘಾತಿಸುವನು.

ನನ್ನನ್ನು ಇದಕ್ಕಾಗಿಯೇ ಕರಯಿಸಿರುವನು ನಾನು ಅವನ ಹತ್ತಿರ ಹೋದರೆ ನಿಜವಾಗ ನನ್ನ ಪ್ರಾಣವನ್ನು ತೆಗೆದಾನು, ಆದರೆ ಈಗ ತಮ್ಮ ಸಂದರ್ಶನವಾದುದರಿಂದ ಈಗ ನನಗೆ ಮರಣವಿಲ್ಲ ಎಂದನು.

ಆಗ ಗುರುವು ಸಂತೋಷಿಸಿ ಆವನಿಗೆ ಅಭಯವನ್ನಿತ್ತು ಅವನ ತಲೆಯಮೇಲೆ ಕೈಯನ್ನಿಟ್ಟು ಸಾಯಂದೇವನೇ ಚಿಂತಿಸದಿರು ಹೆದರದೆ ಆ ಕ್ರೂರಯವನನನ್ನು ನೋಡು ಆವನು ಪ್ರೇಮದಿಂದ ನಿನ್ನನ್ನು ನಮ್ಮ ಹತ್ತಿರಕ್ಕೆ ಕಳುಹಿಸುವನು ಇದು ನಿಜವು ನೀನು ನಮ್ಮ ನಿಜವಾದ ಭಕ್ತನಾಗಿದ್ದೀಯೆ. ನಿನ್ನ ವಂಶದವರೆಲ್ಲೂ ನಮ್ಮ ಭಕ್ತರಾಗುವರು. ನೀನು ಸಕಲೇಷ್ಟಗಳನ್ನೂ ಪಡೆಯುತ್ತೀಯೆ. ನಿನ್ನ ವಂಶಪರಂಪರೆಯಿಂದೆಲ್ಲರೂ ಪುತ್ರಪೌತ್ರಾದಿಗಳಿಂದ ಸುಖವಾಗಿರುವರು ನಿನ್ನ ಮನೆಯಲ್ಲಿ ಅಖಂಡಲಕ್ಷ್ಮಿಯು ವಾಸಿಸುವಳು ನೀನು ನಿರೋಗಿಯಾಗಿಯೂ ಶತಾಯುವಾಗಿಯೂ ಇರು ಎಂದು ವರವನ್ನು ಕೊಟ್ಟು ಹೊರಟುಹೋದರು.

ಬಳಿಕ ಸಾಯಂದೇವನು ಯವನನ ಹತ್ತಿರಕ್ಕೆ ಹೋದನು. ಕಾಲಾಂತಕನಂತಿರುವ ಆ ದುಷ್ಟಯವನನನ್ನು ಈ ಸಾಯಂದೇವನನ್ನು ನೋಡಿ ಕೋಪಿಸಿಕೊಂಡು ತನ್ನ ಮನೆಗೆ ಹೊರಟುಹೋದನು

ಈ ವಿಪ್ರನು ಭಯಚಕಿತನಾಗಿ ಗುರುವನ್ನು ಧ್ಯಾನಿಸುತ್ತಿದ್ದನು. ಗುರುಕಟಾಕ್ಷವಿದ್ದವನನ್ನು ಈ ಯವನ ದುಷ್ಟನೇನು ಮಾಡ್ಯಾನು? ಗರುಡನ ಮರಿಯನ್ನು ಸರ್ಪವು ಕಚ್ಚುವುದುಂಟೆ? ಐರಾವತವನ್ನು ಸಿಂಹವು ತಿಂದೀತೆ? ಗುರುಕೃಪೆಯುಳ್ಳವನಿಗೆ ಕಲಿಭಯವಿಲ್ಲ. ಗುರುವನ್ನು ಸ್ಮರಿಸಿದವರೆ ಕಾಲಮೃತ್ಯುವು ಬಾಧಿಸಲಾರದು. ಅಪಮೃತ್ಯುವೇನು ಮಾಡೀತು? ಯವನನು ಏನು ಮಾಡುವನು? ಗುರುಕೃಪೆಯುಳ್ಳವನಿಗೆ ಯಮನಭೀತಿಯಿಲ್ಲ ಈ ಯವನನು ಮನೆಗೆ ಹೋಗಿ ಭ್ರಾಂತಿಯಿಂದಲೂ ಅತಿಯಾದ ನಿದ್ರೆಯಿಂದಲೂ ಶರೀರಸ್ಮೃತಿಯಿಲ್ಲದವನಾಗಿಯೂ ಮಲಗಿದನು. ಆಗ ಹೃದಯದಲ್ಲಿ ಮಹಾಜ್ವಾಲೆಯುಂಟಾಗಿ ಎಚ್ಚೆತ್ತು ಪ್ರಾಣಾಂತವಾದ ಸಂಕಟವುಳ್ಳವನಾಗಿ ಸ್ಮೃತಿಯಿಲ್ಲದೆ ಒಬ್ಬ ಬ್ರಾಹ್ಮಣನು ನನ್ನನ್ನು ಆಯುಧದಿಂದ ಕಡಿ ಶಸ್ತ್ರದಿಂದ ಹೊಡೆದು ಕೊಲ್ಲುತ್ತಾನೆ ಎಂದು ಕೂಗುತ್ತಾ ಈ ಸಾಯಂದೇವನ ಹತ್ತಿರ ಬಂದು ಅಯ್ಯಾ ವಿಪ್ರನೇ, ನೀನೇ ನನಗೆ

ಒಡೆಯನು ಎಂದು ವಂದಿಸಿದನು. ಬಳಿಕ ಈತನಿಗೆ ವಸ್ತ್ರಭೂಷಣಾದಿ ಗಳನ್ನು ಕೊಟ್ಟು ಅಯ್ಯಾ ನೀನು ನಿನ್ನ ಮನಬಂದೆಡೆಗೆ ಇನ್ನು ಹೋಗ ಬಹುದು ಎಂದು ಹೇಳಿದನು. ಈ ವಿಪ್ರನು ಆನಂದದಿಂದ ಹೊರಟು ಗಂಗಾತೀರಕ್ಕೆ ಬಂದು ಶ್ರೀ ಗುರುಗಳನ್ನು ವಂದಿಸಿ ಸಮಾಚಾರವೆಲ್ಲ ವನ್ನೂ ಹೇಳಿದನು.

ಆಗ ಗುರುವು ಸಂತೋಷಿಸಿ ಇವನನ್ನು ಸಮಾಧಾನ ಮಾಡಿ ಇನ್ನು ನಾವು ದಕ್ಷಿಣದೇಶದ ತೀರ್ಥಯಾತ್ರೆಗೆ ಹೊರಡುವೆವು ಎಂದು ನಿರೂ ಪಿದರು. ಸಾಯಂದೇವನು ಕರಗಳನ್ನು ಜೋಡಿಸಿ ಸ್ವಾಮಿ ತಮ್ಮ ಚರಣ ಗಳನ್ನು ಬಿಟ್ಟಿರಲಾರೆನು ತಾವು ಸಂಸಾರಸಾಗರವನ್ನು ದಾಟಿಸತಕ್ಕವ ರಾಗಿದ್ದೀರಿ. ಗಂಗೆಯು ಸಗರ ಪುತ್ರರನ್ನು ರಕ್ಷಿಸಿದಂತೆ ಭೂಮಿಗೆ ಬಂದು ನನಗೆ ದರ್ಶನವನ್ನಿತ್ತಿರಿ ಭಕ್ತವತ್ಸಲನೇ! ನಾನೂ ತಮ್ಮೊಡನೆ ಬರುವೆನು. ಎಂದು ವಂದಿಸಿದನು.

ಆಗ ಗುರುವು ಅಯ್ಯಾ ಸಾಯಂದೇವನೇ, ನಾವು ದಕ್ಷಿಣದೇಶದಲ್ಲಿ ರುವ ಅನೇಕ ತೀರ್ಥಗಳಲ್ಲಿ ಸಂಚರಿಸಿ ಪುನಃ ಬಂದು, ಹದಿನೈದು ವರ್ಷ ಗಳಮೇಲೆ ನಿನಗೆ ದರ್ಶನಕೊಡುವೆವು ಆದರೂ ನಿಮ್ಮ ಗ್ರಾಮದಹತ್ತಿ ರದಲ್ಲಿಯೇ ನಾವು ನಿಶ್ಚಯವಾಗಿ ವಾಸಿಸುವೆವು ನೀನು ನಿನ್ನ ಬಂಧುಗ ಳೊಡನೆ ನಮ್ಮನ್ನು ನೋಡುತ್ತಿರಬಹುದು. ಚಿಂತಿಸದೆ ಸುಖದಿಂದಿರು. ನಿನ್ನ ಎಲ್ಲಾ ಅನಿಷ್ಟಗಳೂ ದುಃಖಗಳೂ ಹೋದುವು ಎಂದವನ ಶಿರ ದಲ್ಲಿ ಅಭಯಹಸ್ತವನ್ನಿಟ್ಟು ವಿವೇಕವನ್ನು ಹೇಳಿ ಗುರುವು ಶಿಷ್ಯರೊಡನೆ ಅಲ್ಲಿಂದ ಹೊರಟು ಆರೋಗ್ಯ ಭವಾನೀ ವೈಜನಾಥವೆಂಬ ಕ್ಷೇತ್ರಕ್ಕೆ ಬಂದು ಅಲ್ಲಿ ಗುಪ್ತವಾಗಿರುತ್ತಿದ್ದರು ಎಂದು ಸಿದ್ಧರು ಹೇಳಲು, ನಾಮ ಧಾರಕನು ಸ್ವಾಮಿ, ಗುರುಗಳು ಅಲ್ಲಿ ಗೋಪ್ಯದಿಂದಿರಲು ಕಾರಣವೇನು? ಎಂದು ಕೇಳಿದನು ಎಂದು ಗಂಗಾಧರನಂದನನು ಈ ಚರಿತ್ರೆಯನ್ನು ಹೇಳು ವನು. ಶ್ರೋತೃಗಳಿರಾ, ಏಕಚಿತ್ತದಿಂದ ಕೇಳಿರಿ. ಸಾಯಂದೇವನು ಸರಸ್ವತೀತೀರದಲ್ಲಿ ವಾಸವಾಗಿದ್ದನು ಎಂಬಲ್ಲಿಗೆ ಸಾಯಂದೇವೋಪಾ ಖ್ಯಾನದಲ್ಲಿ ದುಷ್ಟಯವನಶಾಸನವೆಂಬ ಹದಿನಾಲ್ಕನೇ ಅಧ್ಯಾಯವು ಮುಗಿದುದು.

# ೧೫ನೆಯ ಅಧ್ಯಾಯ.

ಶ್ರೀ ಗಣೇಶಾಯನಮಃ ॥ ಅಥ ಕ್ಷೇತ್ರವರ್ಣನಂ ॥ ಆಗ ಸಿದ್ಧರು ಶಿಷ್ಯಶಿರೋಮಣಿಯೇ ನೀನು ಧನ್ಯನು ಗುರುಚರಣದಲ್ಲಿ ನಿನ್ನ ಭಕ್ತಿಯು ಲೀನವಾಗಿದೆ ಮುಂದಿನ ಕಥೆಯನ್ನು ಕೇಳು ಆ ಕ್ಷೇತ್ರದಲ್ಲಿಯೂ ಗುರು ಮಹಿಮೆಯು ಪ್ರಕಟವಾಯಿತು ಕಾಮಾರ್ಥಿಗಳಾದ ಅನೇಕ ಭಕ್ತರು ಗುರುದರ್ಶನಕ್ಕೆ ಬಂದರು ಸಾಧುಗಳೂ ಅಸಾಧುಗಳೂ ಸರ್ವರೂ ಗುರುಗಳ ದರ್ಶನಕ್ಕೆ ಬರುತ್ತಿದ್ದರು ಪೂರ್ವದಲ್ಲಿ ಪರಶುರಾಮನು ಕ್ಷತ್ರಿಯರನ್ನು ಗೆದ್ದು ಬ್ರಾಹ್ಮಣರಿಗೆ ಭೂಮಿಯನ್ನೆಲ್ಲವನ್ನೂ ಕೊಟ್ಟು ಪಶ್ಚಿಮ ಸಮುದ್ರಕ್ಕೆ ಹೋದನು ಆದರೂ ಬ್ರಾಹ್ಮಣರು ಮತ್ತೆ ಪರಶುರಾಮನನ್ನು ಕುರಿತು ಭೂಮಿಯನ್ನು ಕೇಳಲು ಬಂದರು ಇದನ್ನು ನೋಡಿ ಪರಶುರಾಮನು ಸಮುದ್ರದ ಮಧ್ಯ ಜಲದಲ್ಲಿ ಹೊಕ್ಕು ಗೋಪ್ಯವಾಗಿದ್ದನು. ಅಂದಿನಿಂದಲೂ ವಿಪ್ರರಿಗೆ ಆಶೆಯು ಪೂರ್ಣವಾಗಲಿಲ್ಲ. ಇದರಂತೆಯೇ ಅನೇಕರು ಬಂದು ವರವನ್ನು ಕೇಳಲು ಶ್ರೀಗುರುವು ಅಲ್ಲಿ ಗುಪ್ತವಾಗಿದ್ದರು. ವಿಶ್ವವ್ಯಾಪಕನಾದ ಪರಮೇಶ್ವರನು ಅವರವರ ಯೋಗ್ಯತಾನುಸಾರವಾಗಿ ಪ್ರಸನ್ನರಾಗಿ ವರವನ್ನು ಕೊಡುತ್ತಿದ್ದರು.

ಗುರುಗಳು ಶಿಷರನ್ನು ಕುರಿತು ಶಿಷ್ಯರಿರಾ, ನೀವು ಎಲ್ಲಾ ಕ್ಷೇತ್ರಗಳಲ್ಲಿಯೂ ಸಂಚರಿಸಿ ಶ್ರೀಶೈಲಕ್ಕೆ ಬನ್ನಿರಿ ಎಂದರು.

ಇದನ್ನು ಕೇಳಿ ಶಿಷ್ಯರು ಸ್ವಾಮೀ, ನಮ್ಮನ್ನು ಏಕೆ ಉಪೇಕ್ಷಿಸುತ್ತೀರಿ? ನಿಮ್ಮ ದರ್ಶನ ಮಾತ್ರದಿಂದಲೇ ನಮಗೆ ತೀರ್ಥಯಾತ್ರೆಯ ಫಲವುಂಟಾಗುವುದು ಗುರುಚರಣವೇ ಸರ್ವತೀರ್ಥವೆಂದು ಶೃತಿ ಪುರಾಣಗಳು ಹೇಳುವುವು ತಾವು ಹತ್ತಿರದಲ್ಲಿರಲಾಗಿ ಕಾಡುಗಳಲ್ಲಿರುವ ತೀರ್ಥಗಳಿಗೆ ನಾವು ಏಕೆ ಅಲೆಯಬೇಕು? ಕಲ್ಪವೃಕ್ಷವನ್ನು ಬಿಟ್ಟು ನಾವು ಎಲ್ಲಿಗೆ ಹೋಗಬೇಕು ಎಂದು ಕೇಳಿದರು

ಆಗ ಗುರುಗಳು ಶಿಷ್ಯರಿರಾ, ಯತಿಗಳಾದ ನಾವು ಐದು ದಿನಗಳಿಗಿಂತಲೂ ಹೆಚ್ಚಾಗಿ ಬಂದು ಸ್ಥಳದಲ್ಲಿರಬಾರದು. ಚತುರ್ಥಾಶ್ರಮಿಗಳು

ತೀರ್ಥಯಾತ್ರೆ ಮಾಡಬೇಕು ನಮ್ಮ ಮಾತನ್ನು ಕೇಳಿರಿ. ನೀವು ತೀರ್ಥಯಾತ್ರೆಮಾಡಿ ನಮ್ಮ ಹತ್ತಿರಕ್ಕೆ ಬನ್ನಿರಿ ಬಹುಧಾನ್ಯ ಸಂವತ್ಸರ ದಲ್ಲಿ ನಾವು ಶ್ರೀಶೈಲಕ್ಕೆ ಬರುವೆವು ನೀವೂ ಆಗ ಅಲ್ಲಿಗೆ ಬನ್ನಿರಿ ಎಂದಾಜ್ಞಾಪಿಸಲು ಶಿಷ್ಯರೆಲ್ಲರೂ ಗುರುಗಳಿಗೆ ವಂದಿಸಿ ಮಹಾಸ್ವಾಮಿ, ತಮ್ಮ ಶಾಸನದಂತೆಯೇ ತೀರ್ಥಯಾತ್ರೆಗೆ ಹೊರಡುವೆವು ಗುರುವಾಕ್ಯ ದಂತೆ ನಡೆಯದವರು ರೌರವನರಕವನ್ನು ಹೊಂದುವರು ಆಗರೆ ನಾವು ಯಾವ ಕ್ಷೇತ್ರಕ್ಕೆ ಹೋಗಬೇಕು ? ತಮ್ಮ ವಚನವೇ ನಮಗೆ ಪ್ರಮಾ ಣವು ಎಂದರು.

ಈ ವಚನವನ್ನು ಕೇಳಿ ಗುರುಮೂರ್ತಿಯು ಪ್ರಸನ್ನನಾಗಿ ಶಿಷ್ಯ ರಿರಾ ! ಈ ಬ್ರಹ್ಮಾಂಡದಲ್ಲಿ ತೀರ್ಥರಾಜವಾದ ಶ್ರೀ ಕಾಶೀಕ್ಷೇತ್ರವೇ ಶ್ರೇಷ್ಠವು ನೀವು ಬೇಗ ಅಲ್ಲಿಗೆ ಹೋಗಿರಿ ಅಲ್ಲಿ ಭಾಗೀರಥಿಯು ತಟಾಕಯಾತ್ರೆಯು ಎಂಭತ್ತು ಯೋಜನ ದೂರವುಳ್ಳದು ಈ ಯಾತ್ರೆ ಯಿಂದ ಎಂಭತ್ತು ಕೃಚ್ಛ್ರಗಳನ್ನು ಕೊಟ್ಟ ಫಲವುಂಟಾದೀತು. ಪ್ರಯಾಗ ದಲ್ಲಿ ಇದರ ದ್ವಿಗುಣ ಫಲವುಂಟು ಯಮುನಾ ನದಿಯ ತಟಾಕದಲ್ಲಿ ಇಪ್ಪತ್ತೈದು ಗ್ರಾಮಗಳಿವೆ ಅಲ್ಲಿ ಕೃಚ್ಛ್ರ ಫಲವು ವಿಶೇಷವಾಗಿರುವುದು ಗಂಗಾನದಿಯಲ್ಲಿ ಇಪ್ಪತ್ತಾನಾಲ್ಕು ಗ್ರಾಮಗಳಲ್ಲಿ ಸ್ನಾನಮಾಡಬೇಕು ಇದ ರಿಂದ ಯಾಗಫಲವುಂಟು ಈರೀತಿ ಸ್ನಾನ ಮಾಡಿದವನು ತನ್ನ ಪಿತೃಗ ಳೊಡನೆ ಸ್ಥಿರವಾದ ಬ್ರಹ್ಮಲೋಕವನ್ನು ಹೊಂದುವನು ವರುಣಾ, ಕುಶಾವತಿ, ಕೃಷ್ಣವೇಣಿ, ವಿತಸ್ತಾ, ಶರಾವತೀ, ಮರುದ್ವೃಧಾ, ಅಸಿವನೀ, ಮಧುಮತೀ, ಪಯಸ್ವಿನೀ, ಘೃತವರ್ತೀ ಎಂಬ ನದಿಗಳ ತಟಾಕ ಯಾತ್ರೆ ಗಳನ್ನು ನೀವು ಮಾಡಿರಿ ಈ ಭೂಮಂಡಲದಲ್ಲಿ ಈ ದೇವನದಿಗಳು ಪ್ರಸಿದ್ಧಗಳಾಗಿವೆ ಎಷ್ಟು ಗ್ರಾಮಗಳಲ್ಲಿ ಸ್ನಾನ ಮಾಡಿದರೆ ಅಷ್ಟು ಕೃಚ್ಛ್ರ ಗಳ ಫಲ ಉಂಟಾಗುವುದು ಸ್ನಾನ ಮಾತ್ರದಿಂದ ಪವಿತ್ರನಾಗಿ ಬ್ರಹ್ಮ ಹತ್ಯಾದಿ ಪಾಪಗಳಿಂದ ಬಿಡಲ್ಪಡುವವನಾಗುವನು ಚಂದ್ರಭಾಗ, ರೇವತಿ, ಸರಯೂ, ಗೌತಮೀ, ವೇದಿಕಾ, ಕೌಶಿಕೇ, ನಿಕ್ರಜಲಾ, ಮಂದಾಕಿನೀ, ಸಹಸ್ರ ವಕ್ತ್ರಾಘೋರಾ, ಪೂರ್ಣಾಯುಷ್ಯಾ ಬಹುಧಾಪ್ರಕರ, ವರುಣಾ ಪ್ರಚರ ಎಂಬ ನದಿಗಳುಳ್ಳ ಹದಿನಾರು ಗ್ರಾಮಗಳಲ್ಲಿ ತಟಾಕ ಯಾತ್ರೆ

ಯನ್ನು ಮಾಡಬೇಕು. ಎಲ್ಲಿ ನದಿಯು ಸಂಗಮವಾಗುವುದೋ ಅಲ್ಲಿ ಸ್ನಾನ ಮಾಡಬೇಕು. ತ್ರಿವೇಣಿಯಲ್ಲಿ ಸ್ನಾನಮಾಡಲು ಅಮಿತವಾದ ಪುಣ್ಯವುಂಟು. ಸೇತುಬಂಧ ಭೀಮೇಶ್ವರ, ಶ್ರೀರಂಗ, ಪದ್ಮನಾಭೇಶ್ವರ, ಪುರುಷೋತ್ತಮ, ನೈಮಿಶಾರಣ್ಯ, ಪುಷ್ಕರ ತೀರ್ಥ, ವೈರೋಚನಿ ಎಂಬ ಕ್ಷೇತ್ರಗಳಲ್ಲಿ ಸಂಚರಿಸಿ ಗಂಗೆಯಲ್ಲಿ ಸ್ನಾನಮಾಡಿ ಬದರೀನಾರಾಯಣ, ಕುರುಕ್ಷೇತ್ರ, ಪುಣ್ಯಪಾವನವಾದ ನಂದೀತೀರ್ಥ, ಶ್ರೀಶೈಲ ಎಂಬ ಸ್ಥಳಗಳಲ್ಲಿ ಸ್ನಾನಮಾಡಿ ಮಹಾಲಯತೀರ್ಥದಲ್ಲಿ ವಿಪ್ರನು ತರ್ಪಣವನ್ನು ಕೊಟ್ಟರೆ ಅವನ ನಾಲ್ವತ್ತೆರಡು ಕುಲದವರೂ ಸಹಿತ ಸ್ವರ್ಗಕ್ಕೆ ಹೋಗುವರು. ಕೇದಾರತೀರ್ಥ, ಪುಷ್ಕರತೀರ್ಥ, ಕೋಟಿತೀರ್ಥ, ನರ್ಮದಾತೀರ್ಥ, ಮಾತೃಕೇಶ್ವರ, ಕುಬ್ಜತೀರ್ಥ, ಕೋಕಾಮುಖೀ, ಪ್ರಸಾದತೀರ್ಥ, ವಿಜಯತೀರ್ಥ, ಪುರೀಂದ್ರಚಂದ್ರತೀರ್ಥ, ಗೋಕರ್ಣ, ಶಂಖಕರ್ಣ, ಅಯೋಧ್ಯಾ, ಮಧುರಾ, ಕಾಂಚೀ, ದ್ವಾರಕಾ, ಗಯೆ, ಶಾಲಿಗ್ರಾಮ, ಶಂಭಲಗ್ರಾಮ ಎಂಬಿವು ಮುಕ್ತಿಕ್ಷೇತ್ರಗಳು ಎಂದು ತಿಳಿಯಿರಿ. ಗೋದಾವರೀ ನದೀತೀರದಲ್ಲಿ ಆರು ಯೋಜನ ದೂರದಲ್ಲಿರುವ ತೀರ್ಥಗಳಲ್ಲಿ ಸ್ನಾನ ಮಾಡಿದರೆ ವಾಜಪೇಯಾಗದ ಫಲವನ್ನು ಕೊಡುವುದು. ಈ ತೀರ್ಥಗಳಲ್ಲಿ ಸವ್ಯಾಪಸವ್ಯವಾಗಿ ಮೂರು ಬಾರಿ ಏಕ ಮನಸ್ಸಿನಿಂದ ಸ್ನಾನಮಾಡಿದರೆ ಮಹಾ ಪಾಪಿಯಾದರೂ ಶುದ್ಧನಾಗಿ ಜ್ಞಾನಿಯಾಗುವನು. ಮಂಜರಾ ನದಿಯ ಸಂಗಮದಲ್ಲಿರುವ ಭೀಮೇಶ್ವರ ತೀರ್ಥವು ಪ್ರಯಾಗಕ್ಕೆ ಸಮಾನವು ಈ ಗೋದಾವರೀತೀರದಲ್ಲಿರುವ ಕುಶತೀರ್ಥದಲ್ಲಿ ಸ್ನಾನ ಮಾಡಿ ತರ್ಪಣವನ್ನು ಕೊಡಬೇಕು ಈರೀತಿಯಾಗಿ ಹನ್ನೆರಡು ಸ್ಥಳಗಳಲ್ಲಿ ಸ್ನಾನಮಾಡಿದರೆ ಹದಿನೆಂಟು ಕೃಚ್ಛ್ರಗಳ ಫಲವುಂಟಾಯಿತು. ಪೂರ್ಣಾನದೀ ತೀರದಲ್ಲಿ ನಾಲ್ಕು ಗ್ರಾಮಗಳಲ್ಲಿಯೂ, ಕೃಷ್ಣವೇಣೀತೀರದಲ್ಲಿ ಹದಿನೈದು ಗ್ರಾಮಗಳಲ್ಲಿಯೂ ಯಾತ್ರೆ ಮಾಡಬೇಕು ತುಂಗಭದ್ರಾತೀರದಲ್ಲಿ ಇಪ್ಪತ್ತು ಗ್ರಾಮಗಳಿವೆ ಇವುಗಳಲ್ಲದೆ ಪಂಪಾ ಸರಸ್ಸು ಅನಂತವಾದ ಮಹಿಮೆಯುಳ್ಳದ್ದು. ಹರಿಹರ ಕ್ಷೇತ್ರವೂ ಪ್ರಸಿದ್ಧವಾದುದು. ಇಲ್ಲಿ ಸ್ನಾನಮಾಡಿದರೆ ಸರ್ವಪಾಪಗಳೂ ಪರಿಹಾರವಾಗುವುವು ಭೀಮಾರಥೀ ತೀರದಲ್ಲಿ ಹತ್ತು ಗ್ರಾಮಗಳಲ್ಲಿ ತಟಾಕ ಯಾತ್ರೆ ಮಾಡತಕ್ಕದ್ದು. ಇವುಗಳಲ್ಲಿ ಪಾಂಡುರಂಗ, ಮಾಕ್ಷಲಿಲಿಂಗ, ಗಾಣಗಾಪುರಿ ಮುಂತಾದ ಅಷ್ಟ

ತೀರ್ಥಗಳಲ್ಲಿ ತಟಾಕಯಾತ್ರೆ ಮಾಡಬೇಕು. ಅಮರಜಾ ಸಂಗಮದಲ್ಲಿ ಕೋಟಿ ತೀರ್ಥವು ಪ್ರಸಿದ್ಧವಾದುದು. ಅಲ್ಲಿರುವ ಒಂದು ಅಶ್ವತ್ಥವೃಕ್ಷವು ಕಲ್ಪತರುವಿಗೆ ಸಮವಾಗಿದೆ. ಇದರೆದುರಿನಲ್ಲಿ ನೃಸಿಂಹ ತೀರ್ಥವಿದೆ. ಉತ್ತರಭಾಗದಲ್ಲಿ ವಾರಣಾಸೀ ತೀರ್ಥವೂ, ಪೂರ್ವಭಾಗದಲ್ಲಿ ಪಾಪವಿನಾಶಿನೀತೀರ್ಥವೂ, ರುದ್ರಪಾದ ತೀರ್ಥವೂ, ಚಕ್ರತೀರ್ಥವೂ, ಕೇಶವ ದೇವ, ವಿನಾಯಕ, ಕೋಟಿತೀರ್ಥ, ಮನ್ಮಥತೀರ್ಥವೂ ಇವೆ. ಅಲ್ಲಿ ಕಲ್ಲೇಶ್ವರ ದೇವಸ್ಥಾನವಿದೆ. ಗಾಂಧಾರಭುವನವೆಂಬ ಗಾಣಗಾಪುರವಿದೆ. ಇಲ್ಲಿ ವಿಪ್ರರು ನಿತ್ಯಕರ್ಮವನ್ನು ಮಾಡುತ್ತಿರುವರು. ಮತ್ತು ಸಕಲೇಷ್ಟಾರ್ಥಗಳನ್ನೂ ಹೊಂದುತ್ತಿರುವರು. ಕಾಂಕಿಣೀ ಸಂಗಮ ಸ್ಥಳವಾದ ಭೀಮಾ ತೀರದಲ್ಲಿರುವ ಸ್ಥಳವು ಪ್ರಯಾಗಕ್ಕೆ ಸಮವು. ತುಂಗಭದ್ರಾ, ವರದಾ ಸಂಗಮದಲ್ಲಿಯೂ, ಮಲಪ್ರಭಾ ಸಂಗಮದಲ್ಲಿಯೂ ಸ್ನಾನಮಾಡಲು ನೂರು ಜನ್ಮಗಳ ಪಾಪಗಳು ಹೋಗುವುವು. ನಿವೃತ್ತಿ ಸಂಗಮದಲ್ಲಿ ಬ್ರಹ್ಮಹತ್ಯಾ ಪಾಪವು ಹೋಗುವುದು. ನೀವು ಅಲ್ಲಿಗೆ ಜಾಗ್ರತೆಯಾಗಿ ಹೋಗಿರಿ. ಸಿಂಹರಾಶಿಗೆ ಬೃಹಸ್ಪತಿಯು ಬರಲು ಸಂತೋಷದಿಂದ ಭಾಗೀರಥಿಯು ಎಲ್ಲಾ ಕಡೆಗಳಲ್ಲಿಯೂ ಬಂದು ಐಕ್ಯವಾಗುವಳು. ಬೃಹಸ್ಪತಿಯು ಕನ್ಯಾಗತನಾಗಲು ಕೃಷ್ಣಾನದಿಗೆ ಭಾಗೀರಥಿಯು ಬರುವಳು. ತುಂಗಭದ್ರಾ ನದಿಗೆ ತುಲಾಮಾಸದಲ್ಲಿ ಗಂಗೆಯು ಬರುವಳು. ಕರ್ಕಾಟಕ ರಾಶಿಯಲ್ಲಿ ಸೂರ್ಯನು ಬರಲು ಮಲಪ್ರಭಾ-ಕೃಷ್ಣಾಸಂಗಮದಲ್ಲಿ ಎಲ್ಲರೂ ಸ್ನಾನ ಮಾಡಲು ಬ್ರಹ್ಮಹತ್ಯಾದಿ ದುರಿತಗಳೂ ಹೋಗುವುವು. ಭೀಮಾ ಕೃಷ್ಣಾ ಸಂಗಮದಲ್ಲಿ ಸ್ನಾನಮಾಡಲು ಏಳು ಜನ್ಮಗಳಲ್ಲಿ ಬ್ರಾಹ್ಮಣನಾಗಿ ಹುಟ್ಟುವನು. ತುಂಗಭದ್ರಾ ಸಂಗಮದಲ್ಲಿ ಅದರ ಮೂರರಷ್ಟು ಫಲವುಂಟು. ನಿವೃತ್ತಿ ಸಂಗಮದಲ್ಲಿ ಚತುರ್ಗುಣ ಫಲವುಂಟು. ಪಾತಾಳಗಂಗೆಯಲ್ಲಿ ಸ್ನಾನಮಾಡಿ ಮಲ್ಲಿಕಾರ್ಜುನನ ದರ್ಶನವನ್ನು ಮಾಡಿದರೆ ಆರರಷ್ಟು ಪುಣ್ಯವುಂಟು. ಇಲ್ಲಿ ಪುನರಾವೃತ್ತಿ ಇಲ್ಲವು. ಕೃಷ್ಣಾ ನದಿಯು ಸಮುದ್ರ ಸಂಗಮವಾಗುವಲ್ಲಿ ಲಿಂಗಾಲಯವಿದೆ. ಅಲ್ಲಿ ಪುಣ್ಯವು ದ್ವಿಗುಣವು. ಕಾವೇರಿಯಲ್ಲಿ ಹದಿನೈದರಷ್ಟು ಗುಣವುಂಟು. ಅಲ್ಲಿ ಸುಚಿತ್ತದಿಂದ ಸ್ನಾನಮಾಡಿರಿ. ತಾಮ್ರಪರ್ಣಿಯಲ್ಲಿಯೂ, ಕೃತಮಾಲಾ ನದಿಯಲ್ಲಿಯೂ ಸ್ನಾನವು ಪಾಪ ಹರವು. ಪಯಸ್ವಿನೀ, ಭವನಾಶಿನೀ, ಶ್ರೀ ಶೇಷಾದ್ರಿ, ಶ್ರೀಮದನಂತ

ಪದ್ಮನಾಭಸ್ವಾಮಿ ಇವರನ್ನು ಪೂಜಿಸಬೇಕು. ತೂರ್ಣಮಾಲಾ ಕ್ಷೇತ್ರಕ್ಕೆ ಹೋಗಿರಿ. ಕುಂಭಕೋಣವು ಸರ್ವತೀರ್ಥಕ್ಕೆ ಸಮವಾಗಿದೆ. ಪಕ್ಷತೀರ್ಥ, ಧನುಷ್ಕೋಟಿತೀರ್ಥ, ಕಾವೇರಿತೀರದ ಶ್ರೀರಂಗ, ಚಂದ್ರಕುಂಡದ ಪುರುಷೋತ್ತಮ, ಕೋಟಿತೀರ್ಥ, ಕೊಲ್ಲಾಪುರದ ಮಹಾಲಕ್ಷ್ಮೀಸ್ಥಾನ, ದಕ್ಷಿಣ ಕಾಶಿಯಾದ ಕರವೀರ ಇವುಗಳಲ್ಲಿ ನರಸಿಂಹನೂ ಸದಾಶಿವನೂ ಪ್ರತ್ಯಕ್ಷರಾಗಿರುವರು. ಈ ತೀರ್ಥಗಳು ಪ್ರಸಿದ್ಧಗಳಾಗಿವೆ. ಕೃಷ್ಣಾತೀರದ ಭಿಲ್ಲವಾಡಿಯಲ್ಲಿ ಭುವನೇಶ್ವರಿಯು ತಪಸ್ಸು ಮಾಡಿ ಶಿವನಲ್ಲಿ ಐಕ್ಯವಾದಳು. ವರುಣಾ ಸಂಗಮದಲ್ಲಿ ಸ್ನಾನಮಾಡಿ ಮಾರ್ಕಾಂಡೇಯನೆಂಬ ಸಂಗಮೇಶ್ವರನನ್ನು ಪೂಜಿಸಿರಿ. ಕೃಷ್ಣಾತೀರದಲ್ಲಿನ ಋಷ್ಯಾಶ್ರಮಗಳಲ್ಲಿ ಸ್ನಾನಮಾಡಿದರೆ ಜ್ಞಾನಸಿದ್ಧಿಯಾದೀತು. ಮುಂದ ಪಂಚಗಂಗಾ ಸಂಗಮದಲ್ಲಿ ಅಮರಾಪುರವು ಪ್ರಸಿದ್ಧವಾದುದು. ಇಲ್ಲಿ ಪ್ರಯಾಗಕ್ಕಿಂತ ಹೆಚ್ಚು ಪುಣ್ಯವು. ಈ ಸರ್ವತೀರ್ಥಗಳಲ್ಲಿಯೂ ಮುನಿಗಳು ತಪಸ್ಸನ್ನು ಮಾಡುತ್ತಾ ಅಲ್ಲಿ ಜ್ಞಾನಸಿದ್ಧಿ ಹೊಂದುವರು. ಈ ಪ್ರಸಿದ್ಧ ಸ್ಥಳಗಳಲ್ಲಿ ಮೂರು ದಿನಗಳು ಸ್ನಾನ ಸಂಧ್ಯಾದಿಗಳನ್ನು ಅನುಷ್ಠಿಸಿದರೆ ಇಷ್ಟಾರ್ಥಗಳು ಬೇಗ ಸಿದ್ಧಿಸುವುವು. ಯುಗಾಲಯ ತೀರ್ಥವು ದರ್ಶನ ಮಾತ್ರದಿಂದಲೇ ಮುಕ್ತಿಯನ್ನು ಕೊಡುವುದು. ಮಲಪ್ರಭಾ ಸಂಗಮದಲ್ಲಿ ಶೂರ್ಪಾಲಯ ತೀರ್ಥವಿದೆ. ಇಲ್ಲಿ ವಿಶ್ವಾಮಿತ್ರನು ತಪಸ್ಸನ್ನು ಗೈದು ಸಿದ್ಧಿಹೊಂದಿದನು. ಇಲ್ಲಿ ಸರ್ವದೋಷಗಳೂ ನಾಶವಾಗುವುವು. ಕೃಷ್ಣಾನದಿಯು ಉತ್ತರವಾಹಿನಿಯಾದ ಶ್ವೇತಶೃಂಗಿಯಲ್ಲಿ ವಿಷ್ಣುವಿನ ಅವತಾರವಾದ ಕಪಿಲಋಷಿಗೆ ಗಾಯಿತ್ರಿಯು ಪ್ರಸನ್ನಳಾದಳು. ಅಲ್ಲಿ ಸ್ನಾನಮಾಡಲು ಕಾಶಿಗಿಂತಲೂ ಹೆಚ್ಚು ಪುಣ್ಯವುಂಟು. ಅಲ್ಲಿ ಒಂದು ಬಾರಿ ಮಂತ್ರವನ್ನು ಜಪಿಸಿದರೆ ಕೋಟಿಗುಣವಾದ ಫಲಕೊಡುವುದು. ಬಳಿಕ ಕೇದಾರೇಶ್ವರನನ್ನು ನೋಡಬೇಕು. ಪೀರಾಪುರದಲ್ಲಿ ದತ್ತಾತ್ರೇಯರು ವಾಸವಾಗಿದ್ದಾರೆ. ಮಣಿಗಿರಿಯಲ್ಲಿ ಸಪ್ತಋಷಿಗಳು ಪ್ರೀತಿಯಿಂದ ಬಹುಕಾಲ ತಪಸ್ಸನ್ನು ಮಾಡಿದರು. ವೃಷಭಾದ್ರಿ ಕಲ್ಯಾಣನಗರ ತೀರ್ಥಗಳು ಸಂಸಾರ ಲಂಪಟವನ್ನು ಹೋಗಲಾಡಿಸುವುವು. ಅಹೋಬಲ ದರ್ಶನದಿಂದ ಯಜ್ಞಫಲ ಉಂಟಾದೀತು. ಶ್ರೀಗಿರಿಯನ್ನು ನೋಡಲು ಪುನರ್ಜನ್ಮವಿಲ್ಲ. ಈ ತೀರ್ಥಗಳಲ್ಲಿ ಸಂಚರಿಸಬೇಕು. ರಜಸ್ವಲೆಯಾದ ನದಿಯಲ್ಲಿ ಸ್ನಾನ

ಮಾಡಿದರೆ ಮಹಾದೋಷವು ಕರ್ಕಾಟಕ ಸಂಕ್ರಮಣದಿಂದ ಎರಡು ತಿಂಗಳು ನದಿಯ ಸ್ನಾನವನ್ನು ಬಿಟ್ಟರೆ ಬಳಿಕ ದೋಷವಿಲ್ಲ. ಆದರೆ ನದೀ ತೀರದಲ್ಲಿರುವವರಿಗೆ ಈ ದೋಷವಿಲ್ಲ ನದಿಯು ರಜಸ್ವಲೆಯಾದಾಗ ಮೂರು ದಿನಗಳು ಮಹಾನದಿಗಳಲ್ಲಿ ಸ್ನಾನವು ನಿಷೇಧ ಭಾಗೀರಥೀ, ಗೌತಮೀ, ಚಂದ್ರಭಾಗಾ, ಸಿಂಧು, ನರ್ಮದಾ, ಸರಯು ನದಿಗಳಲ್ಲಿ ಮೂರು ದಿನಗಳು ಸ್ನಾನವನ್ನು ಬಿಡಬೇಕು ಗ್ರೀಷ್ಮಕಾಲದಲ್ಲಿ ನದಿಗಳಿಗೆ ರಜಸ್ವಲಾ ದೋಷವು ಹತ್ತು ದಿನಗಳು ಕೆರೆ ಭಾವಿಗಳಲ್ಲಿ ಒಂದು ರಾತ್ರಿ ದೋಷವು. ಯಾವ ದಿನ ನದಿಗಳಿಗೆ ಹೊಸನೀರು ಬರುವುದೋ ಆ ದಿನ ನದಿಯು ರಜಸ್ವಲೆ ಎಂದು ತಿಳಿಯಿರಿ ಆಗ ಸ್ನಾನಮಾಡಲು ದೋಷವು ಈ ರೀತಿಯಿಂದ ಮುಖ್ಯತೀರ್ಥಗಳನ್ನು ನಿಮಗೆ ಹೇಳಿದೆನು. ನೋಡಿದ ತೀರ್ಥಗಳಲ್ಲೆಲ್ಲಾ ವಿಧಿಪೂರ್ವಕವಾಗಿ ಸ್ನಾನ ಮಾಡಬೇಕು ಎಂದಾಜ್ಞಾಪಿಸಿದರು

ಗುರುವಾಕ್ಯದಂತೆ ಶಿಷ್ಯರು ವಂದಿಸಿ ಅಪ್ಪಣೆ ಪಡೆದು ಎಲ್ಲರೂ ಹೊರಟರು ಎಂದು ಸಿದ್ಧರು ನಾಮಧಾರಕನಿಗೆ ಹೇಳಿದರು

ಶ್ರೀ ಗುರುವು ಗೋಪ್ಯವಾಗಿದ್ದರು ಎಂದು ಸರಸ್ವತೀಗಂಗಾ ಧರನು ಮುಂದಿನ ಕಥೆಯನ್ನು ವಿಸ್ತಾರವಾಗಿ ಹೇಳುವೆನು. ಇದನ್ನು ಕೇಳಲು ಸರ್ವೇಷ್ಟಗಳೂ ಸಿದ್ಧಿಸುವುವು ಬ್ರಹ್ಮರಸವನ್ನಾಸ್ವಾದಿಸಿದವ ರಿಗೆ ಪರಮಾರ್ಥವು ತ್ವರಿತದಿಂದ ಸಿದ್ಧಿಸುವುದು ಈ ಗುರುಚರಿತ್ರೆಯು ಕಾಮಧೇನು ಸ್ವರೂಪವುಳ್ಳದ್ದು. ಶ್ರೋತೃಗಳಿರಾ! ಸಾವಧಾನದಿಂದ ಕೇಳಿದರೆ ಚತುರ್ವಿಧ ಪುರುಷಾರ್ಥಗಳೂ ಸಿದ್ಧಿಸುವುವು ಎಂಬಲ್ಲಿಗೆ ಶ್ರೀ ಗುರುಚರಿತ್ರೆಯಲ್ಲಿ ಕ್ಷೇತ್ರತೀರ್ಥವರ್ಣನವೆಂಬ ಹದಿನೈದನೇ ಅಧ್ಯಾಯವು ಮುಗಿದುದು.

|| ಶ್ರೀಗುರು ದತ್ತಾತ್ರೇಯಾರ್ಪಣಮಸ್ತು ||

# ೧೬ ನೆಯ ಅಧ್ಯಾಯ.

ಶ್ರೀ ಗಣೇಶಾಯನಮಃ ॥ ನಾಮಧಾರಕನು ಸಿದ್ಧರನ್ನು ಕುರಿತು ಸ್ವಾಮಿ, ಗುರುಚರಿತ್ರೆಯನ್ನು ವಿಸ್ತಾರವಾಗಿ ಹೇಳಬೇಕು ಶ್ರೀ ಗುರುಗಳು ಯಾತ್ರೆಗೆ ಹೊರಟವರು ಎಲ್ಲಿದ್ದರು ? ಗುರುಗಳ ಹತ್ತಿರ ಯಾವ ಶಿಷ್ಯರಿದ್ದರು ? ಎಂದು ಕೇಳಿದನು.

ಆಗ ಸಿದ್ಧರು ಶಿಷ್ಯಶಿರೋಮಣಿಯೇ, ನೀನು ಧನ್ಯನು. ನನ್ನ ಚಿತ್ತವು ಅವಿದ್ಯಾಮಾಯೆಯಿಂದ ಮೋಹಿತವಾಗಿತ್ತು, ನಿನ್ನಿಂದ ಎಚ್ಚರಿಕೆ ಹೊಂದಿತು. ಜ್ಞಾನವೆಂಬ ದೀಪವು ಉದಯಿಸಿತು ನೀನು ನನ್ನ ಪ್ರಾಣಸಮನು. ನಿನ್ನಿಂದ ಗುರುಚರಿತ್ರೆಯು ನೆನಪಿಗೆ ಬಂದಿತು. ಅಜ್ಞಾನವೆಂಬ ಕತ್ತಲೆಯ ರಾತ್ರಿಯಲ್ಲಿ ಕಷ್ಟಪಡುತ್ತಿದ್ದೆನು ನೀನು ಅಮೃತವೆಂಬ ಸಾಗರದಲ್ಲಿ ನನ್ನನ್ನು ಮುಳುಗಿಸಿದೆ ಸಂತುಷ್ಟನಾದೆನು ನೀನು ಪುತ್ರಪೌತ್ರರಿಂದಲೂ, ಐಶ್ವರ್ಯದಿಂದಲೂ ಕೂಡಿರುವಿ ನೀನು ಗುರುಕೃಪೆಯುಳ್ಳವನು ಎಲ್ಲರೂ ನಿನ್ನನ್ನು ಮನ್ನಿಸುವರು, ಸಂದೇಹಿಸದಿರು ಅಷ್ಟೈಶ್ವರ್ಯವನ್ನು ಹೊಂದುವಿ. ಗುರುಚರಿತ್ರೆಯನ್ನು ವಿಸ್ತಾರವಾಗಿ ಹೇಳುವೆನು

ಶ್ರೀ ಗುರುವು ! ವೈಜೇಶ್ವರ ಸನ್ನಿಧಿಯಲ್ಲಿ ಒಂದು ವರ್ಷಕಾಲ ಗೋಪ್ಯವಾಗಿದ್ದರು ಹೀಗಿರಲು ಒಂದು ದಿವಸ ಒಬ್ಬ ವಿಪ್ರನು ಅಲ್ಲಿಗೆ ಬಂದು ಗುರುಗಳನ್ನು ನೋಡಿ ಭಕ್ತಿಯಿಂದ ಪಾದಗಳಿಗೆ ವಂದಿಸಿ ಸ್ವಾಮಿ, ಅಜ್ಞಾನಸಾಗರದಲ್ಲಿ ಮುಳುಗಿದೆನು. ಬಹುಕಾಲ ತಪಸ್ಸನ್ನು ಮಾಡಿದರೂ ನನ್ನ ಮನಸ್ಸು ಸ್ಥಿರವಾಗಲಿಲ್ಲ ವ್ಯರ್ಥವಾಗಿ ಆಯಾಸಪಟ್ಟೆನು. ಈಗ ತಮ್ಮನ್ನು ನೋಡಿ ಸಂತೋಷವಾಯಿತು ನಾನು ಗುರುವನ್ನು ಸೇವಿಸಲಿಲ್ಲ. ಆದುದರಿಂದ ಮನಸ್ಸು ಸ್ಥಿರವಾಗಲಿಲ್ಲ ನೀವು ಸಂಸಾರವನ್ನು ದಾಟಿಸತಕ್ಕವರಾಗಿದ್ದೀರಿ. ತಾವು ನನಗೆ ಉಪದೇಶಿಸಿರಿ, ಇದರಿಂದ ನನಗೆ ಜ್ಞಾನವುಂಟಾದೀತು ಎಂದನು.

ಇದನ್ನು ಕೇಳಿ ಶ್ರೀಗುರುವು ನಕ್ಕು ಗುರುವಿಲ್ಲದೆ ನೀನು ಹೇಗೆ ಮುನಿಯಾದೀಯೆ ? ಎಂದರು.

ಆಗ ಈ ಬ್ರಾಹ್ಮಣನು ಕಣ್ಣಿನಲ್ಲಿ ನೀರನ್ನು ಸುರಿಸಿ ದುಃಖದಿಂದ ಸ್ವಾಮೀ, ನನಗೊಬ್ಬರು ಗುರುವಿದ್ದರು ಅವರ ವಚನವು ನಿಷ್ಠುರವುಳ್ಳದ್ದಾಗಿತ್ತು. ಅವರು ಒಂದು ದಿನ ನನಗೆ ಅಕೃತ್ಯವಾದ ಸೇವೆಯನ್ನು ಹೇಳಿದರು. ನಿನಗೆ ವೇದಶಾಸ್ತ್ರ ತರ್ಕವ್ಯಾಕರಣ ಶಾಸ್ತ್ರಗಳನ್ನು ಕಲಿಸುವುದಿಲ್ಲ ನಿನ್ನ ಅಂತಃಕರಣವು ಸ್ಥಿರವಾಗಿಲ್ಲ ಎಂದು ಹೇಳಿದರು. ಅಗ ನಾನು ಅವರ ವಚನವನ್ನು ಕೇಳಲಿಲ್ಲ ಅವರು ನನ್ನಲ್ಲಿ ಕೋಪಿಸಿದರು ಬಹುಕಾಲ ಅವರಲ್ಲಿದ್ದೆನು ಅವರು ನಿಷ್ಠುರ ವಾಕ್ಯವನ್ನು ನನಗೆ ಹೇಳಲು ನಾನು ಕೋಪದಿಂದ ಬಂದೆನು ಎಂದನು.

ಈ ಮಾತನ್ನು ಕೇಳಿ ಗುರುವು ನಕ್ಕು ಎಲೈ ವಿಪ್ರನೇ, ನೀನು ಆತ್ಮಘಾತಕಿಯಾಗಿದ್ದೀಯೆ ಒಬ್ಬ ಮನುಷ್ಯನು ತನ್ನ ಮನೆಯಲ್ಲಿದ್ದು ತನ್ನ ಮೈಮೇಲೆಯೇ ಮಲವಿಸರ್ಜನೆಮಾಡಿಕೊಂಡು ಇದು ನನ್ನ ಅದೃಷ್ಟವು ಎಂದು ಹೇಳಿದಂತೆಯೇ ನಿನ್ನ ಅಂತಃಕರಣವು ಇರುವುದು ನಿನ್ನ ಮೂಗನ್ನು ಕೊಯ್ದುಕೊಂಡು ಮುಂದಿರುವವರಿಗೆ ನೀನು ಅಪಶಕುನವನ್ನು ತೋರಿಸುವವನಾಗಿದ್ದೀಯೆ ನಿನ್ನ ಗುಣವನ್ನು ನೀನು ವಿಚಾರಿಸಲಿಲ್ಲ. ನಿನಗ ಜ್ಞಾನವಲ್ಲಿ ? ನೀನು ಗುರುದ್ರೋಹಿಯಾದ ಅಲ್ಪಬುದ್ಧಿಯವನು. ನಿನ್ನ ಗುರುಗಳ ದೋಷಗಳನ್ನು ಸದಾ ಉಚ್ಚರಿಸುತ್ತೀಯೆ ನಿನಗೆ ಜ್ಞಾನವೂ ಸ್ಥಿರಮನಸ್ಸೂ ಹೇಗೆ ಉಂಟಾದೀತು ? ಕಾಮಧೇನು ನಿಂತಿರುವ ಗುರುವು ಹತ್ತಿರದಲ್ಲಿರಲು ಕಾಡಿನಿಂದ ಹಾಲಿಗೇಕೆ ತಿರುಗಬೇಕು ? ನಮ್ಮ ಹತ್ತಿರ ಏಕೆಬಂದೆ ? ಗುರುದ್ರೋಹಿಗೆ ಇಹಪರಸುಖವೂ ಜ್ಞಾನವೂ ಎಲ್ಲಿಬಂದೀತು ? ನೀನು ದಿವಾಂಧನಾಗಿದ್ದೀಯೆ. ಯಾರಿಗೆ ಗುರುವು ಸಂತೋಷವುಳ್ಳವನಾಗುವನೋ ಅವನಿಗೆ ವೇದಶಾಸ್ತ್ರಗಳಲ್ಲಿ ಸರ್ವಜ್ಞತೆಯುಂಟಾಗುವುದು. ಅಷ್ಟಸಿದ್ಧಿಗಳೂ ಆ ತಕ್ಷಣವೇ ಸಿದ್ಧಿಸುವುದು ಎಂದರು

ಇದನ್ನು ಕೇಳಿ ಆತನು ಗುರುಪಾದಂಗಳಲ್ಲಿ ವಂದಿಸಿ, ಕೈಜೋಡಿಸಿ ಜಯ ಜಗದ್ಗುರುವೆ ! ನಿರ್ಗುಣನೇ ! ನಿರ್ವಿಕಾರನೇ ! ಜ್ಞಾನಸಾಗರನೇ ! ನನ್ನನ್ನು ರಕ್ಷಿಸುವವರಾಗಿರಿ. ಮಾಯಾ ಮೋಹಿತನಾದ ನನಗೆ ಹೇಗೆ ಜ್ಞಾನವುಂಟಾದೀತು ? ಗುರುವನ್ನು ಗುರ್ತಿಸುವುದು ಹೇಗೆ ? ಸೇವಿಸು

ವುದು ಹೇಗೆ ? ಮನಸ್ಥೈರ್ಯವು ಯಾವುದರಿಂದಾಗುವುದು ? ಎಂಬು ದನ್ನು ನಿರೂಪಿಸಿರಿ ಎಂದು ವಂದಿಸಿದನು.

ಆಗ ಗುರುವು, ವಿಪ್ರನೇ ಕೇಳು—ಗುರುಸೇವಾ ವಿಧಿಯನ್ನು ಹೇಳು ವೆವು— ಗುರುವೇ ತಾಯಿಯೂ, ತಂದೆಯೂ, ಉಪದೇಶಕರ್ತನೂ, ತ್ರಿಮೂರ್ತಿ ಸ್ವರೂಪನೂ ಎಂದು ತಿಳಿದು ಸೇವಿಸಬೇಕು. ಈ ವಿಷಯ ದಲ್ಲಿ ಮಹಾಭಾರತದ ಆದಿಪರ್ವದಲ್ಲಿನ ಒಂದು ಕಥೆಯನ್ನು ಕೇಳು :- ಪೂರ್ವದಲ್ಲಿ ದ್ವಾರಾವತಿಯಲ್ಲಿ ಧೌಮ್ಯನೆಂಬ ಋಷಿಯು ಇದ್ದನು. ಈತ ನಿಗೆ ಮೂವರು ಶಿಷ್ಯರಿದ್ದರು ಇವರಲ್ಲಿ ಅರುಣಿಪಾಂಚಾಳ, ಬೈದ, ಉಪಮನ್ಯು ಎಂಬ ಮೂವರು ವಿದ್ಯೆಗೋಸ್ಕರ ಗುರುವನ್ನು ಸೇವಿಸು ತ್ತಿದ್ದರು. ಗುರುಗಳು ಶಿಷ್ಯರಿಂದ ಸೇವಿಸಲ್ಪಡುತ್ತಿದ್ದರು. ಧೌಮ್ಯನು ಅರುಣಿಯನ್ನು ಕುರಿತು ಶಿಷ್ಯನೇ, ನಮ್ಮ ಗದ್ದೆಗೆ ಈ ಕಾಡಿನಲ್ಲಿರುವ ಕೆರೆ ಯಿಂದ ತಕ್ಕಷ್ಟು ನೀರನ್ನು ತಿರುಗಿಸಿಕೊಂಡು ಬಾ ಎಂದು ಹೇಳಿ ಭತ್ತ ವನ್ನು ಬಿತ್ತಿದರು ಈ ಶಿಷ್ಯನು ಇವರಂತೆಯೇ ಓಡುತ್ತಾ ಕೆರೆಗೆ ಹೋಗಿ ಹರಿಯುತ್ತಿರುವ ಕಾಲುವೆಯನ್ನು ನೋಡಿದನು ಕಾಲುವೆಯು ತಗ್ಗಿನಲ್ಲಿ ಯೂ, ಗದ್ದೆಯು ಎತ್ತರದಲ್ಲಿಯೂ ಇತ್ತು ಆದುದರಿಂದ ನೀರನ್ನು ತಿರು ಗಿಸಲು ಆ ಕಟ್ಟೆ ಅಡ್ಡ ಹಾಕುವುದು ಎಂದು ಚಿಂತಿಸಿ, ಕಲ್ಲುಗಳನ್ನು ತಂದು ಅಡ್ಡವಾಗಿಟ್ಟನು ಆದರೇನು ? ನೀರು ಆ ಕಲ್ಲುಗಳನ್ನು ತೇಲಿಸಿ ಕೊಂಡು ಹೋಯಿತು ನಾನಾ ವಿಧವಾಗಿ ಪ್ರಯತ್ನಿಸಿದನು ನೀರು ಮೇಲೆ ಬರಲಿಲ್ಲ ಗುರುಗಳ ಗದ್ದೆಗೋಸ್ಕರ ಪ್ರಾಣವನ್ನು ಬಿಡುವೆ ನೆಂದು ಯೋಚಿಸಿ ಗುರುವನ್ನು ಧ್ಯಾನಿಸುತ್ತಾ ಉಪಾಯವೇನೆಂದು ಯೋಚಿಸುತ್ತಿದ್ದನು ಎಷ್ಟು ಕಲ್ಲುಗಳನ್ನು ಅಡ್ಡಗಟ್ಟಿದರೂ ಪ್ರವಾಹ ದಲ್ಲಿ ತೇಲಿಹೋದವು ಆಗ ಆತನು ತನ್ನ ದೇಹವನ್ನೇ ಅಡ್ಡವಾಗಿಟ್ಟು ಮಲಗಿಕೊಂಡನು ಈ ಶಿಷ್ಯನು ಹೀಗೆ ಮಾಡಲು, ಆಗ ನೀರು ಅರ್ಧ ಭಾಗ ಮೇಲೆ ಎಂದು ಗದ್ದೆಗೆ ಹರಿಯುತ್ತಾ ಬಂದಿತು ಅರ್ಧನೀರು ಸಿಕ್ಕಿದ ಕಡೆಗೆ ಹರಿದು ಹೋಗುತ್ತಿತ್ತು ಶಿಷ್ಯನ ದೇಹವು ನೀರಿನಲ್ಲಿ ಮುಳುಗಿತು. ಗದ್ದೆಯೆಲ್ಲಾ ನೀರಿನಿಂದ ತುಂಬಿಹೋಯಿತು

ಆಗ ಧೌಮ್ಯನು, ಅಸ್ತಮಾನವಾದರೂ ಶಿಷ್ಯನು ಬರಲಿಲ್ಲವೆಂದು

ಯೋಚಿಸಿ ಹೊಲಗಲ್ಲಿ ನೀರು ಹರಿಯುತ್ತಿದ್ದುದರಿಂದ ಆನಂದಿಸಿದನು. ಶಿಷ್ಯನು ಬರಲಿಲ್ಲ. ಹೆಬ್ಬಾವು ಅಥವಾ ಹುಲಿಯು ಇವನನ್ನು ತಿಂದಿತೋ ಏನೋ ಎಂದು ಚಿಂತಿಸುತ್ತಾ ಶಿಷ್ಯನೇ ಎಂದು ಕೂಗುತ್ತಾ ಹೋಗಲು, ಆಗ ಶಿಷ್ಯನು ಎದ್ದುಬಂದು ಗುರುವನ್ನು ವಂದಿಸಿದನು ಗುರುವು ಅವನನ್ನಾಲಿಂಗಿಸಿ ಸಮಾಧಾನ ಮಾಡಿ ಶಿಷ್ಯರತ್ನನೇ ನೀನು ವೇದಶಾಸ್ತ್ರ ವ್ಯಾಕರಣಾದಿ ಸಕಲ ವಿದ್ಯೆಗಳಲ್ಲಿಯೂ ಪಾರಂಗತನಾಗೆ ಎಂದು ವರವನ್ನಿತ್ತರು ಕೂಡಲೆ ಆತನು ವಿದ್ಯಾವಂತನೂ, ಜ್ಞಾನಿಯೂ ಆಗಿ ಗುರುಭಕ್ತಿಯುಳ್ಳವನಾದನು ಗುರುವು ಶಿಷ್ಯನೊಡನೆ ಆಶ್ರಮಕ್ಕೆ ಬಂದು ಶಿಷ್ಯನೇ, ನೀನು ಇನ್ನು ಮದುವೆಯನ್ನು ಮಾಡಿಕೊಂಡು ಸುಖವಾಗಿರು ಹೋಗು ಎಂದಾಜ್ಞಾಪಿಸಿದರು. ಈ ಶಿಷ್ಯನು ಗುರ್ವಾಜ್ಞೆಯಂತೆ ತನ್ನ ಊರಿಗೆ ಹೊರಟುಹೋದನು.

ಎರಡನೇ ಶಿಷ್ಯನಾದ ಬೈದನು ಗುರುವನ್ನು ಸೇವಿಸುತ್ತಿದನು ಆಗ ಗುರುವು ಶಿಷ್ಯನೆ, ನೀನು ನಮ್ಮ ಗದ್ದೆಯನ್ನು ಹಗಲು ರಾತ್ರಿಗಳಲ್ಲಿಯೂ ರಕ್ಷಿಸುತ್ತಾ ಇರುವವನಾಗಿ ಧಾನ್ಯವನ್ನು ಮನೆಗೆ ತರಬೇಕು ಎಂದು ಆಜ್ಞಾಪಿಸಿದರು. ಶಿಷ್ಯನು ಅದರಂತೆಯೇ ದಿವಾನಿಶಿಯಲ್ಲಿಯೂ ಕಷ್ಟಪಡುತ್ತಾ ರಾತ್ರಿಯಾಗಲು ತನ್ನ ಗುರುವಿನ ಹತ್ತಿರ ಬಂದನು ಸ್ವಾಮಿಾ! ಧಾನ್ಯವು ಬಹಳವಾಗಿ ಬೆಳೆದು ರಾಶಿ ಮಾಡಲ್ಪಟ್ಟಿದೆ ಎಂದು ವಿಜ್ಞಾಪಿಸಿದನು. ಆಗ ಧೌಮ್ಯನು ಶಿಷ್ಯಶಿರೋಮಣಿಯೇ, ನೀನು ಕಾಡಿನಲ್ಲಿ ಬಹಳವಾಗಿ ಬಳಲಿದೆ. ಧಾನ್ಯವನ್ನು ಮನೆಗೆ ತೆಗಿಸಿಕೊಂಡು ಬಾ ಎಂದು ಒಂದು ಗಾಡಿಯನ್ನು ಕೊಟ್ಟನು ಈ ಗಾಡಿಯನ್ನು ತೆಗೆದುಕೊಂಡು ಹೋಗಿ ಎರಡು ಖಂಡಿ ಧಾನ್ಯವನ್ನು ತುಂಬಿಸಿಕೊಂಡು ಬರುತ್ತಿದ್ದನು ಎತ್ತುಗಳು ಗಾಡಿಯನ್ನು ಎಳೆಯಲಿಲ್ಲ. ಈತನು ಗಾಡಿಯ ನೊಗವನ್ನು ಹಗ್ಗದಿಂದ ತನ್ನ ಕುತ್ತಿಗೆಗೆ ಕಟ್ಟಿಕೊಂಡು ಎಳೆದುಕೊಂಡು ಹೋಗುತ್ತಿದ್ದನು ಎತ್ತುಗಳು ಕೆಸರಿನಲ್ಲಿ ಸಿಕ್ಕಿದುವು ತನ್ನಬಲದಿಂದ ಗಾಡಿಯನ್ನೆಳೆಯುತ್ತಿದ್ದನು. ಆಗ ಇವನಿಗೆ ಉರುಳು ಹಾಕಿದಂತಾಗಿ ಪ್ರಾಣಬಿಡುವಂತಾದನು ಇಷ್ಟರಲ್ಲಿಯೇ ಧೌಮ್ಯಮುನಿಯು ಅಲ್ಲಿಗೆ ಬಂದ ಶಿಷ್ಯನನ್ನು ನೋಡಿ ದಯೆಯಿಂದ ನೀನು ವೇದಶಾಸ್ತ್ರ ಸಂಪನ್ನನಾಗೆಂದು ವರವನ್ನಿತ್ತರು. ಆ ಶಿಷ್ಯನು ಗುರುಗಳ ಆಜ್ಞೆಯನ್ನು ಹೊಂದಿ ತನ್ನ ಊರಿಗೆ ಹೋದನು.

ಮೂರನೇ ಶಿಷ್ಯನಾದ ಉಪಮನ್ಯುವು ಗುರುಸೇವೆಯನ್ನು ಮಾಡು ತ್ತಾ ಇದ್ದನು ಈತನು ಆಹಾರವನ್ನು ಹೆಚ್ಚಾಗಿ ತೆಗೆದುಕೊಳ್ಳುತ್ತಿದ್ದನು. ಅದುದರಿಂದ ಇವನ ವಿದ್ಯೆಯು ಸ್ಥಿರವಾಗಲಿಲ್ಲ. ಈ ವಿಚಾರವನ್ನು ತಿಳಿದು ಧೌಮ್ಯನು ಉಪಮನ್ಯುವೆ, ನೀನು ನಿತ್ಯವೂ ಕಾಡಿಗೆ ದನಗಳನ್ನು ತೆಗೆದು ಕೊಂಡು ಹೋಗಿ ಮೇಯಿಸಿಕೊಂಡು ಬಾ ಎಂದು ನೇಮಿಸಿದನು. ಇದ ರಂತೆಯೇ ಆತನು ಬಹುಕಾಲ ದನಗಳನ್ನು ಮೇಯಿಸುತ್ತಿದ್ದನು. ಹಸಿವಿನಿಂದ ಈತನು ಮನೆಗೆ ಬೇಗ ಬರುತ್ತಾ ಇರಲು, ಗುರುವು ಶಿಷ್ಯನೇ ಹೀಗೆ ಬಹಳ ಮುಂಚಿತವಾಗಿ ಏಕೆ ಬಂದೆ? ಎಂದು ಕೋಪಿಸಿ ನೀನು ಇನ್ನುಮೇಲೆ ಅಸ್ತಮಾನವಾಗುವವರೆಗೂ ದನಗಳನ್ನು ಮೇಯಿಸು ಎಂದನು ಆ ಶಿಷ್ಯನು ಅದರಂತೆಯೇ ಕಾಡಿನಲ್ಲಿ ದನಗಳನ್ನು ಮೇಯಿಸಿ ಹಸಿವಿನಿಂದ ನದಿಯಲ್ಲಿ ಸ್ನಾನಮಾಡಿ ಆ ನದೀ ತೀರದಲ್ಲಿ ದನಗಳು ಮೇಯುತ್ತಿರಲು ಅಲ್ಲಿರುವ ನಾಲ್ಕು ಬ್ರಾಹ್ಮಣರ ಮನೆಗೆ ಹೋಗಿ ಭಿಕ್ಷೆ ಯನ್ನು ಬೇಡಿ ಊಟಮಾಡಿ ಮನೆಗೆ ಬರುತ್ತಿದ್ದನು

ಹೀಗಿರಲು ಒಂದು ದಿನ ಗುರುವು ಶಿಷ್ಯನೇ, ನೀನು ಉಪವಾಸ ಮಾಡಿದರೂ ನಿನ್ನ ದೇಹವು ಪುಷ್ಟಿಯಾಗಿರಲು ಕಾರಣವೇನು? ಎಂದು ಕೇಳಿದರು

ಆಗ ಉಪಮನ್ಯುವು ಸ್ವಾಮಿ, ನಾನು ಈ ನದೀ ತೀರದಲ್ಲಿರುವ ಬ್ರಾಹ್ಮಣರ ಮನೆಗಳಲ್ಲಿ ಭಿಕ್ಷೆಬೇಡಿ ಊಟ ಮಾಡಿ ದನಗಳನ್ನು ಹೊಡೆದು ಕೊಂಡು ಮನೆಗೆ ಬರುತ್ತಿರುವೆನು ಎಂದನು

ಆಗ ಗುರುವು ಶಿಷ್ಯನೇ, ನಮ್ಮನ್ನು ಬಿಟ್ಟು ನೀನು ಊಟಮಾಡಿ ದೆಯಾ? ನೀನು ಭಿಕ್ಷೆಯನ್ನು ಬೇಡಿ ಮನೆಗೆ ತಂದುಕೊಡು ಎಂದು ಹೇಳಿದರು

ಶಿಷ್ಯನು ದನಗಳನ್ನು ಹೊಡೆದುಕೊಂಡು ಹೋಗಿ ನಿತ್ಯದಂತೆ ಭಿಕ್ಷೆ ಬೇಡಿ ತಂದು ಗುರುಗಳಿಗೆ ಕೊಟ್ಟು ಪುನಃ ಹೋಗಿ ಭಿಕ್ಷೆ ಬೇಡಿ ಊಟ ಮಾಡುತ್ತಿದ್ದನು. ಹೀಗೆ ಎರಡು ಸಾರಿ ಭಿಕ್ಷೆ ಬೇಡಿ ಕಾಲ ಕಳೆಯುತ್ತಿ ದ್ದನು. ಬಳಿಕ ಕೆಲವುಕಾಲದಮೇಲೆ ಗುರುವು ಶಿಷ್ಯನನ್ನು ವಿಚಾರಿಸಲು ಈತನು ಸ್ವಾಮಿ, ಮೊದಲನೇ ಸಾರಿ ಭಿಕ್ಷೆಯನ್ನು ಬೇಡಿ ತಂದು ತಮಗೆ

ಕೊಟ್ಟು ಎರಡನೇ ಸಾರಿ ಭಿಕ್ಷೆಯನ್ನು ತಂದು ಊಟಮಾಡುತ್ತಿರುವೆನೆಂದನು. ಇದನ್ನು ಕೇಳಿ ಧೌಮ್ಯನು ಶಿಷ್ಯನೇ, ಎರಡನೇಭಿಕ್ಷೆಯನ್ನೂ ನನಗೆ ತಂದುಕೊಡೆಂದು ಕೋಪದಿಂದ ಹೇಳಿದರು. ಈ ನಿರೂಪದಂತೆಯೇ ಈತನು ಎರಡು ಸಾರಿಯ ಭಿಕ್ಷೆಯನ್ನೂ ಗುರುಗಳಿಗೆ ತಂದೊಪ್ಪಿಸಿ ದನಗಳನ್ನು ಕಾಡಿನಲ್ಲಿ ಮೇಯಿಸುತ್ತಾ, ಕ್ಷುಧಾಕ್ರಾಂತನಾಗಿ ಕರುವು ಹಸುವಿನ ಮೊಲೆಯನ್ನು ತಿನ್ನುವುದನ್ನು ನೋಡಿದನು. ಕರುವು ಮೊಲೆಯನ್ನು ತಿನ್ನುತ್ತಿರಲು ಆ ಕರುವಿನ ಬಾಯಿಯಿಂದ ಬಿದ್ದ ಹಾಲು ಭೂಮಿಯಲ್ಲಿ ಹರಿಯುತ್ತಿತ್ತು. ಇವನು ಅದರ ಹತ್ತಿರ ಹೋಗಿ ಎರಡು ಕೈಗಳನ್ನೂ ಹಿಡಿದು ಆ ಕೆಚ್ಚಲಿನಿಂದ ಬೀಳುವ ಹಾಲನ್ನು ಹಿಡಿದು ಕುಡಿಯುತ್ತ ತೃಪ್ತಿಯುಳ್ಳವನಾಗಿದ್ದನು. ಈ ವಿಷಯವನ್ನು ಈತನು ಹೇಳಲು ಗುರುವು ಶಿಷ್ಯನೇ, ಎಂಜಲು ಹಾಲನ್ನು ಕುಡಿಯಬೇಡ, ಬುದ್ಧಿಯು ಕೆಡುವುದು ಎಂದರು. ಶಿಷ್ಯನು ಎಂದಿನಂತೆ ದನಗಳನ್ನು ಮೇಯಿಸುತ್ತಿದ್ದನು. ಬಂದು ಮರದಿಂದ ಹಾಲು ಹರಿಯುತ್ತಿರುವುದನ್ನು ನೋಡಿ ಈತನು ಹಸಿವೆಯಿಂದ ಎಂಜಲಲ್ಲವೆಂದು ತಿಳಿದು ಕುಡಿದನು. ಇದರಿಂದ ಅವನ ಎರಡು ಕಣ್ಣುಗಳೂ ಹೋದುವು. ಕಾಡಿನಲ್ಲಿ ತಿರುಗಿದನು. ದನಗಳು ಕಾಣಲಿಲ್ಲ. ದನಗಳನ್ನು ಹುಡುಕುತ್ತಾ ಹೋಗಿ ಬಾವಿಯಲ್ಲಿ ಬಿದ್ದನು. ಸೂರ್ಯಾಸ್ತವಾಯಿತು. ಶಿಷ್ಯನು ಬಾರದಿರಲು ಧೌಮ್ಯನು ಚಿಂತಿಸುತ್ತಾ ಇವನನ್ನು ಹುಡುಕುತ್ತಾ ಕಾಡಿಗೆ ಹೋಗಿ ಮೇಯುವ ದನಗಳನ್ನು ನೋಡಲು ಶಿಷ್ಯನು ಮಾತ್ರ ಇರಲಿಲ್ಲ. ಗಟ್ಟಿಯಾಗಿ ಕೂಗಿದನು. ಶಿಷ್ಯನು ಆಗ ಪ್ರತಿಧ್ವನಿ ಕೊಟ್ಟನು. ಧೌಮ್ಯನಲ್ಲಿಗೆ ಬಂದು ಇವನ ಸಂಗತಿಯನ್ನು ಕೇಳಿದನು. ಆಗ ಧೌಮ್ಯನು ಇದನ್ನು ಕೇಳಿ ದಯೆಯಿಂದ ಅಶ್ವಿನೀ ದೇವತೆಗಳನ್ನು ಧ್ಯಾನಿಸೆಂದನುಜ್ಞೆಯನ್ನಿತ್ತರು. ಆತನದರಂತೆಯೇ ದೇವವೈದ್ಯರನ್ನು ಧ್ಯಾನಿಸಲು ಅವನ ಕಣ್ಣುಗಳು ಬಂದುವು. ಗುರುಗಳ ಹತ್ತಿರ ಬಂದು ವಂದಿಸಿ ಭಕ್ತಿಯಿಂದ ಸ್ತುತಿಸಿದನು.

ಆಗ ಗುರುವು ಸಂತುಷ್ಟನಾಗಿ ಶಿಷ್ಯನನ್ನು ತಬ್ಬಿಕೊಂಡು ಶಿಷ್ಯಶಿರೋಮಣಿಯೇ, ನಿನ್ನ ಭಕ್ತಿಗೆ ಮೆಚ್ಚಿದೆನೆಂದು ಅವನ ತಲೆಯಮೇಲೆ ಕೈಯನ್ನಿಟ್ಟರು. ವೇದಶಾಸ್ತ್ರಗಳು ಆ ಕ್ಷಣವೇ ಆತನಿಗೆ ಬಂದುವು. ಆತನು ಗುರುಗಳ ಅನುಜ್ಞೆ ಹೊಂದಿದನು. ನಿನಗೆ ಕೀರ್ತಿಯುಂಟಾಗುವುದು.

ನಿನಗೆ ಬಹುಜನ ಶಿಷ್ಯರಾಗುವರು. ಅವರಲ್ಲಿ ಉದಂಕನೆಂಬ ಶಿಷ್ಯನು ನಿನಗೆ ಸಿಕ್ಕುವನು. ಅವನು ನಿನಗೆ ಗುರುದಕ್ಷಿಣೆಗಾಗಿ ಮಹಾಶೇಷನಿಂದ ಕುಂಡಲಗಳನ್ನು ತಂದಾನು! ಅವನೇ ಜನಮೇಜಯನಿಗೆ ಸರ್ಪಯಾಗ ಮಾಡುವ ಹಾಗೆ ಉಪದೇಶಿಸುವನು. ಆಗ ಜನಮೇಜಯನು ಸರ್ಪಯಾಗಮಾಡುವನು. ಇಂದ್ರಸಹಿತನಾದ ತಕ್ಷಕನನ್ನು ಕರೆಯಿಸುವನು ಎಂದರು. ಗುರುಕೃಪೆಯು ಶಕ್ತಿಯು ಹೀಗಿರುವುದು. ಗುರುದ್ವೇಷಿಗೆ ಪರಲೋಕವಿಲ್ಲ. ಗುರುದ್ರೋಹದಿಂದ ಪಾಪರಾಶಿಯುಂಟಾಗುವುದು ಮತ್ತು ಕುಂಭೀಪಾಕ ನರಕ ಉಂಟಾದೀತು. ಗುರುಗಳು ಸಂತುಷ್ಟರಾದರೆ ವೇದಶಾಸ್ತ್ರಗಳ ಜ್ಞಾನವು ಆ ಕ್ಷಣವೇ ಸಿದ್ಧಿಸುವುದು. ಇದನ್ನು ತಿಳಿಯದೆ ವ್ಯರ್ಥವಾಗಿ ಉಪದ್ರವನ್ನು ಹೊಂದಿದೆ. ತಿರುಗಿ ನಿನ್ನ ಗುರುವಿನ ಹತ್ತಿರಕ್ಕೆ ಹೋಗು. ಅವರು ನಿನ್ನನ್ನು ಉದ್ಧರಿಸುವರು. ಅವರ ಮನಸ್ಸನ್ನು ಸಂತೋಷಗೊಳಿಸು, ಹೋಗೆಂದು ಆಜ್ಞಾಪಿಸಿದರು.

ಆತನು ಗುರು ನಿರೂಪದಂತೆ ತನ್ನ ಗುರುವಿನ ಹತ್ತಿರ ಹೋಗಿ ವಂದಿಸಿ, ಜಯಗುರುಮೂರ್ತಿಯೇ! ನನಗೆ ತತ್ವಬೋಧೆ ಮಾಡಬೇಕು. ನಾನು ಗುರುದ್ರೋಹಿಯು, ನಿಜ ತಪ್ಪು ಮಾಡಿದೆನು. ತಮ್ಮ ಚಿತ್ತಕ್ಕೆ ದುಃಖವನ್ನಿತ್ತೆನು. ಸುವರ್ಣಾದಿ ಲೋಹಗಳು ಬೇರೆಬೇರೆಯಾದರೂ ಬೆರಸಿದರೆ ಎಲ್ಲವೂ ಬೆರೆಯುವುವು. ಮುತ್ತುಗಳು ಮಾತ್ರ ಅದರೊಂದಿಗೆ ಸೇರಲಾರದು. ಅಂತಃಕರಣದ ಭೇದದಿಂದ ಕಷ್ಟಪಟ್ಟೆನು. ಇಂಥಾ ದ್ರೋಹಿಯು ಬದುಕಿ ಪ್ರಯೋಜನವೇನು? ಜೀವವನ್ನು ತಮ್ಮೆದುರಿನಲ್ಲಿಯೇ ಬಿಡುವೆನು ಎಂದು ವಿಜ್ಞಾಪಿಸಿ ಸಂತೋಷದಿಂದ ವೈರಾಗ್ಯದಿಂದ ಪ್ರಾಣವನ್ನು ಬಿಡಲು ನಿಶ್ಚಯಿಸಿದನು. ಈ ವಿಪ್ರನು ಹೀಗೆ ಪಶ್ಚಾತ್ತಾಪವುಳ್ಳವನಾಗಿ ಬೆಂಕಿಯು ಬಿದ್ದ ಹುಲ್ಲು ಸುಟ್ಟಂತೆ ನಿರ್ಮಲಚಿತ್ತನಾದನು. ಹತ್ತಿಯ ರಾಶಿಗೆ ಬೆಂಕಿಯು ಬಿದ್ದಂತೆ ಪಾಪದಿಂದ ಅನುತಪ್ತನಾದನು. ನೂರುಜನ್ಮದ ಪಾಪಗಳನ್ನು ಕಳೆದುಕೊಂಡು ಆತನು ಪ್ರಾಣ ಬಿಡಲು ಹೊರಟನು.

ಆಗ ಗುರುವು ಶಿಷ್ಯನನ್ನು ನೋಡಿ ಸಂತೈಸಿ ಎಲೈ ಶಿಷ್ಯನೇ, ಚಿಂತಿಸದಿರು. ನಿನ್ನ ಪಾಪವು ಹೋಯಿತು. ನಿನಗೆ ವೈರಾಗ್ಯವುಂಟಾ

ದುದರಿಂದ ನಿನ್ನ ದುಷ್ಕೃತವು ಸುಟ್ಟುಹೋಯಿತು ಏಕಚಿತ್ತದಿಂದ ಗುರುಗಳ ಚರಣದಲ್ಲಿ ಭಕ್ತಿಯಿಟ್ಟುದರಿಂದ ಈ ಫಲವುಂಟಾಯಿತು ಎಂದರು

ಆಗ ಆತನು ಗುರುಗಳ ಪಾದಗಳಿಗೆ ವಂದಿಸಿ ಎಲೈ ಜಗದ್ಗುರುವೇ ಜಯಮೂರ್ತಿಯೇ, ನಿಮ್ಮ ದಯೆಯುಂಟಾದರೆ ನನಗೆ ಪಾಪವೆಲ್ಲಿಯದು? ಸೂರ್ಯೋದಯವಾಗಲು ಕತ್ತಲೆಯು ಇರುವುದೇ ? ಎಂದೀಪರಿ ಭಕ್ತಿಯಿಂದ ಸ್ತುತಿಸಿ ರೋಮಾಂಚದಿಂದ ಕೂಡಿದ ಗದ್ಗದ ಕಂಠವುಳ್ಳವನಾಗಿ ನಿರ್ಮಲ ಮನಸ್ಸಿನಿಂದ ಗುರುಚರಣಂಗಳಿಗೆ ತಲೆಯನ್ನಿಟ್ಟು ವಂದಿಸಿ ರಕ್ಷಿಸೆಂದು ವಿಜ್ಞಾಪಿಸಿದನು

ಗುರುವು ಆತನ ವೈರಾಗ್ಯ ಭಕ್ತಿಗಳನ್ನು ನೋಡಿ ಅವನ ತಲೆಯ ಮೇಲೆ ಕೈಯನ್ನಿಡಲು ಆತನಿಗೆ ಜ್ಞಾನವುಂಟಾಗಿ ವೇದಶಾಸ್ತ್ರಗಳ ಜ್ಞಾನ ಉಂಟಾಯಿತು ಗುರುವು ಪ್ರಸನ್ನನಾಗಲು ಆ ವಿಪ್ರನಿಗೆ ಕೊರತೆಯೇನು ? ಸ್ಪರ್ಶಮಣಿಯು ತಗಲಲು ಶುದ್ಧ ಚಿನ್ನವಾಗುವಂತೆ ಅವನಿಗೆ ಜ್ಞಾನವುಂಟಾಯಿತು ಆನಂದದಿಂದ ಆ ವಿಪ್ರನನ್ನು ಕುರಿತು ಗುರುವು ನಮ್ಮ ಮಾತಿನಂತೆ ನೀನು ಬೇಗನೆ ನಿನ್ನ ಗುರುಗಳ ಹತ್ತಿರಕ್ಕೆ ಹೋಗಿ ಅವರನ್ನು ವಂದಿಸು ಅವರಿಗೆ ಸಂತೋಷ ಉಂಟಾದೀತು. ಇದು ಸತ್ಯವು. ಎಂದನುಜ್ಞೆ ಕೊಡಲು ಆ ವಿಪ್ರನು ವೇಗದಿಂದ ತನ್ನ ಗುರುವಿನ ಹತ್ತಿರಕ್ಕೆ ಹೋದನು ಈರೀತಿಯಿಂದ ಶ್ರೀಗುರುವು ಆ ವಿಪ್ರನಿಗೆ ಅನುಜ್ಞೆಯನ್ನಿತ್ತು ಭುವನೇಶ್ವರಿಯ ಸನ್ನಿಧಿಯಾದ ಭಿಲ್ಲವಾಡಿಗೆ ಬಂದರು. ಕೃಷ್ಣಾತೀರದ ಪಶ್ಚಿಮತೀರದಲ್ಲಿರುವ ಒಂದು ಔದುಂಬರವೃಕ್ಷದಲ್ಲಿ ಗುಪ್ತರಾಗಿ ನಿಂತರು ಎಂದು ಸಿದ್ಧರು ಹೇಳಿದರು ಎಂದು ಸರಸ್ವತೀ ಗಂಗಾಧರನು ಗುರುಚರಿತ್ರೆಯನ್ನು ವಿಸ್ತಾರವಾಗಿ ಹೇಳಿದನು. ಇದನ್ನು ಕೇಳಲು ಸಕಲೇಷ್ಟಗಳೂ ಆತನಿಗೆ ಉಂಟಾಗುವುವು. ಶ್ರೀಗುರುಗಳ ತತ್ವಬೋಧೆಯಿಂದ ಆ ಶಿಷ್ಯನು ಧನ್ಯನಾಗಿ ಸರ್ವ ವಿದ್ಯೆಗಳನ್ನೂ ಹೊಂದಿದನು. ಎಂಬಲ್ಲಿಗೆ ಹದಿನಾರನೇ ಅಧ್ಯಾಯವು ಸಂಪೂರ್ಣವಾದುದು.

|| ಶ್ರೀ ಗು ರು ದೇ ನ ಮಃ ||

# ೧೭ನೆಯ ಅಧ್ಯಾಯ.

ಸಿದ್ಧರು ಅಯ್ಯಾ ಶಿಷ್ಯನೇ, ನಿನ್ನ ಚಿತ್ತವು ಗುರುಚರಣದಲ್ಲಿ ಲೀನವಾಗಿದೆ ಮಳೆಯು ಬರುವ ಮೊದಲು ಸೂಚನೆಗಾಗಿ ಗಾಳಿಯು ಬರುವಂತೆ ಈ ಚರಿತ್ರೆಯನ್ನು ಕೇಳಲು ದೈನ್ಯವು ಹೋಗುವುದು ಇದು ಕಾಮಧೇನುವಿಗೆ ಸಮಾನವು ಇದನ್ನು ವಿಸ್ತಾರವಾಗಿ ಹೇಳುವೆನು ಕೇಳು

ಶ್ರೀ ಗುರವು ಕೃಷ್ಣಾ ತೀರದಲ್ಲಿ ಔದುಂಬರ ತರುವಿನ ಹತ್ತಿರ ಗುಪ್ತವಾಗಿದ್ದರು ಅಲ್ಲಿ ಚಾತುರ್ಮಾಸ್ಯವು ಕಳೆಯಿತು ಅದು ಸಿದ್ಧಸ್ಥಾನವೆಂಬ ಮಹಿಮೆಯು ಪ್ರಸಿದ್ಧವಾಯಿತು. ಗುರುವು ಗುಪ್ತವಾಗಿದ್ದುದಕ್ಕೂ ಭಿಕ್ಷೆಗೆ ಹೋದುದಕ್ಕೂ ಕಾರಣವನ್ನು ಕೇಳು ದಯಾಮಯರಾದ ದತ್ತಾತ್ರೇಯರು ಭಕ್ತರ ಅನುಗ್ರಹಕ್ಕಾಗಿ ಭಿಕ್ಷುರೂಪದಿಂದ ತೀರ್ಥಯಾತ್ರೆ ಮಾಡುತ್ತಿರುವರು ಶ್ರೇಷ್ಠವಾದ ತೀರ್ಥಗಳಲ್ಲಿ ಪರೋಪಕಾರಕ್ಕಾಗಿ ಪ್ರಕಟರಾಗುವರು. ಸೂರ್ಯನನ್ನು ಮೇಘವು ಮುಚ್ಚಲು ಅವನ ತೇಜಸ್ಸು ಮುಚ್ಚೀತೇ? ಕಸ್ತೂರಿಯನ್ನು ಗುಪ್ತವಾಗಿಟ್ಟರೆ ಅದರ ಸುಗಂಧವು ಗುಪ್ತವಾಗಿದ್ದೀತೆ? ಕಲ್ಪತರುವು ಇಷ್ಟವನ್ನೀಯುವಂತೆ ಗುರುಗಳು ಪ್ರಕಟರಾಗುವರು. ಇದನ್ನು ಏಕಚಿತ್ತದಿಂದ ಕೇಳು ಕರವೀರಕ್ಷೇತ್ರದಲ್ಲಿ ಒಬ್ಬ ವಿಪ್ರನು ವೇದಶಾಸ್ತ್ರಪುರಾಣಗಳನ್ನು ಬಲ್ಲವನಾಗಿ ನಿತ್ಯಕರ್ಮವನ್ನಾಚರಿಸುತ್ತಾ ಇದ್ದನು. ಈತನಿಗೆ ಮಂದಮತಿಯಾದೊಬ್ಬ ಕುವರನು ಹುಟ್ಟಿದನು. ಆಗ ಇವನ ತಾಯಿತಂದೆಗಳು ಮೃತರಾದರು. ಇವನಿಗೆ ಏಳನೇ ವಯಸ್ಸಿನಲ್ಲಿ ಉಪನಯನವಾಯಿತು. ಸಂಧ್ಯಾವಂದನೆಯೂ ಗಾಯತ್ರಿಯೂ ಮಂತ್ರಗಳೂ ಬರಲಿಲ್ಲ ಮೂರ್ಖನಾದ ಇವನಿಗೆ ವೇದಾಭ್ಯಾಸವೆಲ್ಲಿ? ಪಶುವಿನಂತಿರುತ್ತಿದ್ದನು ಇವನು ವೇದಾಭ್ಯಾಸ ಮಾಡುವಲ್ಲಿಗೆ ಹೋಗಿ ಅಲ್ಲಿ ಕೆಲವು ಮಂತ್ರಗಳನ್ನು ಕಲಿತನು. ಆದರೂ ಅವು ಮರೆತುಹೋದುವು ಆ ಗ್ರಾಮದ ವಿದ್ವಾಂಸರು, ಎಲೈ ಹುಡುಗನೇ, ವಿಪ್ರಜನ್ಮದಲ್ಲಿ ಹುಟ್ಟಿದ ನಿನಗೆ ವಿದ್ಯೆಯಿಲ್ಲ. ನಿನ್ನ ತಂದೆಯು ಜ್ಞಾನಿಯೂ

ಶಾಸ್ತ್ರನಿಪುಣನೂ ಆಗಿದ್ದನು ಅಂತಹ ಮನೆತನದಲ್ಲಿ ಕಲ್ಲಿನಂತೇಕೆ ಹುಟ್ಟಿದೆ? ನಿನ್ನಬಾಳು ಸುಡಲಿ ತಂದೆಯ ಹೆಸರಿಗೆ ನೀನು ನ್ಯೂನತೆಯನ್ನು ತಂದೆ. ಹೊಟ್ಟೆಗೆ ಕಲ್ಲನ್ನು ಕಟ್ಟಿಕೊಂಡು ಕೆರೆಗೆಹಾರಿ ಸಾಯಿ! ವ್ಯರ್ಥವಾಗಿ ಹುಟ್ಟಿ ಹಂದಿಯಂತೆ ಆಚಾರಹೀನನಾಗಿದ್ದೀಯೆ! ನಿನಗೆ ಪರದಲ್ಲಿ ನರಕ ಉಂಟಾದೀತು! ವಿದ್ಯಾವಂತನೇ ಶ್ರೇಷ್ಠನು ವಿದ್ಯೆಯೇ ಚಿಂತಾಮಣಿ ಯಂತಿರುವುದು ಯಾರ ಹೃದಯಗಳಲ್ಲಿ ವಿದ್ಯೆಯಿರುವುದೋ ಅವರಿಗೆ ಸಕಲ ಸುಖಗಳೂ ಕೀರ್ತಿಯೂ ಸಂಪತ್ತೂ ಉಂಟಾಗಿ ಎಲ್ಲರಲ್ಲಿಯೂ ಅವನೇ ಪೂಜ್ಯನಾಗುವನು ಅವನು ಒಂದು ಕಾಲದಲ್ಲಿ ವಿದೇಶಕ್ಕೆ ಹೋದರೆ ಸ್ವದೇಶದವನಂತೆ ಪೂಜ್ಯನಾಗುವನು ಮನುಷ್ಯನು ವಯಸ್ಸಿನಲ್ಲಿ ದೊಡ್ಡವ ನಾದರೂ ವಿದ್ಯೆಯಿಲ್ಲದಿದ್ದರೆ ಪೂಜ್ಯನಾಗಲಾರನು ಸಹೋದರರಿಲ್ಲದಿದ್ದರೂ ವಿದ್ಯೆಯೇ ಅವರಿಗೆ ಸಹೋದರನಂತಿರುವುದು ಸಕಲರಲ್ಲಿಯೂ ಅವನೇ ವಂದ್ಯನಾಗುವನು ವಿದ್ಯೆಯ ಮಹಿಮೆಯು ಈರೀತಿಯಾಗಿರುವುದು ವಿದ್ಯೆಯುಳ್ಳವನು ಜ್ಞಾನಿಯಾಗಿಯೂ ಪೂಜ್ಯನಾಗಿಯೂ ಇರುವನು. ಧನ ವಿಲ್ಲದವನ ಮನೆಗೆ ವಿದ್ಯೆಯೇ ಧನವಾಗಿರುವುದು ಎಂದು ಹೇಳಿದರು

ಆಗ ಆ ಬ್ರಹ್ಮಚಾರಿಯು ಅವರನ್ನು ವಂದಿಸಿ ಸ್ವಾಮಿ, ನೀವು ನನಗೆ ವಿದ್ಯಾಭ್ಯಾಸಮಾಡೆಂದು ಬೋಧಿಸಿದಿರಿ ಜನ್ಮಾಂತರದಲ್ಲಿ ನಾನು ವಿದ್ಯಾದಾನಮಾಡಲಿಲ್ಲ ಆದುದರಿಂದಲೇ ವಿದ್ಯೆಯು ನನಗೆ ಬರುವುದಿಲ್ಲ. ಏನುಮಾಡಲಿ? ಇದಕ್ಕೆ ಉಪಾಯವೇನು? ಎಂದು ಕೇಳಿದನು.

ಆಗ ವಿಪ್ರನು ನಕ್ಕು, ಎಲೈ ನಿನಗೆ ಮುಂದಿನ ಜನ್ಮದಲ್ಲಿ ವಿದ್ಯೆಯು ಬರುವುದು. ನಿನಗೆ ವಿದ್ಯಾಭ್ಯಾಸವೆಲ್ಲಿಯದು? ನೀನು ಪಶುಸಮಾನನು. ಕುಲನಾಶಕನೇ, ಭಿಕ್ಷೆಯನ್ನು ಬೇಡಿ ಹೊಟ್ಟೆಹೊರೆಯುತ್ತೀಯೆ ಎಂದೀ ಪರಿಯಿಂದ ನಿಂದಿಸಲು, ಈ ಬ್ರಹ್ಮಚಾರಿಯು ವೈರಾಗ್ಯಹೊಂದಿ ಖಿನ್ನನಾಗಿ ಎಲ್ಲರೂ ತನ್ನನ್ನು ನಿಂದಿಸುವರು. ಇನ್ನು ಬದುಕಿ ಫಲವೇನು? ಪಶುವಿ ನಂತೆ ಬುದ್ಧಿಹೀನನಾದೆನು ಎನ್ನುತ್ತಾ ಈ ಭಿಲ್ಲವಾಡಿಗೆ ಬಂದು ಉಪ ವಾಸದಿಂದ ಜಗನ್ಮಾತೆಯಾದ ಭುವನೇಶ್ವರಿಯ ದರ್ಶನ ಮಾಡಿದನು. ಸ್ನಾನ ಸಂಧ್ಯಾದಿಗಳನ್ನು ಮಾಡದೆ ಆ ದೇವಾಲಯ ದ್ವಾರದಲ್ಲಿ ಮೂರು ದಿನಗಳು ಅನ್ನೋದಕಗಳನ್ನು ಬಿಟ್ಟು ದುಃಖಿಸುತ್ತಾ ಕುಳಿತಿದ್ದನು.

ಅಂಬಾಭವಾನಿಯೇ ನನ್ನನ್ನು ಏಕೆ ಉಪೇಕ್ಷಿಸುತ್ತೀಯೆ? ಎಂದು ಕೂಗುತ್ತಾ ಬಲವಾದ ಶಸ್ತ್ರವನ್ನು ತೆಗೆದುಕೊಂಡು ತನ್ನ ನಾಲಿಗೆಯನ್ನು ಕತ್ತರಿಸಿ ದೇವಿಯ ಪಾದಕ್ಕೆಸೆದನು. ಮತ್ತು ಇನ್ನೂ ಉಪೇಕ್ಷಿಸುವಿಯಾ? ನನ್ನ ತಲೆಯನ್ನು ಕತ್ತರಿಸಿ ಅರ್ಪಿಸುವೆನು ಎಂದು ಯೋಚಿಸಿ ಆ ರಾತ್ರಿ ಮಲಗಿ ನಿದ್ರಿಸಿರಲು ಅವನಿಗೆ ಸ್ವಪ್ನವಾಯಿತು. "ಎಲೈ ಬ್ರಹ್ಮಚಾರಿಯೆ, ನನ್ನಮೇಲೆ ಆಕ್ರೋಶಪಡುವಿಯೇಕೆ? ನೀನು ಕೃಷ್ಣಾನದಿಯ ಪಶ್ಚಿಮ ತೀರದಲ್ಲಿ ಬಂದು ಔದುಂಬರ ತರುವಿನ ಮೂಲದಲ್ಲಿ ಅವತಾರ ಪುರುಷನಾದ ತಪಸ್ವಿಯೊಬ್ಬನಿರುವನು. ಅವನ ಹತ್ತಿರಕ್ಕೆ ಹೋಗು. ಅವನು ನಿನ್ನ ಇಷ್ಟವನ್ನು ಪೂರ್ಣಮಾಡುವನು ಎಂದ" ಸ್ವಪ್ನವಾಯಿತು. ಇವನು ಎಚ್ಚರ ಹೊಂದಿ, ಇದು ಹೊಸ ಸಂಗತಿಯೆಂದು ತಿಳಿದು ಓಡುತ್ತಾ ಅಲ್ಲಿಗೆ ಹೋಗಿ ಗುರುಗಳನ್ನು ಕಂಡು ಚರಣಗಳಲ್ಲಿ ತಲೆಯನ್ನಿಟ್ಟು ಸ್ತೋತ್ರಮಾಡಿದನು.

ಆಗ ಶ್ರೀ ಗುರುವು ಸಂತೋಷಿಸಿ ಅವನನ್ನು ಸಮಾಧಾನಮಾಡಿ ಅವನ ತಲೆಯಮೇಲೆ ಅಭಯ ಹಸ್ತವನ್ನಿಡಲು ಈತನಿಗೆ ಜ್ಞಾನವುಂಟಾಗಿ ಆಗಲೇ ನಾಲಿಗೆಯು ಬಂದಿತು. ಮಾನಸ ಸರಸ್ಸಿಗೆ ಹೋದ ಕಾಗೆಯು ಹಂಸವಾಗುವಂತೆಯೂ, ಚಿಂತಾಮಣಿಯು ತಗಲಿದ ಲೋಹವು ಚಿನ್ನವಾಗುವಂತೆಯೂ, ಗುರುವು ಸ್ಪರ್ಶಮಾಡಲು ವೇದಶಾಸ್ತ್ರ, ತರ್ಕ, ಭಾಷ್ಯ ಮುಂತಾದ ವಿದ್ಯೆಗಳೆಲ್ಲವೂ ಅವನಿಗೆ ಬಂದುವು. ಗುರುಮಹಿಮೆಯು ಹೀಗಿದೆ. ಶ್ರೀ ಗುರುವು ಎಲ್ಲಿದ್ದರೋ ಅಲ್ಲಿ ಮಹಿಮೆಯು ಪ್ರಕಟವಾಗುತ್ತಿತ್ತು. ಈ ಚರಿತ್ರೆಯನ್ನು ಕೇಳಲು ಇಷ್ಟಾರ್ಥಗಳು ಸಿದ್ಧಿಸುವುವು. ಮೂರ್ಖನಿಗೆ ಜ್ಞಾನವುಂಟಾಯಿತು. ಗುರುದಯೆಯಿಂದ ಈ ಕಥೆಯು ಇಲ್ಲಿ ಹೇಳಲ್ಪಟ್ಟಿತು ಎಂಬಲ್ಲಿಗೆ ಶ್ರೀ ಗುರುಚರಿತ್ರೆಯಲ್ಲಿ ಹದಿನೇಳನೇ ಅಧ್ಯಾಯವು ಮುಗಿದುದು.

---

## ೧೮ ನೆಯ ಅಧ್ಯಾಯ.

---

ನಾಮಧಾರಕನು, ಜಯಸಿದ್ಧಮುನಿಯೇ ನೀವು ಭವತಾರಕರು! ಈ ಕಥಾಮೃತರಸವನ್ನು ನನ್ನ ಕಿವಿಗಳಲ್ಲಿ ಸುರಿಸಿದಿರಿ! ಈ ಗುರುಚರಿತ್ರೆ

ಯನ್ನು ಕೇಳಲು ನನಗೆ ಅತಿ ಕುತೂಹಲವಿದೆ. ಗುರುಚರಣದಲ್ಲಿ ನನ್ನ ಧ್ಯಾನವು ನೆಲೆಸಿದೆ ನನಗೆ ತೃಪ್ತಿಯಿಲ್ಲ ಮುಂದಿನ ಕಥೆಯನ್ನು ಹೇಳಿರಿ ಎಂದು ನಾಮಧಾರಕನು ಸಿದ್ಧಮುನಿಗೆ ವಿಜ್ಞಾಪಿಸಿದನು ಶಿಷ್ಯವಚನವನ್ನು ಕೇಳಿ ಸಿದ್ಧಮುನಿಯು ಸಂತೋಷಿಸಿ ಮುಂದಿನ ಕಥೆಯನ್ನು ಹೇಳುವನು.

ಶ್ರೋತೃಗಳಿರಾ! ಇದನ್ನು ಏಕಚಿತ್ತದಿಂದ ಕೇಳಿರಿ ಸಿದ್ಧರು ಹೇಳುವರು:—ಶಿಷ್ಯನೇ ನೀನು ಧನ್ಯನು ನಿನ್ನ ಮಾತುಕೂಡಾ ಧನ್ಯವು. ನಿನ್ನ ಭಕ್ತಿಯು ಗುರುಚರಣದಲ್ಲಿ ಲೀನವಾಗಿದೆ ನಿನ್ನಿಂದ ನಮಗೆ ಗುರುಚರಿತ್ರೆಯು ಆದ್ಯಂತವೆಲ್ಲವೂ ನೆನಪಾಯಿತು ಮುಂದಿನ ಚರಿತ್ರೆಯನ್ನು ಕೇಳು—ವರುಣಾನದಿಯ ಸಂಗಮದಲ್ಲಿ ಗುರುಗಳು ಅದು ದಕ್ಷಿಣಕಾಶಿಯೆಂದು ತಿಳಿದು ಪಂಚಗಂಗಾ ಸಂಗಮದಲ್ಲಿ ಹನ್ನೆರಡು ವರ್ಷಗಳಿದ್ದರು ಈ ಕ್ಷೇತ್ರವು ಕಾಶಿಗೂ ಪ್ರಯಾಗಕ್ಕೂ ಮಾನಸ ಸರೋವರಕ್ಕೂ ಸಮಾನವಾಗಿರುವುದು ಕುರವಪುರವೆಂಬ ಗ್ರಾಮವು ಕುರುಕ್ಷೇತ್ರಕ್ಕೆ ಸಮವಾಗಿದೆ ಇದಕ್ಕೆ ಪುರಾಣದಲ್ಲಿ ಐದು ಹೆಸರುಗಳಿವೆ ಶಿವಾ ಭದ್ರಾ, ಭೋಗಾವತೀ, ಕುಂಭೀನದೀ, ಸರಸ್ವತೀ ಎಂಬ ಪಂಚಗಂಗೆಗಳು ಪ್ರಸಿದ್ಧಗಳಾಗಿವೆ ಇವು ಮಹಾ ಪಾತಕಗಳನ್ನು ಪರಿಹರಿಸುವುವು ಈ ಸ್ಥಳವು ಕೃಷ್ಣಾಪಂಚಗಂಗಾಸಂಗಮದಲ್ಲಿದೆ ಇದು ಪ್ರಯಾಗಕ್ಕಿಂತಲೂ ಹೆಚ್ಚು. ಅಮರಪುರ ಎಂಬುದು ಪ್ರಯಾಗದಂತೆ ಮನೋಹರಸ್ಥಾನವಾಗಿದೆ ಇಲ್ಲಿರುವ ಔದುಂಬರ ತರುವು ಕಲ್ಪತರುವಿನಂತಿರುವುದು ಇಲ್ಲಿನ ಸಂಗಮದಲ್ಲಿ ಅಮರೇಶ್ವರ ದೇವಾಲಯವಿದೆ ಇದು ಕಾಶಿಗೆ ಸಮಾನವು ಇಲ್ಲಿ ಅರವತ್ನಾಲ್ಕು ಯೋಗಿನಿಯರು ಅಮರೇಶ್ವರ ಸನ್ನಿಧಿಯಲ್ಲಿನ ಶಕ್ತಿ ತೀರ್ಥದಲ್ಲಿ ವಾಸವಾಗಿರುವರು ಈ ಅಮರೇಶ್ವರನು ಶ್ರೀ ವಿಶ್ವೇಶ್ವರನಿಗೆ ಸಮಾನನು. ಈ ಲಿಂಗವನ್ನು ಪೂಜಿಸಿದವರು ಅಮರರಾಗುವರು. ಪ್ರಯಾಗದಲ್ಲಿ ಮಾಘಸ್ನಾನ ಮಾಡಿದ ಪುಣ್ಯದ ನೂರರಷ್ಟು ಪುಣ್ಯವು ಇಲ್ಲಿಯ ಸ್ನಾನದಿಂದುಂಟಾಗುವುದು ಇಲ್ಲಿ ಕೋಟಿತೀರ್ಥವಿದೆ ಇಲ್ಲಿ ನದಿಯು ದಕ್ಷಿಣವಾಹಿನಿಯಾಗಿದೆ ಈ ಕೃಷ್ಣಾ ನದಿಯಲ್ಲಿ ಎಂಟು ತೀರ್ಥಗಳಿವೆ. ಉತ್ತರದಲ್ಲಿ ಕೃಷ್ಣಾನದಿಯು ಪಶ್ಚಿಮವಾಹಿನಿಯಾಗಿದೆ ಇದು ಶುಕ್ಲ ತೀರ್ಥವು. ಇಲ್ಲಿ ಬ್ರಹ್ಮಹತ್ಯಾ ದೋಷವು ಹೋಗುವುದು.

ಔದುಂಬರ ಸನ್ನಿಧಿಯಲ್ಲಿ ಮೂರು ತೀರ್ಥಗಳಿವೆ. ಇವುಗಳಲ್ಲಿ ಪ್ರತಿ ಯೊಂದು ತೀರ್ಥವೂ ಶ್ರೇಷ್ಠವಾಗಿದೆ. ಅಮರೇಶ್ವರಸನ್ನಿಧಿಯಲ್ಲಿ ಪಾಪ ವಿನಾಶಿನೀ, ಕಾಮ್ಯತೀರ್ಥ, ಸಿದ್ಧವರದತೀರ್ಥಗಳು ಇವೆ. ಮುಂಗಡೆ ಯಲ್ಲಿ ಸಂಗಮ ಷಟ್ಕದಲ್ಲಿಪ್ರಯಾಗ ತೀರ್ಥವಿದೆ ಇಲ್ಲಿ ಶಕ್ತಿತೀರ್ಧವೂ, ಅಮರತೀರ್ಥವೂ, ಕೋಟಿ ತೀರ್ಥವೂ ಇವೆ ಇವುಗಳಲ್ಲಿ ಶ್ರೀಗುರು ಗಳು ಹನ್ನೆರಡು ವರ್ಷಗಳಿದ್ದರು. ಕೃಷ್ಣಾ ಪಂಚಗಂಗಾ ಸಂಗಮದಲ್ಲಿ ಸ್ನಾನಮಾಡಲು ಬ್ರಹ್ಮಹತ್ಯಾದಿ ಪಾಪಗಳು ಹೋಗುವುವು ಇದು ಸಿದ್ಧಿಸ್ಥಾನವು. ಇದಕ್ಕೆ ಸಮಾನವಾದ ತೀರ್ಥವಿಲ್ಲ ಇವುಗಳ ದರ್ಶನ ದಿಂದಲೇ ಇಷ್ಟಾರ್ಥಗಳು ಸಿದ್ಧಿಸುವುವು ಅಲ್ಲಿರುವ ಅತ್ತಿಯಗಿಡವು ಕಲ್ಪತರುವಿಗೆ ಸಮಾನವು ಇಲ್ಲಿ ಗುರುಗಳು ಗೋಪ್ಯವಾಗಿದ್ದರು. ಗುರುಗಳು ಅಮರಾಪುರಗ್ರಾಮಕ್ಕೆ ಭಿಕ್ಷಗೆ ಹೋಗುತ್ತಿದ್ದರು ಆ ಗ್ರಾಮ ದಲ್ಲಿ ವೇದಾಭ್ಯಾಸಿಯಾದ ಬ್ರಾಹ್ಮಣನಿದ್ದನು ಅವನ ಹೆಂಡತಿಯು ಪತಿವ್ರತೆಯಾಗಿದ್ದಳು ಸುಶೀಲನೆಂಬ ಈ ವಿಪ್ರನು ತಾನು ಭಿಕ್ಷೆಯನ್ನು ಬೇಡುತ್ತಾ ಸಾತ್ವಿಕವೃತ್ತಿಯಿಂದ ಇದ್ದನು ಈತನ ಮನೆಯಲ್ಲಿ ಚಪ್ಪ ರದವರೆಯ ಗಿಡವಿತ್ತು ಇದರಲ್ಲಿ ನಿತ್ಯವೂ ಅವರೇಕಾಯಿಗಳು ಬೆಳೆ ಯುತ್ತಿದ್ದುವು ಇದರಿಂದೀತನು ಜೀವನ ಮಾಡುತ್ತಿದ್ದನು. ಈತನು ಪಂಚಮಹಾಯಜ್ಞವನ್ನು ಮಾಡುತ್ತಾ ಅತಿಥಿಗಳನ್ನು ಭಕ್ತಿಯಿಂದ ಪೂಜಿ ಸುತ್ತಿದ್ದನು ಇವನು ಒಂದು ದಿನ ಭಿಕ್ಷ ಬೇಡಿದವನಾಗಿ ಶ್ರೀಗುರು ವನ್ನು ಪೂಜಿಸಿ ಈ ಅವರೆಯ ಕಾಯಿಯನ್ನು ಬೇಯಿಸಿದುದನ್ನು ನಿವೇ ದನ ಮಾಡಿದನು. ಹೇಗೆಂದರೆ—

ಒಂದು ದಿನ ಶ್ರೀಗುರುವು ಈ ವಿಪ್ರನ ಮನೆಗೆ ಬಂದರು ಈತನು ಭಕ್ತಿಯಿಂದ ಗುರುಗಳನ್ನು ಭಿಕ್ಷಕ್ಕೆ ಕರೆದೊಯ್ದು ಭಿಕ್ಷೆಯನ್ನು ಮಾಡಿಸಿದನು. ಬಳಿಕ ಗುರುಗಳು ಎಲೈ ವಿಪ್ರನೇ, ನಿನ್ನ ಬಡತನವು ತೊಲಗಿತು ಎಂದು ಹೇಳಿ ಹೊರಟರು ಈತನ ಮನೆಯಲ್ಲಿದ್ದ ಅವರೆಯ ಗಿಡವು ಅಂಗಳದಲ್ಲಿ ತುಂಬಾ ಹರಡಿಕೊಂಡಿತ್ತು ಶ್ರೀಗುರುವು ಈ ಗಿಡವ ಬುಡವನ್ನು ಕತ್ತರಿಸಿಹಾಕಿ ಸಂಗಮಕ್ಕೆ ಹೊರಟುಹೋದರು.

ಆ ಬ್ರಾಹ್ಮಣಪತ್ನಿಯು ಅಹಾ ! ನಾವು ಅದೃಷ್ಟಹೀನರು. ನಾವು ಯತಿಗಳಿಗೆ ಯಾವ ತೊಂದರೆಯನ್ನೂ ಕೊಡಲಿಲ್ಲ ಅವರೂ ನಮ್ಮ ಆಹಾರವಾದ ಈ ಬಳ್ಳಿಯನ್ನು ಕತ್ತರಿಸಿದರೆಂದು ದುಃಖಿಸಿದಳು ವಿಪ್ರನೂ ಇದು ನಮ್ಮ ಪ್ರಾರಬ್ಧಕರ್ಮವು. ಯಾವ ಕಾಲದಲ್ಲಿ ಏನಾಗಬೇಕೋ ಅದು ಆಗಿಯೇ ತೀರುವುದು. ಈ ಪ್ರಪಂಚವು ಎಲ್ಲವೂ ಶಂಕರಾಧೀನವು. ವಿಶ್ವವ್ಯಾಪಕನಾದ ನಾರಾಯಣನು ಉತ್ಪತ್ತಿ ಸ್ಥಿತಿ ಲಯಗಳಿಗೆ ಕಾರಣನು. ಇರುವೆ ಮೊದಲುಗೊಂಡು ಆನೆಗಳವರೆಗೂ ಇರುವ ಪ್ರಾಣಿಗಳಿಗೆ ಸ್ಥಳವನ್ನೂ ಆಹಾರವನ್ನೂ ಶಂಕರನು ಕೊಡುವನು. "ಆಯುರನ್ನಂ ಪ್ರಯಚ್ಛತಿ" ಎಂದು ವೇದಶೃತಿಯು ಹೇಳುವುದು. ಸಿಂಹಕ್ಕೆ ಆನೆಯೂ,ಹುಲಿಗೆ ಹಸುವೂ, ಗರುಡನಿಗೆ ಸರ್ಪವೂ, ತೋಳಕ್ಕೆ ಕುರಿಯೂ, ಈ ರೀತಿಯಾಗಿ ದೇವರು ಪ್ರಾಣಿಗಳಿಗೆ ನಿತ್ಯವೂ ಆಹಾರವನ್ನಾಗಿ ಕೊಡುತ್ತಲೇ ಇರುವನು. ಧನಿಕರನ್ನೂ ದರಿದ್ರರನ್ನೂ ಸಮವಾಗಿ ನೋಡಿ ರಕ್ಷಿಸುವನು. ನಮ್ಮ ಪ್ರಾರಬ್ಧಫಲವು ಈರೀತಿಯಾಗಿ ಫಲಿಸಿತು. ಪೂರ್ವಕರ್ಮದ ಫಲವನ್ನು ಭೋಗಿಸಲೇಬೇಕು ಇನ್ನು ಹೇಳುವುದೇನು ? ನಮ್ಮ ಅದೃಷ್ಟದಿಂದ ನ್ಯೂನತೆಯುಂಟಾಗಿದೆ ಬಿತ್ತಿದ ಬೆಳೆಯನ್ನು ತಿನ್ನಬೇಕಲ್ಲವೇ ? ನಮ್ಮ ಪೂರ್ವಕರ್ಮದ ಫಲವನ್ನು ವಿಚಾರಿಸದೆ ಈಶ್ವರನು ನಮಗೆ ಶುಭವನ್ನುಂಟುಮಾಡಲಿಲ್ಲ. ನಮ್ಮ ಅಹಾರವನ್ನು ತೆಗೆದುಕೊಂಡನು ಎಂದು ಹೇಳಬಹುದೇ ? ಇದು ಅವಿದ್ಯಾಮಹಿಮೆಯು ನಮ್ಮನ್ನು ರಕ್ಷಿಸಬೇಕೆಂದೇ ಯತಿಗಳು ಭಿಕ್ಷೆಗೆ ಬಂದರು ಇವರು ನಮ್ಮ ದರಿದ್ರವನ್ನೊಯ್ದರು. ನಮ್ಮನ್ನು ಈ ಭವಸಾಗರದಿಂದ ಸಲಹುವರು ಎಂದು ತನ್ನ ಹೆಂಡತಿಗೆ ಸಮಾಧಾನ ಹೇಳಿ ಆ ಬಳ್ಳಿಯ ತುಂಡನ್ನು ತೆಗೆದು ಗಂಗೆಯಲ್ಲೆಸೆದನು. ಆ ಬಳ್ಳಿಯ ಬುಡವೇತಕ್ಕೆಂದು ಅಗೆದು ತೆಗೆದನು ಆಗ ಬುಡದಲ್ಲೊಂದು ಕುಂಭವು ಕಾಣಿಸಿತು ಇದನ್ನು ಮನೆಗೆ ತೆಗೆದುಕೊಂಡು ಬಂದನು ಇದರಲ್ಲಿ ಅಪಾರವಾದ ಐಶ್ವರ್ಯವಿತ್ತು. ಇದು ಯತಿಗಳ ಅನುಗ್ರಹವೆಂದೂ ಇವರು ಈಶ್ವರಾವತಾರರೆಂದೂ ಬಡತನವನ್ನು ಹಿಂಗಿಸಿದೆಂದೂ ಯೋಚಿಸಿ ಯತಿಗಳ ದರ್ಶನಕ್ಕಾಗಿ ಸಂಗಮಕ್ಕೆಹೋಗಿ ಅವರನ್ನು ಭಕ್ತಿಯಿಂದ ಪೂಜಿಸಿ ಸುವರ್ಣಕುಂಭವು ಸಿಕ್ಕಿದುದನ್ನು ಗುರುಗಳಲ್ಲಿ ವಿಜ್ಞಾಪಿಸಿದನು

ಆಗ ಗುರುಗಳು ಅಯ್ಯಾ, ಈ ಸಂಗತಿಯನ್ನು ಯಾರಿಗೂ ಹೇಳ ಬೇಡ ನಿಮ್ಮ ವಂಶದಲ್ಲಿ ಅಖಂಡೈಶ್ವರ್ಯವು ಸ್ಥಿರವಾಗಿರುವುದು. ನೀನು ಸುಖವಾಗಿ ಪುತ್ರ ಪೌತ್ರರೊಡನೆ ಆನಂದದಿಂದಿರು ಎಂದು ವರ ವನ್ನು ಕೊಟ್ಟರು.

ಆ ವಿಪ್ರನು ಗುರ್ವನುಜ್ಞೆಯಂ ಪೊಂದಿ, ವಂದಿಸಿ, ಹೊರಟುಹೋದ ನು. ಗುರುಗಳ ದರ್ಶನ ಮಾತ್ರದಿಂದಲೇ ದರಿದ್ರವು ಹೋಯಿತು ಗುರು ಕೃಪೆಯುಂಟಾದವರಿಗೆ ಬಡತನವೆಲ್ಲಿರುವುದು ? ಕಲ್ಪತರುವಿರಲು ತಾಪ ವುಂಟಾದೀತೆ ? ಅದೃಷ್ಟವು ಕೆಟ್ಟರೆ ಶ್ರೀಗುರುವನ್ನು ಭಜಿಸಬೇಕು. ಆಗ ಗುರುವೇ ರಕ್ಷಿಸುವನು ಪೂಜ್ಯತೆಯು ಉಂಟಾಗುವುದು ಗುರುಭಕ್ತ ರಿಗೆ ಇಹಪರಸುಖಗಳುಂಟಾಗುವುದು. ಅವರ ಮನೆಯಲ್ಲಿ ಅಷ್ಟೈಶ್ವ ರ್ಯವು ಸ್ಥಿರವಾಗಿರುವುದು ಏಕ ಚಿತ್ತದಿಂದ ಗುರುವನ್ನು ಭಜಿಸಿದರೆ ಕಾಮಧೇನುವಿನಂತೆ ಸುಖಕರವಾಗುವುದು ಎಂದು ಸಿದ್ಧರು ನಾಮ ಧಾರಕನಿಗೆ ಹೇಳಿದರೆಂದು ಸರಸ್ವತೀಗಂಗಾಧರನು ನಿರೂಪಿಸಿದನೆಂಬ ಲ್ಲಿಗೆ ವಿಪ್ರದೈನ್ಯಹರಣವೆಂಬ ಅಷ್ಟಾದಶಾಧ್ಯಾಯವು ಮುಗಿದುದು

---

## ೧೯ ನೆಯ ಅಧ್ಯಾಯವು.

---

ಶ್ರೀಗಣೇಶಾಯನಮಃ॥ ನಾಮಧಾರಕನು ಅಂಜಲಿಬದ್ಧನಾಗಿ ಜಯ ಯೋಗೀಶ್ವರನೇ ! ಭಕ್ತಜನಮನೋಹರನೇ ! ಜ್ಯೋತಿಸ್ವರೂಪನೇ ! ಭವತಾರಕನೇ ! ನಾನು ಅಜ್ಞಾನವೆಂಬ ಕತ್ತಲೆಯಲ್ಲಿ ನಿದ್ರಿಸಿ ಮದಮತ್ತ ನಾಗಿದ್ದೆನು. ಗುರುಚರಿತ್ರೆಯೆಂಬ ಅಮೃತವನ್ನು ಕುಡಿಸಿ ನನ್ನ ಮನ ಸ್ಸೆಂಬ ಜ್ಞಾನ ಸೂರ್ಯನನ್ನು ಪ್ರಕಾಶಗೊಳಿಸಿದಿರಿ ನಿಮ್ಮ ದಯೆಯಿಂದ ಎಚ್ಚತ್ತೆನು ಮುಂದಿನ ಚರಿತ್ರೆಯನ್ನು ನಿರೂಪಿಸಿರಿ ಎಂದು ಸಿದ್ಧರನ್ನು ವಂದಿಸಿದನು

ಬಳಿಕ ಸಿದ್ಧರು ಶಿಷ್ಯನೇ ಕೇಳೆಂದು ಹೇಳಲಾರಂಭಿಸಿದರು. ಆಗ ನಾಮಧಾರಕನು ಸ್ವಾಮಿ, ಶ್ರೀಗುರುಗಳು ಅನೇಕ ಪುಣ್ಯಸ್ಥಳಗಳನ್ನು

ಬಿಟ್ಟು ಔದುಂಬರ (ಅತ್ತಿಯಮರ)ದಲ್ಲಿ ಏಕೆ ಪ್ರೀತಿಸಿ ಅಲ್ಲಿ ವಾಸಿಸಿದರು ? ಅಶ್ವತ್ಥವೃಕ್ಷವು ಶ್ರೇಷ್ಠವೆಂದು ವೇದಗಳು ಹೇಳುವುವು, ಆದರೂ ಗುರುಗಳಿಗೆ ಔದುಂಬರದಲ್ಲಿ ಏಕೆ ಪ್ರೀತಿಯುಂಟಾಯಿತು ? ಎಂದು ಕೇಳಿದನು

ಆಗ ಸಿದ್ಧರು ಶಿಷ್ಯನೇ ಕೇಳು — ಪೂರ್ವದಲ್ಲಿ ನರಸಿಂಹನು ಹಿರಣ್ಯಕಶಿಪುವನ್ನು ಉಗುರಿನಿಂದ ಸೀಳಿ ಉದರದ ಕರುಳನ್ನು ಮಾಲೆಯನ್ನು ಮಾಡಿ ಕೊರಳಲ್ಲಿ ಧರಿಸಿದನು ಆ ದೈತ್ಯನ ಉದರದಲ್ಲಿ ಕಾಲಕೂಟ ವಿಷವು ಸಾಗರದ ಮಧ್ಯದಲ್ಲಿ ಬಡಬಾಗ್ನಿಯಿದ್ದಂತಿತ್ತು ಆಗ ನರಸಿಂಹನ ಉಗುರಿಗೆ ವಿಷವು ವ್ಯಾಪಿಸಿತು ಆಗ ಮಹಾಲಕ್ಷ್ಮಿಯು ಪ್ರೀತಿಯಿಂದ ಅತ್ತಿಯ ಹಣ್ಣನ್ನು ತಂದು ಉಗುರಿಗೆ ತಗಲಿಸಿದಳು. ಆಗ ವಿಷಾಗ್ನಿಯು ಶಾಂತವಾಯಿತು. ಉಗ್ರನೃಸಿಂಹನು ಶಾಂತನಾದನು. ಆಗ ನರಸಿಂಹನು "ಅತ್ತಿಯಗಿಡಕ್ಕೆ ಸದಾ ಫಲವುಂಟಾಗಲಿ" ಎಂದು ವರವನ್ನಿತ್ತು ಈ ವೃಕ್ಷಕ್ಕೆ ಕಲ್ಪತರುವೆಂದು ಹೆಸರಿತ್ತನು ಇದನ್ನು ಭಕ್ತಿಯಿಂದ ಸೇವಿಸಿದರೆ ಇಷ್ಟಾರ್ಥಗಳೆಲ್ಲವೂ ಸಿದ್ಧಿಸುವುವು. ಉಗ್ರವಿಷವೂ ಶಾಂತವಾಗುವುದು. ಬಂಜೆಯಾದ ಹೆಂಗಸು ಸೇವಿಸಲು ಪುತ್ರನನ್ನು ಪಡೆಯುವಳು. ಬಡಜನರು ಸೇವಿಸಿದರೆ ಐಶ್ವರ್ಯಹೊಂದುವರು. ಈ ಗಿಡದ ನೆರಳಿರುವ ನದಿಯಲ್ಲಿ ಸ್ನಾನಮಾಡಿದರೆ ಗಂಗಾಸ್ನಾನಫಲವುಂಟಾಗುವುದು. ಇದರ ನೆರಳಿನಲ್ಲಿ ನಿತ್ಯಕರ್ಮವನ್ನು ಮಾಡಿದರೆ ಅನಂತಫಲವಾಗುವುದು. ಇದನ್ನು ಸೇವಿಸಿದರೆ ರೋಗಭಯವಿಲ್ಲ. ಬ್ರಹ್ಮಹತ್ಯಾದಿದೋಷಗಳು ಪರಿಹರಿಸುವುವು. ಸೇವಿಸಿದವರು ಇಷ್ಟಾರ್ಥಗಳನ್ನು ಹೊಂದುವರು. ನಾನು ಲಕ್ಷ್ಮಿಯೊಡನೆ ಇದರಲ್ಲಿ ವಾಸವಾಗಿರುವೆನು ಎಂದು ನರಸಿಂಹನು ಆ ವೃಕ್ಷಕ್ಕೆ ವರವಿತ್ತನು. ಇದು ಕಲಿಯುಗದಲ್ಲಿ ಕಲ್ಪತರುವೆನಿಸುವುದು. ಆದುದರಿಂದ ಶ್ರೀಗುರುಮೂರ್ತಿಯು ನೃಸಿಂಹಮಂತ್ರವನ್ನು ಜಪಿಸುತ್ತಾ, ಈ ಮಂತ್ರದ ಉಗ್ರತ್ವವನ್ನು ಶಾಂತಮಾಡುವುದಕ್ಕಾಗಿ ಅತ್ತಿಯ ಗಿಡದಲ್ಲಿ ವಾಸಿಸುವರು. ಭಕ್ತಾನುಗ್ರಹಕ್ಕಾಗಿ ತ್ರಿಮೂರ್ತಿಸ್ವರೂಪರಾದ ಗುರುಗಳು ಸರ್ವತೀರ್ಥಗಳಲ್ಲಿಯೂ ಸಂಚರಿಸಿದರು. ಇವರು ಔದುಂಬರದಲ್ಲಿ ಗೋಪ್ಯವಾಗಿದ್ದು ಮಧ್ಯಾಹ್ನದಲ್ಲಿ ಸ್ನಾನಸಂಧ್ಯಾದಿ ನಿತ್ಯಕರ್ಮಗಳನ್ನು ಮಾಡುತ್ತಾ ಇದ್ದರು.

ಅಮರೇಶ್ವರ ಸನ್ನಿಧಿಯಲ್ಲಿ ಚೌಷಷ್ಟಿ ಯೋಗಿನಿಯರು ಮಧ್ಯಾಹ್ನ ಕಾಲದಲ್ಲಿ ಶ್ರೀ ಗುರುಗಳನ್ನು ಪೂಜಿಸುವುದಕ್ಕಾಗಿ ನಿತ್ಯವೂ ಬರುತ್ತಿದ್ದರು ಇವರು ಗುರುಗಳನ್ನು ವಂದಿಸಿ ಭಕ್ತಿಯಿಂದ ತಮ್ಮ ಮನೆಗಳಿಗೆ ಕರೆದೊಯ್ದು ಗಂಧಪುಷ್ಪಾದಿಗಳಿಂದರ್ಚಿಸುತ್ತಿದ್ದರು ಹೀಗಿರಲು ಒಂದು ದಿನ ಒಬ್ಬ ಬ್ರಾಹ್ಮಣನು ಶ್ರೀಗುರುಗಳನ್ನು ನೋಡಿ ಈ ಯತಿಗಳು, ಈ ಗ್ರಾಮದಲ್ಲಿ ಭಿಕ್ಷೆಗೆ ಬರುವುದಿಲ್ಲ ಅರಣ್ಯದಲ್ಲಿ ವಾಸಿಸುವರು. ಇವರು ಹೊಸರೀತಿಯಾದ ಯತಿಗಳು. ಇವರಿಗೆ ನಿತ್ಯವೂ ಭಿಕ್ಷೆಯು ಎಲ್ಲಿ ದೊರೆಯುವುದು ? ಎಂದು ಮನಸ್ಸಿನಲ್ಲಿ ಯೋಚಿಸಿ ಸಂಗಮಕ್ಕೆ ಬಂದು ನೋಡಿದನು ಶ್ರೀಗುರುವು ನಿತ್ಯಕರ್ಮ ಮಾಡುತ್ತಿದ್ದರು. ಯೋಗಿನಿಯರು ಪೂಜೆಗೋಸ್ಕರ ಬಂದರು ಗಂಗೆಯು ಮಧ್ಯದಲ್ಲಿ ಬರುತ್ತಿರಲು ನೀರು ದಾರಿಯನ್ನು ಕೊಟ್ಟಿತು. ಆತನು ಇದನ್ನು ನೋಡಿ ಆಶ್ಚರ್ಯಪಟ್ಟು ಈ ಯತೀಶ್ವರರು ಎಂಥಾ ಮಹಿಮೆಯುಳ್ಳವರು ! ಗಂಗೆಯು ಎರಡು ಭಾಗವಾಗಿ ದಾರಿಯನ್ನು ಕೊಟ್ಟಿತು ! ಎಂದು ಯೋಚಿಸಿದನು. ಗುರುಗಳು ಯೋಗಿನಿಯರಿಂದ ಪೂಜೆಯನ್ನೂ ಭಿಕ್ಷೆಯನ್ನೂ ಸ್ವೀಕರಿಸಿ ಗಂಗೆಯಿಂದ ಮೇಲಕ್ಕೆ ಬಂದರು. ಈಶ್ವರಾಂಶರಾದ ಗುರುಗಳಿಗೆ ಯೋಗಿನಿಯರು ಆರತಿಯನ್ನೆತ್ತಿದರು. ಆ ನದಿಯ ಮಧ್ಯದಲ್ಲಿ ರತ್ನಖಚಿತವಾದ ಗೋಪುರಗಳಿಂದ ಕೂಡಿದ ನಗರವು ಕಾಣಿಸಿತು. ಇದು ಅಮರಾವತಿಯಂತೆ ಹೊಳೆಯುತ್ತಿತ್ತು. ಈ ನಗರದವರು ಗುರುವಿಗೆ ಆರತಿಯನ್ನೆತ್ತಿದರು. ಯೋಗಿನಿಯರು ಗುರುಗಳನ್ನು ರತ್ನಖಚಿತವಾದ ಸಿಂಹಾಸನದಲ್ಲಿ ಕುಳ್ಳಿರಿಸಿ ಷೋಡಶೋಪಚಾರ ಪೂಜೆಯನ್ನು ಮಾಡಿ ನಾನಾ ವಿಧವಾದ ಷಡ್ರಸೋಪೇತವಾದ ಪಕ್ವಾನ್ನಗಳಿಂದ ಆರೋಗಣೆ ಮಾಡಿಸಿದರು.

ಬಳಿಕ ಶ್ರೀ ಗುರುಗಳು ಈ ವಿಪ್ರನನ್ನು ಕಂಡು ಎಲೈ ವಿಪ್ರನೇ, ನೀನು ಯಾರು ? ಏಕೆಬಂದೆ ? ಎಂದು ಕೇಳಿದರು.

ಆಗ ಆತನು ಸ್ವಾಮಿಾ, ಸಹಜವಾಗಿ ತಮ್ಮ ದರ್ಶನಕ್ಕೆ ಬಂದೆನು. ತ್ರಿಮೂರ್ತಿಸ್ವರೂಪರಾದ ತಮ್ಮನ್ನು ತಿಳಿಯದೆ ಮಾಯಾಮೋಹಿತನಾಗಿ ನಿಮ್ಮ ದರ್ಶನಕ್ಕೆ ಬಂದೆನು. ಈ ಪ್ರಪಂಚಕ್ಕೆ ಭವಸಾಗರ ತಾರಕರಾಗಿ ಅವತರಿಸಿದ್ದೀರಿ. ಅಜ್ಞಾನವೆಂಬ ಕತ್ತಲೆಗೆ ಜ್ಯೋತಿಸ್ವರೂಪರಾಗಿದ್ದೀರಿ.

ನಿಮ್ಮ ಸಂದರ್ಶನವುಂಟಾದವರಿಗೆ ಸಕಲೇಷ್ಟಾರ್ಥಗಳೂ ಇಹಪರಸುಖ ಗಳೂ ಆ ಕ್ಷಣವೇ ಅನಾಯಾಸವಾಗಿ ಉಂಟಾಗುವುವು ಎಂದು ಸ್ತೋತ್ರ ಮಾಡಲು ಶ್ರೀಗುರುವು ವಿಪ್ರನೇ, ನಿನ್ನ ಬಡತನವು ಹೋಯಿತು. ನಿನ್ನ ಮನದ ಇಷ್ಟಾರ್ಥಗಳು ಸಿದ್ಧಿಸುವುವು ನೀನು ನಮ್ಮನ್ನು ನೋಡಿದುದನ್ನು ಯಾರಿಗೂ ಹೇಳದಿರು. ಹೇಳದರೆ ಮೃತನಾಗುವಿ ಎಂದು ಹೇಳಿ ಔದುಂಬರ ತರುವಿನಹತ್ತಿರ ಬಂದರು ಶ್ರೀಗುರು ನಿರೂಪಹೊಂದಿ ಆ ಗಂಗಾನುಜನೆಂಬ ವಿಪ್ರನು ತನ್ನ ಮನೆಗೆ ಹೋಗಿ ಜ್ಞಾನಿಯಾಗಿ ನಿತ್ಯವೂ ಗುರುಸೇವೆಯನ್ನು ಮಾಡುತ್ತಾ ಪುತ್ರ ಪೌತ್ರರಿಂದ ಕೂಡಿ ಆನಂದದಿಂದಿದ್ದನು. ಈತನು ನಿತ್ಯವೂ ಭಕ್ತಿಭಾವದಿಂದ ತನ್ನ ಪತ್ನಿಯೊಡನೆ ಗುರುಗಳನ್ನು ವಂದಿಸುತ್ತಿದ್ದನು ಹೀಗಿರಲು ಒಂದುದಿನ ಮಾಘ ಶುದ್ಧ ಪೂರ್ಣಿಮೆಯು ಬಂದಿತು. ಈ ಭಕ್ತನು ಗುರುಗಳನ್ನು ವಂದಿಸಿ ಸ್ವಾಮಿ, ಪ್ರಯಾಗದಲ್ಲಿ ಮಾಘಸ್ನಾನವು ಶ್ರೇಷ್ಠವೆಂದು ಹೇಳುವರು. ಕಾಶೀ ಕ್ಷೇತ್ರವು ಶ್ರೇಷ್ಠವೆನ್ನುವರು ಇವುಗಳಲ್ಲಿ ಯಾವುದು ನಿಜವು? ಅಪ್ಪಣೆ ಕೊಡಿಸಿರಿ ಎಂದು ಬೇಡಿದನು

ಆಗ ಗುರುಗಳು ಭಕ್ತನೇ ಕೇಳು —ಈ ಪಂಚಗಂಗಾ ಸಂಗಮ ಸ್ಥಾನವೇ ಪ್ರಯಾಗವೆಂದು ತಿಳಿ. ಇದೇ ಕಾಶೀಕ್ಷೇತ್ರವು. ಇದೇ ಗುರುಸ್ಥಳವು ಕೊಲ್ಹಾಪುರವು ದಕ್ಷಿಣ ಪ್ರಯಾಗಕ್ಕೆ ಸಮಾನವಾಗಿದೆ. ಇದನ್ನು ನಿನಗೆ ಪ್ರತ್ಯಕ್ಷವಾಗಿ ತೋರಿಸುವೆವು ಎಂದು ವ್ಯಾಘ್ರಾಸನದಲ್ಲಿ ಕುಳಿತರು. ಈತನು ಗುರುಗಳ ವ್ಯಾಘ್ರಾಸನವನ್ನು ಗಟ್ಟಿಯಾಗಿ ಹಿಡಿದು ಕೊಂಡಿದ್ದನು. ಕೂಡಲೇ ಗುರುಗಳು ಆ ದಿನ ಪ್ರಾತಃಕಾಲವೇ ಪ್ರಯಾಗ ಕ್ಷೇತ್ರಕ್ಕೆ ಬಂದರು. ಅಲ್ಲಿ ಸ್ನಾನಮಾಡಿ ಶ್ರೀ ಕಾಶೀಕ್ಷೇತ್ರಕ್ಕೆ ಮಧ್ಯಾಹ್ನಕ್ಕೆ ಹೋದರು. ಆಗ ಗುರುವು ಶ್ರೀ ವಿಶ್ವನಾಥಸ್ವಾಮಿಯನ್ನು ಈತನಿಗೆ ತೋರಿಸಿ ಗಯೆಗೆ ಹೋದರು. ಅಲ್ಲಿ ತೀರ್ಥಯಾತ್ರೆಮಾಡಿ ಹಿಂತಿರುಗಿ ಅಸ್ತಮಾನಕಾಲಕ್ಕೆ ಸರಿಯಾಗಿ ಕೃಷ್ಣಾನದಿಯ ಪಂಚಗಂಗಾ ಸಂಗಮಕ್ಕೆ ಬಂದನು.

ಆಗ ಈತನು ಆಶ್ಚರ್ಯಚಕಿತನಾದನು ವಿಶ್ವನಾಟಕ ಸೂತ್ರಧಾರಿಗಳಾದ ಶ್ರೀ ಗುರುವು ಈ ರೀತಿಯಿಂದ ಮಹಿಮೆಯನ್ನು ತೋರಿಸಿ ಅವ

ರೇಶ್ವರಕ್ಕೆ ಹೊರಟರು. ಆಗ ಚೌಷಷ್ಠಿ (೬೪) ಯೋಗಿನಿಯರು ಬಂದು ಮಹಾಸ್ವಾಮಿ! ನಮ್ಮನ್ನು ಬಿಟ್ಟು ತಾವು ಎಲ್ಲಿ ಹೋಗುವಿರಿ? ನಿತ್ಯವೂ ತಮ್ಮ ದರ್ಶನಮಾಡಲು ತಾಪತ್ರಯಗಳು ಪರಿಹರಿಸುವುವು. ಅನ್ನ ಪೂರ್ಣೆಯು ನಿಮ್ಮ ವಶಳಾಗಿರುವಳು. ನಾವೆಲ್ಲಿರೋಣ? ಎಂದು ಭಕ್ತಿಯಿಂದ ವಿಜ್ಞಾಪಿಸಲು ಶ್ರೀಗುರುವು ಆನಂದದಿಂದ ಯೋಗಿನಿಯರೇ, ಈ ಔದುಂಬರದಲ್ಲಿ ಸದಾ ಪೂರ್ವಭಾಗದಲ್ಲಿ ನಾವಿರುವೆವು ನೀವಿಲ್ಲಿಯೇ ವಾಸಿಸಿರಿ. ಈ ಕೃಷ್ಣಾನದಿಯ ಪಶ್ಚಿಮತೀರವು ನಮ್ಮ ವಾಸಸ್ಥಳವು. ಈ ಔದುಂಬರವು ಕಲ್ಪತರುವಿಗೆ ಸಮವು ಇಲ್ಲಿರುವ ನಮ್ಮ ಪಾದುಕೆಯನ್ನು ಅರ್ಚಿಸಿದವರು ಸರ್ವೇಷ್ಟಗಳನ್ನೂ ಹೊಂದುವರು. ಅಲ್ಲಿ ಅನ್ನ ಪೂರ್ಣೆಯು ವಾಸಿಸುವಳು. ನಿತ್ಯವೂ ಪೂಜಿಸುವವರಿಗೆ ಪುರುಷಾರ್ಥಗಳು ಸಿದ್ಧಿಸುವುವು ಪಾಪವಿನಾಶವೆಂಬ ಕಾಮ್ಯತೀರ್ಥದಲ್ಲಿಯೂ ಸಿದ್ಧತೀರ್ಥದಲ್ಲಿಯೂ ಈ ಔದುಂಬರ ತೀರ್ಥದಲ್ಲಿಯೂ ಏಳುಬಾರಿ ಸ್ನಾನ ಮಾಡಿದರೆ ಎಂಭತ್ತು ವರ್ಷಗಳ ಬಂಜೆಯಾದರೂ ಪುತ್ರನನ್ನು ಪಡೆಯುವಳು ಬ್ರಹ್ಮಹತ್ಯಾದಿ ಪಾಪಗಳು ಹೋಗುವುವು. ಚಂದ್ರ ಸೂರ್ಯ ಗ್ರಹಣಗಳಲ್ಲಿಯೂ, ಅಮಾವಾಸ್ಯೆ ಸಂಕ್ರಮಣಗಳಲ್ಲಿಯೂ ಭಕ್ತಿಯಿಂದ ಸ್ನಾನಮಾಡಲು ಅನಂತಪುಣ್ಯವುಂಟು ಸೋಮವಾರ, ಅಮಾವಾಸ್ಯೆಯಲ್ಲಿಯೂ ವ್ಯತೀಪಾತಾದಿ ಪರ್ವಣಿಗಳಲ್ಲಿಯೂ ಸ್ನಾನಮಾಡಲು ಸುವರ್ಣ ಶೃಂಗಗಳೂ ಬೆಳ್ಳಿಯ ಗೊರಸುಗಳಿಂದ ಅಲಂಕರಿಸಿದ ಸಾವಿರ ಕಪಿಲಾ ಧೇನುಗಳನ್ನು ಗಂಗಾತೀರದಲ್ಲಿ ಬ್ರಾಹ್ಮಣರಿಗೆ ಕೊಟ್ಟ ಫಲವುಂಟಾಗುವುದು. ಭಕ್ತಿಯಿಂದೊಬ್ಬ ವಿಪ್ರನಿಗೆ ಊಟಮಾಡಿಸಿದರೆ ಕೋಟಿ ಬ್ರಾಹ್ಮಣರಿಗೆ ಭೋಜನಮಾಡಿಸಿದಷ್ಟು ಪುಣ್ಯವುಂಟಾದೀತು. ಔದುಂಬರ ಮೂಲದಲ್ಲಿ ನಿರ್ಮಲ ಮನಸ್ಸಿನಿಂದ ಜಪಮಾಡಿದರೆ ಕೋಟಿಫಲವುಂಟಾಗುವುದು. ಹೋಮದಲ್ಲಿಯೂ ಈ ಫಲವುಂಟು ಏಕಾದಶ ರುದ್ರವನ್ನು ಜಪಿಸಿದರೆ ಅತಿರುದ್ರ ಜಪದ ಫಲವುಂಟಾದೀತು ನಿದಾನವಾಗಿ ಈ ವೃಕ್ಷಕ್ಕೆ ಪ್ರದಕ್ಷಿಣೆ ಮಾಡಿದರೆ ಹೆಜ್ಜೆ ಹೆಜ್ಜೆಗೆ ವಾಜಪೇಯ ಯಜ್ಞದ ಫಲವುಂಟಾದೀತು. ನಮಸ್ಕಾರದಿಂದಲೂ ಈ ಫಲವುಂಟು. ಎರಡು ಅಥವಾ ನಾಲ್ಕು ಪ್ರದಕ್ಷಿಣೆ ಮಾಡಿ ಒಂದು ನಮಸ್ಕಾರ ಮಾಡಬೇಕು. ಕುಷ್ಠರೋಗಿಯೂ ಅಂಗಹೀನನೂ ಲಕ್ಷ ಪ್ರದಕ್ಷಿಣೆ ಮಾಡಲು

ದೇವಸಮಾನನಾಗುವನು. ಈ ಸ್ಥಳವು ಕಲ್ಪತರುವಿಗೆ ಸಮಾನವೆಂದು ಚತುಷ್ಷಷ್ಟಿಯೋಗಿನಿಯರಿಗೆ ಗುರುಗಳು ಹೇಳಿದರು. ಬಳಿಕ ಗುರುಗಳು ಯೋಗಿನಿಯರಿಗೆ ಅನುಜ್ಞೆಯನ್ನಿತ್ತು ಭೀಮಾ ತೀರದಲ್ಲಿರುವ ಗಾಣಗಾಪುರಕ್ಕೆ ಹೋದರು. ಅಲ್ಲಿ ಒಂದು ಔದುಂಬರತರು ಮೂಲದಲ್ಲಿರುತ್ತಿದ್ದರು. ಈ ಗಾಣಗಾಪುರದಲ್ಲಿಯೂ ಇವರ ಮಹಿಮೆಯು ಪ್ರಕಟವಾಯಿತು. ಈ ಚರಿತ್ರೆಯನ್ನು ಭಕ್ತಿಯಿಂದ ಕೇಳಿದವರು ಪುರುಷಾರ್ಥಗಳನ್ನು ಹೊಂದುವರು. ಗುರುಗಳು ಔದುಂಬರದಲ್ಲಿ ಯಕ್ಷಿಣಿ ಯೋಗಿನಿಯರನ್ನು ಸ್ಥಾಪಿಸಿ ಗುಪ್ತರಾದರೆಂದು ಸಿದ್ಧರು ಹೇಳಿದರೆಂದು ಗಂಗಾಧರನು ನಿರೂಪಿಸಿದನೆಂಬಲ್ಲಿಗೆ ಗುರುಚರಿತ್ರೆಯಲ್ಲಿ ಔದುಂಬರ ಕ್ಷೇತ್ರವರ್ಣನವೆಂಬ ೧೯ ನೇ ಅಧ್ಯಾಯ ಮುಗಿದುದು

---

## ೨೦ ನೆಯ ಅಧ್ಯಾಯ

ಶ್ರೀ ಗಣೇಶಾಯನಮಃ ॥ ನಾಮಧಾರಕನು ಸಿದ್ಧರ ಚರಣಂಗಳಿಗೆ ವಂದಿಸಿ, ಜಯಸಿದ್ಧಮೌಳಿಯೆ ! ಶ್ರೀ ಗುರುಗಳು ಗಾಣಗಾಪುರದಲ್ಲಿದ್ದು ಮುಂದೆ ಏನುಮಾಡಿದರು ? ನಿರೂಪಿಸಿರಿ ಎಂದು ಬೇಡಿಕೊಂಡನು

ಆಗ ಸಿದ್ಧರು ಹೇಳುವರು, ಶಿಷ್ಯನೇ ಕೇಳು—ಔದುಂಬರವು ಇವರ ವಾಸಸ್ಥಾನವಾಗಿತ್ತು. ಇದರ ಮಹಿಮೆಯನ್ನು ಹೇಳಲು ನಮಗೆ ಶಕ್ತಿಯಿಲ್ಲ. ಇದಕ್ಕೊಂದು ದೃಷ್ಟಾಂತ ಹೇಳುವೆನು—

ಶಿರೋಳವೆಂಬ ಗ್ರಾಮದಲ್ಲಿ ಗಂಗಾಧರನೆಂಬ ವೇದರತನಾದ ವಿಪ್ರನಿದ್ದನು. ಈತನಿಗೆ ಸುಶೀಲೆಯಾದ ಪತ್ನಿಯಿದ್ದಳು ಈಕೆಗೆ ಐದು ಮಂದಿ ಮಕ್ಕಳಾದರೂ ಒಂದೂ ಬದುಕಲಿಲ್ಲ ಈಕೆಯು ದುಃಖದಿಂದ ಅನೇಕ ವ್ರತಗಳನ್ನು ಮಾಡಿದಳು. ಆದರೂ ಫಲವಿಲ್ಲವಾಯಿತು ಕರ್ಮವಿಪಾಕದಲ್ಲಿ ಈ ಪುತ್ರಶೋಕಕ್ಕೆ ಕಾರಣವು ಹೇಳಲ್ಪಟ್ಟಿದೆ. ಸ್ತ್ರೀಯರಿಗೆ ಯಾರು ಗರ್ಭಪಾತಮಾಡಿಸುವರೋ ಅವರಿಗೆ ಮುಂದಿನ ಜನ್ಮದಲ್ಲಿ ಮಕ್ಕಳಾಗುವುದಿಲ್ಲ. ಪರದ್ರವ್ಯವನ್ನು ಅಪಹರಿಸಿದವರಿಗೂ ಮಕ್ಕಳಾಗುವುದಿಲ್ಲ.

ನೀನು ಪೂರ್ವಜನ್ಮದಲ್ಲಿ ಶೌನಕಗೋತ್ರದವನಾದೊಬ್ಬ ವಿಪ್ರನಲ್ಲಿ ಸಾಲವನ್ನು ತೆಗೆದುಕೊಂಡು ಅವನಿಗೆ ಹಿಂತಿರುಗಿ ಕೊಡಲಿಲ್ಲ. ಇದರಿಂದಾತನು ಬಹುಕಷ್ಟಪಟ್ಟನು ಇದರಿಂದ ಆತನು ದ್ರವ್ಯಹೋಯಿತೆಂದು ಆತ್ಮಹತ್ಯಮಾಡಿಕೊಂಡನಾದುದರಿಂದ ಪಿಶಾಚನಾದನು. ಅವನೇ ನಿನ್ನ ಗರ್ಭವನ್ನು ನಾಶಮಾಡುವನು. ಈ ರೀತಿ ನಿನ್ನ ಪೂರ್ವಜನ್ಮದ ಕರ್ಮಫಲವನ್ನು ಅನುಭವಿಸು ಎಂದು ಆ ವಿಪ್ರನು ಹೇಳಿದನು.

ಆಗ ಈಕೆಯು ವಿಪ್ರನ ಪಾದಂಗಳಿಗೆ ವಂದಿಸಿ, ಕರಗಳನ್ನು ಜೋಡಿಸಿ ಸ್ವಾಮಿಾ! ನಾನು ಪಾಪಿಯು ; ಪಾಪಸಾಗರದಲ್ಲಿ ಮುಳುಗಿದೆನು. ನನಗೊಂದು ಉಪಾಯವನ್ನು ಹೇಳಿ ರಕ್ಷಿಸಿರಿ. ಚಂಡಾಲಿನಿಯಾದ ನಾನು ಪಾಪವೆಂಬ ವಿಷವನ್ನು ತಿಂದೆನು. ಇದಕ್ಕೆ ಔಷಧವನ್ನು ಹೇಳಿರಿ ಎಂದು ಬಿನ್ನವಿಸಿದಳು.

ಆ ವಿಪ್ರನು ಆಕೆಯನ್ನು ಕುರಿತು, ಎಲೌ ಸ್ತ್ರೀಯಳೇ, ನೀನು ಆತನ ಧನವನ್ನು ಅಪಹರಿಸಿದೆ ಇದರಿಂದ ಆತನು ಪಿಶಾಚನಾದನು ಅವನು ಸತ್ತಮೇಲೆ ಅವನಿಗೆ ಉತ್ತರ ಕ್ರಿಯೆ ನಡೆಯಲಿಲ್ಲ. ಅವನಿಗೆ ಗತಿಯುನ್ನುಂಟುಮಾಡಬೇಕು ಹದಿನಾರು ಕರ್ಮಗಳನ್ನುಮಾಡಿಸಬೇಕು ಒಂದು ನೂರು ರೂಪಾಯಿಗಳನ್ನು ಆ ಗೋತ್ರದ ಬ್ರಾಹ್ಮಣರಿಗೆ ಕೊಡಬೇಕು ಇದರಿಂದ ನಿನಗೆ ಒಳ್ಳೇದಾಗುವುದು. ಕೃಷ್ಣಾತೀರದಲ್ಲಿದ್ದು ಒಂದು ತಿಂಗಳು ಉಪವಾಸಮಾಡಬೇಕು ಪಂಚಗಂಗಾಸಂಗಮದಲ್ಲಿ ಅನೇಕ ತೀರ್ಥಗಳಿವೆ ಅಲ್ಲಿ ಔದುಂಬರ ವೃಕ್ಷವನ್ನು ಆರಾಧಿಸಬೇಕು ಪಾಪವಿನಾಶಿನಿಯಲ್ಲಿ ಸ್ನಾನಮಾಡಿ ಔದುಂಬರದಲ್ಲಿ ಏಳುಸಾರಿ ಸ್ನಾನಮಾಡಿ ಗುರುಚರಣದಲ್ಲಿ ಅಭಿಷೇಕಮಾಡಿ ಪುನಃ ಕಾಮ್ಯತೀರ್ಥದಲ್ಲಿ ಸ್ನಾನಮಾಡಬೇಕು ಗುರುಚರಣವನ್ನು ಭಕ್ತಿಯಿಂದ ಒಂದು ತಿಂಗಳು ಪೂಜಿಸಬೇಕು ಶ್ರೀಗುರುವರ್ಯರಾದ ನೃಸಿಂಹ ಸರಸ್ವತಿಗಳ ಸ್ಥಾನದಲ್ಲಿ ನಿನ್ನ ದೋಷವು ಪರಿಹರಿಸಿ ಶತಾಯುಷಿಯಾದ ಪುತ್ರನು ಹುಟ್ಟುವನು ಈ ರೀತಿಯಾಗಿ ಒಂದು ತಿಂಗಳು ವ್ರತವನ್ನಾಚರಿಸಿ, ಶೌನಕಗೋತ್ರದ ವಿಪ್ರರಿಗೆ ನೂರು ರೂಪಾಯಿಗಳನ್ನು ಕೊಡಬೇಕು. ಆ ವಿಪ್ರನ ಹೆಸರಿನಲ್ಲಿ ಸಕಲ ಕರ್ಮಗಳನ್ನೂ ಮಾಡಿದರೆ ಮನಸ್ಸು

ನಿರ್ಮಲವಾಗುವುದು. ನಿನ್ನ ಕಷ್ಟವು ಪರಿಹಾರವಾಗುವುದು. ಶ್ರೀಗುರು ನಾಥನು ರಕ್ಷಿಸುವನು. ಗುರುಸ್ಮರಣೆಗೈದರೆ ನಿನ್ನ ಬ್ರಹ್ಮಹತ್ಯಾಪಾಪವು ಪರಿಹಾರವಾಗುವುದು ಎಂದು ಹೇಳಿದನು

ಇದನ್ನು ಕೇಳಿ ಆಕೆಯು ಸ್ವಾಮಿಾ, ನೂರು ರೂಪಾಯಿಗಳು ನನ್ನಲ್ಲಿಲ್ಲ. ಅದು ನನಗೆ ಎಲ್ಲಿ ದೊರೆದೀತು ? ನಾನು ದೇಹಕಷ್ಟದಿಂದ ಒಂದು ತಿಂಗಳು ಉಪವಾಸಮಾಡಿ ಗುರುವನ್ನು ಪೂಜಿಸುವೆನು ಎಂದಳು.

ಆಗ ಆ ವಿಪ್ರನು ಎಲೌ ಸ್ತ್ರೀಯಳೇ, ನಿನಗೆ ಇಷ್ಟುಸ್ವಲ್ಪ ಧನ ವಿದ್ದರೂ ನಿರ್ಮಲಚಿತ್ತದಿಂದ ಗುರುಚರಣಗಳನ್ನು ಸೇವಿಸು. ಗುರು ಗಳು ನಿನ್ನ ಪಾಪಕ್ಕೆ ಪ್ರಾಯಶ್ಚಿತ್ತಮಾಡುವರು ಔದುಂಬರದ ಸನ್ನಿಧಿ ಯಲ್ಲಿ ವಾಸಿಸು. ಭಕ್ತರಲ್ಲಿ ದಯಾಶಾಲಿಗಳಾದ ಗುರುಗಳು ನಿನ್ನ ಬ್ರಹ್ಮ ಹತ್ಯಾದೋಷವನ್ನು ನಿವಾರಿಸುವರು. ನಿನಗೆ ಶಕ್ತಿಯಿದ್ದಷ್ಟು ದ್ರವ್ಯವನ್ನು ಗುರು ನಿರೂಪದಂತೆ ಕೊಡುವವಳಾಗು ಎಂದನು.

ಬಳಿಕ ಈಕೆಯು ಸಂತೋಷದಿಂದ ಶ್ರೀಗುರುಗಳ ಸನ್ನಿಧಿಗೆಹೋಗಿ ಸಂಗಮದಲ್ಲಿ ಸ್ನಾನಮಾಡಿ, ಪಾಪವಿನಾಶಿನಿಯಲ್ಲಿಯೂ ಏಳುಸಾರಿ ಸ್ನಾನ ಮಾಡಿ, ಔದುಂಬರವನ್ನು ಅರ್ಚಿಸಿ ಪ್ರದಕ್ಷಿಣ ನಮಸ್ಕಾರ ಮಾಡಿದಳು. ಹೀಗೆ ಮೂರುದಿನಗಳು ಕಳೆದುವು ಈಕೆಯ ಸ್ವಪ್ನದಲ್ಲಿ ಆ ಸಾಲ ಕೊಟ್ಟ ವಿಪ್ರನು ಬಂದು ಎಲೌ ಸ್ತ್ರೀಯಳೆ, ನನ್ನ ಧನವನ್ನು ನೀನು ಕೊಡಲಿಲ್ಲ ಧನವನ್ನು ಕೊಡು. ಇಲ್ಲದಿದ್ದರೆ ನಿನ್ನ ಪ್ರಾಣವನ್ನು ತೆಗೆಯುವೆನು, ಮತ್ತು ನಿನ್ನ ವಂಶವನ್ನು ಬೆಳೆಯಗೊಡುವುದಿಲ್ಲ ನೀನು ವ್ಯರ್ಥವಾಗಿ ಏಕೆ ಆಯಾಸಪಡುತ್ತೀಯೆ? ನಿನಗೆ ಮಗನು ಎಲ್ಲಿ ಹುಟ್ಟು ವನು ? ಎಂದು ಕೋಪಿಸಿ ಈಕೆಯನ್ನು ಹೊಡೆಯುವುದಕ್ಕೆ ಬಂದನು. ಆಗ ಆಕೆಯು ಹೆದರಿದವಳಾಗಿ ಔದುಂಬರದ ಹತ್ತಿರ ಬಂದು ಶ್ರೀಗುರು ನಾಥನನ್ನು ನೋಡಿದಳು.

ಆಗ ಗುರುಗಳು ಈಕೆಗೆ ಅಭಯುವನ್ನು ಕೊಟ್ಟು, ಆ ಸಾಲಕೊಟ್ಟ ಬ್ರಾಹ್ಮಣನನ್ನು ನೋಡಿ, ನೀನು ಈ ಹೆಂಗಸನ್ನು ಏಕೆ ಹೊಡೆಯುತ್ತೀ ಯ ? ಎಂದು ಕೇಳಿದರು.

ಆಗ ಆ ವಿಪ್ರನು—ಸ್ವಾಮಿಾ, ಈಕೆಯು ಪೂರ್ವಜನ್ಮದಲ್ಲಿ ನನ್ನಲ್ಲಿ ಸಾಲವನ್ನು ತೆಗೆದುಕೊಂಡು ಹಿಂದಕ್ಕೆ ಕೊಡದೆ ಅಪಹರಿಸಿದಳು ಇದಕ್ಕಾಗಿ ನಾನು ಪ್ರಾಣವನ್ನು ಬಿಟ್ಟೆನು ಸ್ವಾಮಿಾ, ನೀವು ದಯಾನಿಧಿಗಳಾಗಿದ್ದೀರಿ. ನೀವು ಪಕ್ಷಪಾತ ಮಾಡಬೇಡಿರಿ ಎಂದು ಬಿನ್ನವಿಸಿದನು ಈ ಮಾತನ್ನು ಕೇಳಿ ಗುರುವು ಎಲೈ ವಿಪ್ರನೇ ನೀನು ನಮ್ಮ ಭಕ್ತರನ್ನು ಏಕೆ ಕಾಡುವಿ ? ನಾನು ನಿನ್ನನ್ನು ಶಿಕ್ಷಿಸುವೆನು ನಾನು ಹೇಳುವುದನ್ನು ಕೇಳಿದರೆ ನಿನಗೆ ಹಿತವಾಗಿ ಪಿಶಾಚತ್ವವು ಪರಿಹರಿಸುವುದು ಆ ವಿಪ್ರವನಿತೆಯು ಏನು ಕೊಟ್ಟಾಳು ? ಆದರೂ ಆಕೆಯು ಕೊಟ್ಟುದನ್ನು ಪರಿಗ್ರಹಿಸು. ಇದಕ್ಕೊಪ್ಪದಿದ್ದರೆ ಇಲ್ಲಿಂದ ಹೊರಟುಹೋಗು ನಮ್ಮ ಭಕ್ತರನ್ನು ರಕ್ಷಿಸಿ ವಂಶಾಭಿವೃದ್ಧಿಯನ್ನು ಮಾಡುವೆನು ಎಂದಾಜ್ಞಾಪಿಸಿದರು

ಇದನ್ನು ಕೇಳಿ ಆ ಪಿಶಾಚಿಯು ವಂದಿಸಿ, ಸ್ವಾಮಿಾ ! ನಿಮ್ಮ ಚರಣಗಳನ್ನು ಕಂಡೆನು ನನ್ನನ್ನು ರಕ್ಷಿಸಿರಿ ನನಗೆ ಸದ್ಗತಿಯನ್ನುಂಟುಮಾಡುವ ಉಪಾಯವನ್ನು ನಿರೂಪಿಸಿರಿ. ನಿಮ್ಮಾಜ್ಞೆಯನ್ನು ಶಿರಸಾ ವಹಿಸುವೆನು ಎಂದಿತು

ಆಗ ಶ್ರೀ ಗುರುವು ಪಿಶಾಚಿಯೇ, ವಿಪ್ರವನಿತೆಯು ಭಕ್ತಿಯಿಂದ ಕರ್ಮವನ್ನು ಮಾಡಿದ ಹತ್ತನೇ ದಿನ ನಿನಗೆ ಗತಿಯಾದೀತು ಎಂದರು

ಬಳಿಕ ಆ ಸ್ತ್ರೀಯಳನ್ನು ಕುರಿತು, ಎಲೆ ಸ್ತ್ರೀಯಳೇ, ನಿನ್ನಲ್ಲಿರುವ ಹಣವನ್ನು ಆ ಪಿಶಾಚದ ಹೆಸರಿನಲ್ಲಿ ಅರ್ಪಿಸಿ ಅಷ್ಟತೀರ್ಥಗಳಲ್ಲಿಯೂ ಅದರ ಹೆಸರಿನಿಂದ ಸ್ನಾನಮಾಡಿ ಹತ್ತನೇ ದಿನ ಔದುಂಬರದಲ್ಲಿ ಸ್ನಾನ ಮಾಡು ಇದರಿಂದ ನಿನ್ನ ಬ್ರಹ್ಮಹತ್ಯಾದೋಷವು ಹೋಗುವುದು ನಿನಗೊಬ್ಬ ಮಗನೂ ಮತ್ತು ಒಬ್ಬ ಮಗಳೂ ಆಗುವರು ಎಂದಾಜ್ಞಾಪಿಸಿದರು. ಈಕೆಯು ಈ ರೀತಿಯಿಂದ ಸ್ವಪ್ನವನ್ನು ಕಂಡು ಭಯಚಕಿತಳಾಗಿ ಎಚ್ಚತ್ತು ಶ್ರೀಗುರುಗಳನ್ನು ಧ್ಯಾನಿಸಿ ಸ್ವಪ್ನದಲ್ಲಿ ಗುರುವು ಹೇಳಿದಂತೆ ಹತ್ತು ದಿನಗಳು ತೀರ್ಥಗಳಲ್ಲಿ ಸ್ನಾನಮಾಡಿದಳು. ಈಕೆಯ ಬ್ರಹ್ಮಹತ್ಯಾದೋಷವು ಹೋಯಿತು. ಈ ಬ್ರಾಹ್ಮಣನಿಗೆ ಗತಿಯಾಯಿತು. ಮೂರನೇ ದಿನ ಈಕೆಯು ಸ್ವಪ್ನದಲ್ಲಿ ಶ್ರೀಗುರುವು ಪ್ರತ್ಯಕ್ಷ

ರಾಗಿ ಎರಡು ತೆಂಗಿನಕಾಯಿಗಳನ್ನು ತಂದುಕೊಟ್ಟು ನೀನು ಇದನ್ನು ತಿನ್ನುವವಳಾಗು, ನಿನಗೆ ಮಕ್ಕಳಾಗುವರು, ಮುಂದೆ ನಿನ್ನ ವಂಶೋದ್ಧಾರವಾಗುವದು, ಚಿಂತಿಸದಿರು ಎಂದರು.

ಶ್ರೀಗುರು ನಿರೂಪದಂತೆ ಈ ದಂಪತಿಗಳು ಶ್ರೀಗುರುವನ್ನು ಆರಾಧಿಸಿದರು. ಚಿಂತಾಮಣಿಯು ಸ್ಪರ್ಶವಾದರೆ ಲೋಹವೂ ಪಾಷಾಣವೂ ಸುವರ್ಣವಾಗುವಂತೆ ಈಕೆಯು ಪಾಪರಹಿತಳಾದಳು. ಮುಂದೆ ಈಕೆಗೆ ಪೂರ್ಣಾಯುಷ್ಯವುಳ್ಳ ಇಬ್ಬರು ಮಕ್ಕಳಾದರು. ಈ ದಂಪತಿಗಳು ಜ್ಯೇಷ್ಠಪುತ್ರನಿಗೆ ಮೂರನೇ ವರ್ಷದಲ್ಲಿ ಚೂಡಾಕರ್ಮ ಮಾಡಬೇಕೆಂದು ಯೋಚಿಸಿದರು. ಆದರೆ ಹಿಂದಿನ ರಾತ್ರಿಯಲ್ಲಿ ಈ ಕುವರನಿಗೆ ಧನುರ್ವಾತರೋಗವು ಬಂದಿತು. ಅವಯವಗಳೆಲ್ಲವೂ ಡೊಂಕಾದುವು. ಕಣ್ಣು ಕೆಟ್ಟಿತು. ಈ ರೀತಿಯಿಂದ ಮಗುವು ಮೂರುದಿನಗಳು ಕಷ್ಟಪಟ್ಟು ಮೃತಪಟ್ಟಿತು. ತಾಯಿತಂದೆಗಳು ಅತಿಯಾಗಿ ದುಃಖಿಸಿದರು. ತಾಯಿಯು ಆಕ್ರೋಶದಿಂದ ಭೂಮಿಗೆ ತಲೆಯನ್ನು ಬಡಿಯುತ್ತಾ ಕಲ್ಲಿನಿಂದ ಹೃದಯವನ್ನು ಹೊಡೆದುಕೊಳ್ಳುತ್ತಾ ಭೂಮಿಯಲ್ಲಿ ಹೊರಳಾಡಿ ಕ್ಷಣಕಾಲ ಪ್ರಜ್ಞೆತಪ್ಪಿ ಕಣ್ಣೀರು ಸುರಿಸುತ್ತಾ ಬಿದ್ದಿದ್ದಳು. ಬಳಿಕ ಎಚ್ಚತ್ತು ಹೆಣವನ್ನು ತಬ್ಬಿಕೊಂಡು ದುಃಖಿಸುತ್ತಿದ್ದಳು. ಪುತ್ರನೇ, ಪ್ರಾಣರಕ್ಷಕನೇ, ನನ್ನ ಪ್ರಿಯನೇ, ನನ್ನನ್ನು ಬಿಟ್ಟು ಏಕೆ ಹೋದೆ ? ಅಥವಾ ಎಲ್ಲಿಗಾದರೂ ಆಟಕ್ಕೆ ಹೋದೆಯಾ? ಸ್ತನ್ಯವು ಸುರಿಯುತ್ತಿರುವುದು, ಬೇಗ ಬಾ. ನಿನ್ನ ಗುಣವನ್ನು ಹೇಗೆ ಮರೆಯಲಿ ? ನಿನ್ನ ಮುದ್ದು ಮಾತನ್ನು ಹೇಗೆ ಮರೆಯಲಿ ? ನಿನ್ನ ರೂಪವು ಸ್ವಪ್ನದಲ್ಲಿಯೂ ನಿಂತಿದೆ. ಮೊದಲು ನನಗೆ ಐವರು ಮಕ್ಕಳು ಸತ್ತರು. ಶ್ರೀ ಗುರುವು ನಿನ್ನನ್ನು ಕೊಟ್ಟರೆಂದು ತಿಳಿದಿದ್ದೆನು. ನಿನ್ನನ್ನು ಪಡೆದ ಬಳಿಕ ನಾನು ಸುಖವಾಗಿದ್ದೆನು. ನೀನು ಮುಪ್ಪಿನಲ್ಲಿ ನನ್ನನ್ನು ರಕ್ಷಿಸುವಿಯೆಂದು ತಿಳಿದಿದ್ದೆನು. ಈಗ ನಮ್ಮನ್ನು ಬಿಟ್ಟು ಹೋಗುವುದು ಉಚಿತವಲ್ಲ. ನಿನ್ನನ್ನು ನೋಡಿ ಹಿಂದಿನ ದುಃಖವನ್ನು ಮರೆತಿದ್ದೆನು, ಎಂದು ದುಃಖಿಸುತ್ತಿದ್ದಳು.

ಇದನ್ನು ನೋಡಿ ಜನರು ಈಕೆಯನ್ನು ಸಮಾಧಾನ ಮಾಡುತ್ತಿದ್ದರು. ದೇವದಾನವ ಋಷೀಶ್ವರರಿಗೆ ಕೂಡಾ ಕೇಡು ತಪ್ಪದು. ಬ್ರಹ್ಮನು

ಹಣೆಯಲ್ಲಿ ಬರೆವಂತೆ ಆಗುವುದು ಹರಿಹರರೂ ಅನೇಕ ಅವತಾರಗಳನ್ನು ಮಾಡಿದರು. ಆದರೂ ಅವತಾರಗಳು ಸ್ಥಿರವಾಗಿರವು, ನೀವು ಮನುಷ್ಯರಲ್ಲವೇ ? ದುಃಖಿಸದೇ ಸ್ಥಿರವಾಗಿರಿ ಎಂದು ಸಮಾಧಾನ ಮಾಡುತ್ತಿದ್ದರು

ಆಗ ಆಕೆಯು ಹೇಳಿದುದೇನೆಂದರೆ — ಶ್ರೀ ನೃಸಿಂಹಸರಸ್ವತಿಗಳು ಈ ಭೂಮಿಯಲ್ಲಿ ಪ್ರಸಿದ್ಧರಾಗಿ ಔದುಂಬರದಲ್ಲಿ ವಾಸಿಸುತ್ತಾ ಇದ್ದು ನನಗೆ ಈ ಪುತ್ರನಾಗುವಂತೆ ವರವನ್ನಿತ್ತರು, ಆದರೆ ಇದು ಸುಳ್ಳಾಯಿತು ಮಗನು ಶತಾಯುವಾಗಲಿಲ್ಲ ನನಗೆ ಪುತ್ರಶೋಕವನ್ನು ಕೊಟ್ಟು ನನ್ನನ್ನು ಕೊಂದರು. ಇದರಿಂದ ಗುರುಗಳಿಗೆ ನನ್ನನ್ನು ಕೊಂದಪಾಪವು ಬರುವುದು ಮಗನಿಗಾಗಿ ಪ್ರಾಣ ಬಿಡುವೆನು. ಗುರುವೇ, ನಿಮ್ಮ ವಾಕ್ಯವು ನಿಜವೆಂದು ತಿಳಿದಿದ್ದೆನು ಈ ಭೂಮಿಯಲ್ಲಿ ನಿಮ್ಮನ್ನು ಸತ್ಯ ಸಂಕಲ್ಪರೆಂದು ತಿಳಿದಿದ್ದೆನು ನಿಮ್ಮನ್ನು ವಿಶ್ವಾಸಘಾತಕಿಗಳು ಎನ್ನಬಾರದೇಕೆ ? ನೀವು ತ್ರಿಮೂರ್ತಿಗಳ ಅಂಶೀಭೂತರಲ್ಲವೇ ? ಹಿಂದಿನ ಯುಗದಲ್ಲಿ ವಿಭೀಷಣನಿಗೂ ಧ್ರುವನಿಗೂ ವರವನ್ನು ಕೊಟ್ಟುದು ನಿಜವೆಂದು ಹೇಳುವುದು ಹೇಗೆ ? ನಿಮ್ಮನ್ನು ನಂಬಿದ ನನ್ನನ್ನು ಉಪೇಕ್ಷಿಸಬಹುದೇ? ನನ್ನ ಮನಸ್ಸು ನಿಷ್ಠುರವುಳ್ಳದ್ದಾಗಿದೆ. ನಿಮಗೋಸುಗ ನಾನು ಸಾಯುವೆನು. ಜನರು ನಿಮ್ಮ ಸ್ಥಳಕ್ಕೆ ಬರುವರು ಸೇವಿಸುವರು. ಔದುಂಬರವನ್ನು ಅರ್ಚಿಸಿ ಪ್ರದಕ್ಷಿಣೆಯನ್ನೂ ಪುರಶ್ಚರಣೆಯನ್ನೂ ಮಾಡುವರು. ನಾನೂ ಪುರಶ್ಚರಣ ಮಾಡಿದೆನು. ಆದರೆ ಈ ಫಲವುಂಟಾಯಿತು ! ನಿಮ್ಮ ಸ್ಥಳದಲ್ಲಿ ವಿಶ್ವಾಸವೇನು? ಈ ಭೂಮಿಯಲ್ಲಿ ನಿಮಗೆ ಕೀರ್ತಿಯುಂಟಾಗಿದೆ; ಆದರೆ ನನಗೆಮಾತ್ರ ಈ ದುಃಖವುಂಟಾಗಿದೆ. ಮುಂದೆ ನಿಮ್ಮನ್ನು ಯಾವ ಭಕ್ತರು ಭಜಿಸುವರು. ಅವರಿಗೆ ನಿಮ್ಮಲ್ಲಿ ನಂಬಿಕೆಯೇನು ? ಬ್ರಹ್ಮಹತ್ಯಾ ಪೀಡಿತಳಾದ ನಾನು ನಿಮ್ಮ ಪಾದವನ್ನು ಮರೆಹೊಕ್ಕೆನು. ನೀವು ಮಧ್ಯಕಾಲದಲ್ಲಿ ನಮ್ಮನ್ನು ಕೈ ಬಿಡಬಹುದೇ ? ಹುಲಿಯ ದೆಸೆಯಿಂದಂಜಿ ಬಂದ ಹಸುವು ಕಟುಕನ ಮನೆಯನ್ನು ಹೊಗಲು ಅವನು ಅದನ್ನು ಕೊಲ್ಲುವಂತಾಯಿತು. ಪೂಜೆಗೆಂದು ದೇವಾಲಯಕ್ಕೆ ಅರ್ಚಕನು ಹೋಗಲು ಆ ದೇವಾಲಯವು ಅವನ ಮೇಲೆ ಬಿದ್ದು ಕೊಂದಂತಾಯಿತು ! ಗುರುವೇ, ನನ್ನ ಮಗನನ್ನು ನೀವು ರಕ್ಷಿಸಲಿಲ್ಲ ಎಂದು ಅಪೋಧಾತ್ತಿ

ಯಲ್ಲಿಯೂ ದುಃಖಿಸುತ್ತಾ ಯಾರಮಾತನ್ನೂ ಕೇಳದೇ ಇದ್ದಳು ಆಗ ಅನೇಕ ಬ್ರಾಹ್ಮಣರು ಬಂದು ಎಲೌ ಸ್ತ್ರೀಯಳೆ, ಹೀಗೆ ದುಃಖಿಸದಿರು. ಯಾವ್ಯಾವ ಕಾಲದಲ್ಲಿ ಯಾರ್ಯಾರಿಗೆ ಏನೇನಾಗಬೇಕೋ ಅದು ಬ್ರಹ್ಮಾದಿಗಳಿಗೂ ತಪ್ಪದು. ಗಂಗೆಯ ದಡಕ್ಕೆ ಹೋಗಿ ಪ್ರೇತಸಂಸ್ಕಾರ ಮಾಡೋಣ ನಡೆ ಎಂದರು.

ಆಗ ಆಕೆಯು ಇದನ್ನು ಕೇಳಿ ಅತಿಯಾಗಿ ಅಳುತ್ತಾ ಆ ಹೆಣವನ್ನಪ್ಪಿಕೊಂಡು ಕೂಗುತ್ತಿದ್ದಳು ಅಯ್ಯಾ, ನನ್ನನ್ನೂ ಈ ಮಗುವಿನೊಂದಿಗೆ ಅಗ್ನಿಯಲ್ಲಿ ಸುಟ್ಟುಬಿಡಿರಿ ಎಂದಳು.

ಆಗ ಅವರು ಎಲೌ ಕರ್ಕಶಿಯೇ, ಈ ಹೆಣಕ್ಕಾಗಿ ಪ್ರಾಣ ಬಿಡುವುದು ಧರ್ಮವಲ್ಲ ಮಗನಿಗಾಗಿ ಯಾರೂ ಸತ್ತುದನ್ನು ನಾವು ಎಲ್ಲಿಯೂ ನೋಡಲೂ ಇಲ್ಲ ಮತ್ತು ಕೇಳಲೂ ಇಲ್ಲ ಆತ್ಮಹತ್ಯೆಯು ದೋಷಕರವು ಎಂದು ಜನರು ನಾನಾವಿಧವಾಗಿ ಹೇಳಿದರೂ ಈಕೆಯು ಪ್ರಾಣ ಬಿಡುವೆನೆಂದು ನಿರ್ಧರಿಸಿದಳು ಆ ದಿನ ಎರಡು ಪ್ರಹರವಾದರೂ ಹೆಣವನ್ನು ತೆಗೆಯಲಿಲ್ಲ. ಆ ಗ್ರಾಮದಲ್ಲಿ ಗೋಳಾಟ ಹತ್ತಿತು ಇಷ್ಟರಲ್ಲಿಯೇ ಒಬ್ಬ ಬ್ರಹ್ಮಚಾರಿಯು ಅಲ್ಲಿಗೆ ಬಂದು ಈಕೆಗೆ ಆತ್ಮಜ್ಞಾನವನ್ನು ಹೇಳತೊಡಗಿದನು. ಇವನು ಬ್ರಹ್ಮಚಾರಿಯಲ್ಲ ಶ್ರೀಗುರುವೇ ಈ ವೇಷದಿಂದ ಬಂದಿದ್ದರು. ಮನೋಹರವಾದ ಈ ಚರಿತ್ರೆಯನ್ನು ಕೇಳಿದರೆ ಶತಾಯುಷ್ಯವುಳ್ಳ ಪುತ್ರರುಂಟಾಗುವರು ಮತ್ತು ಕೇಳಿದವರಿಗೆ ರೋಗ ಭಯವಿಲ್ಲ. ಪೂರ್ಣಾಯುಷಿಗಳಾಗುವರು. ಇದು ಸತ್ಯವು ಎಂದು ನಿರೂಪಿಸಿದರೆಂಬಲ್ಲಿಗೆ ಶ್ರೀಗುರುಕಥಾಕಲ್ಪತರುವಿನಲ್ಲಿ ಇಪ್ಪತ್ತನೇ ಅಧ್ಯಾಯವು ಮುಗಿದುದು.

---

## ೨೧ ನೆಯ ಅಧ್ಯಾಯ.

---

ಸಿದ್ಧರು ನಾಮಧಾರಕನೇ ಕೇಳು, ಎಂದು ಹೇಳಲಾರಂಭಿಸಿದರು:– ಶಿಷ್ಯನೇ, ಆ ಬ್ರಹ್ಮಚಾರಿಯು ಆ ಸತಿಗೆ ಹೇಳಿದುದೇನೆಂದರೆ:—

ಎಲೌ ಸ್ತ್ರೀಯಳೇ, ಮೂರ್ಖತ್ವದಿಂದೇಕೆ ದುಃಖಿಸುವಿ ? ಈ ಭೂಮಿಯಲ್ಲಿ ಯಾರು ಸ್ಥಿರವಾಗಿರುವರು ? ಹುಟ್ಟಿದವರ್‍ಯಾರು ? ಸಾಯುವವರ್‍ಯಾರು ? ನೀರಿನಲ್ಲಿ ಹುಟ್ಟಿದ ನೊರೆಯ ಗುಳ್ಳೆಯು ಸ್ಥಿರವಾಗಿರುವುದೇ? ಈ ದೇಹವು ಪಂಚಭೂತಾತ್ಮಕವಾದುದು ಪಂಚಭೂತಗಳು ಬೇರೆಯಾಗುವುವು. ಈ ಪಂಚಭೂತಗಳ ಗುಣಗಳು ಮಾಯಪಾಶದಿಂದ ಸುತ್ತಿ ದೇಹವೇ ನಾನೆಂಬ ಭ್ರಾಂತಿಯನ್ನುಂಟುಮಾಡುವುವು. ಈ ಪುತ್ರಮಿತ್ರಕಳತ್ರಾದಿಗಳು ನಿಜವಲ್ಲ ಸತ್ವ ರಜಸ್ತಮೋಗುಣಗಳು ಈ ಪಂಚಭೂತಗಳಿಂದಾಗಿವೆ. ಸತ್ವಗುಣದಿಂದ ದೇವತ್ವವೂ, ರಜೋಗುಣದಿಂದ ಮನುಷ್ಯತ್ವವೂ, ತಮೋಗುಣದಿಂದ ರಾಕ್ಷಸತ್ವವೂ ಕರ್ಮಾನುಗುಣವಾಗಿ ಉಂಟಾಗುವುವು ಈ ಪಾಪಪುಣ್ಯಗಳಲ್ಲಿ ಯಾವುದನ್ನು ಮಾಡದರೆ ಅದಕ್ಕೆ ತಕ್ಕ ಫಲವನ್ನು ನಾವು ಅನುಭವಿಸುವೆವು. ಆಯಾ ಗುಣಗಳಂತೆ ಆಯಾ ಇಂದ್ರಿಯಗಳು ಅವರ ಅಧೀನವಾಗಿರುವುವು ಎಲ್ಲರೂ ಮಾಯಪಾಶದಿಂದ ಸುತ್ತಲ್ಪಟ್ಟು ಸುಖದುಃಖಗಳಲ್ಲಿ ತೊಳಲುವರು. ಮನುಷ್ಯನು ಕರ್ಮಾನುಸಾರವಾಗಿ ಸಂಸಾರದಲ್ಲಿ ಸುಖಿಸುವನು. ತನ್ನ ಪೂರ್ವಜನ್ಮದ ಕರ್ಮಫಲದಿಂದ ಸುಖದುಃಖಗಳು ಉಂಟಾಗುವುವು. ಕೋಟಿಕಲ್ಪವರ್ಷಗಳು ಆಯುಷ್ಯವುಳ್ಳ ದೇವರ್ಷಿಗಳಗಾದರೂ ಅವರಿಗೆ ಕರ್ಮ ಫಲವು ತಪ್ಪುವುದಿಲ್ಲ ಹೀಗಿರಲು ಮನುಷ್ಯರ ಪಾಡೇನು ? ಮನುಷ್ಯನು ಕರ್ಮಾನುಗುಣವಾದ ಫವವನ್ನು ಪಡೆಯುವನು ಮನುಷ್ಯನಿಗೆ ನಾನಾವಿಕಾರಗಳು ಉಂಟಾಗುವುವು. ಆದರೆ ಇದು ಸ್ಥಿರವಲ್ಲವು ಈ ವಿಕಾರವು ನಮ್ಮ ಪಾಪದಿಂದಾದುದೆಂದು ತಿಳಯಬೇಕು ಆದುದರಿಂದ ಜ್ಞಾನಿಯು ಸಂತೋಷದಲ್ಲಿ ಉಬ್ಬದೆಯೂ, ದುಃಖದಲ್ಲಿ ತಗ್ಗದೆಯೂ ಇರಬೇಕು ಗರ್ಭೋತ್ಪತ್ತಿಯಾದಾಗ ಯಾವ ಆಕಾರವು ಕಾಣಿಸುವುದು ? ನೀರಿನಲ್ಲಿ ಉಂಟಾದ ಗುಳ್ಳೆಗಳು ಆ ಕ್ಷಣವೇ ನಷ್ಟವಾಗುವಂತೆ ಈ ದೇಹವು ಸ್ಥಿರವಾದುದಲ್ಲ. "ಜಾತಸ್ಯಮರಣಂಧ್ರುವಂ" (ಹುಟ್ಟಿದಾಗಲೇ ವಿನಾಶವುಂಟಾಗುವುದೆಂದು) ತಿಳಿಯಬೇಕು. ಕರ್ಮಾನುಗುಣವಾಗಿ ನಾವು ಫಲಗಳನ್ನು ಈ ದೇಹದಲ್ಲಿ ಅನುಭವಿಸಬೇಕು. ಬಬ್ಬನು ಪೂರ್ವ ವಯಸ್ಸಿನಲ್ಲಾಗಲೀ ಮುಪ್ಪಿನಲ್ಲಾಗಲೀ ಸಾಯುವುದು ತನ್ನ ಪೂರ್ವಜನ್ಮದ ಕರ್ಮದ ಫಲವೆಂದು

ತಿಳಿಯಬೇಕು ಮಾಯಾಪಾಶದಿಂದ ಸುತ್ತಲ್ಪಟ್ಟ ಮನುಷ್ಯನು ಇವರು ತಂದೆಯು, ಮಗನು, ತಾಯಿಯು, ಹೆಂಡತಿಯು, ಸ್ನೇಹಿತನು ಎಂದು ಮೂಢತನದಿಂದ ಹೇಳಿಕೊಳ್ಳುವನು. ಮನುಷ್ಯನು ಬಂದುವೇಳೆ ನಿರ್ಮಲ ದೇಹವುಳ್ಳವನಾಗಿದ್ದರೂ ಮಾಂಸ ರಕ್ತ ಮಲ ಮೂತ್ರಗಳಿಂದ ಕೂಡಿದ ಘೋರವಾದ ಸ್ಥಾನದಿಂದ ಹುಟ್ಟಿದವನಾಗಿರುವನು ನಮ್ಮ ಕರ್ಮಾನುಸಾರವಾಗಿ ಬ್ರಹ್ಮನು ನಮ್ಮ ಹಣೆಯಲ್ಲಿ ಸುಖದುಃಖ ಗಳನ್ನು ಬರೆದಿರುವನು. ಇದನ್ನು ನಾವು ಅನುಭವಿಸಲೇಬೇಕು ಇದನ್ನು ಗೆದ್ದವರ್ಯಾರೂ ಇಲ್ಲ ಈ ದೇಹವು ಅಸ್ಥಿರವು ಸ್ವಪ್ನ ದಲ್ಲಿ ಕಂಡ ವಸ್ತುವು ಎಚ್ಚರವಾದ ಬಳಿಕ ಸುಳ್ಳಾಗಿ ತೋರು ವಂತೆಯೂ ಇಂದ್ರಜಾಲ ಗಾರುಡದಂತೆಯೂ ಈ ದೇಹವು ಸ್ಥಿರವಲ್ಲ ವೆಂದು ತಿಳಿಯಬೇಕು. ನೀನು ಇದುವರೆಗೆ ಎಷ್ಟುಕೋಟಿ ಜನ್ಮದಲ್ಲಿ ಹುಟ್ಟಿದೆ? ಪಶು ಪಕ್ಷಿ ಮೃಗ ಮನುಷ್ಯ ದೇಹಗಳಲ್ಲಿ ಎಷ್ಟುಬಾರಿ ಹುಟ್ಟಿದೆ? ನೀನು ಯಾರ್ಯಾರಿಗೆ ತಾಯಿಯಾಗಿದ್ದೆ ? ಯಾರ್ಯಾರಿಗೆ ಹೆಂಡತಿಯಾಗಿದ್ದೆ? ಎಂಬುದನ್ನು ನಿಜವಾಗಿ ಹೇಳು ನಿನ್ನ ಹಿಂದಿನ ಜನ್ಮದ ತಾಯಿ ತಂದೆ ಗಳ್ಯಾರು ? ಈಗ ಮಗನು ಸತ್ತನೆಂದು ವೃಥಾ ಏಕೆ ದುಃಖಿಸುತ್ತೀಯೆ ? ಪಂಚಭೂತಾತ್ಮಕವಾದ ದೇಹವು ಚರ್ಮ, ಮಾಂಸ, ಎಲುಬು, ಮೆದುಳು ಗಳ ಸಮೂಹದಿಂದ ಸುತ್ತಲ್ಪಟ್ಟು ಮಲಬದ್ಧವಾದ ಹೊಸ ದೇಹವುಂಟಾ ಯಿತು ಎಲ್ಲಿಯ ಮಗನು ? ಸತ್ತುದಲ್ಲಿ ? ಏಕೆ ಭ್ರಮೆಯಿಂದಳುತ್ತೀಯೆ ? ಜನರು ಇದನ್ನು ಸಂಸ್ಕಾರಕ್ಕೆ ತೆಗೆದುಕೊಂಡು ಹೋಗಲಿ ಬಿಟ್ಟು ಬಿಡು ಎಂದು ಬ್ರಹ್ಮಚಾರಿಯು ತತ್ವಬೋಧೆಯನ್ನು ಮಾಡಿದನು

ಆಗ ಆಕೆಯು ಸ್ವಾಮಿಾ, ನನಗೆ ಸಕಲ ಧರ್ಮಗಳನ್ನೂ ನಿರೂಪಿ ಸಿರಿ. ನನ್ನ ಅಂತಃಕರಣವು ಸ್ಥಿರವಾಗಿಲ್ಲ ಪ್ರಾರಬ್ಧಕರ್ಮವೇ ಪ್ರಮಾಣವಾದರೆ ಶ್ರೀಹರಿಯನ್ನೇಕೆ ನಾವು ಭಜಿಸಬೇಕು ? ಸ್ಪರ್ಶ ಮಣಿಯು ತಗಲಲು ಲೋಹವು ಚಿನ್ನವಾಗದೇ ? ನಾವು ಅದೃಷ್ಟಹೀನ ರಾಗಿ ಗುರುಚರಣಗಳನ್ನು ಹಿಡಿದೆವು ಗುರುವು ಅಭಯವನ್ನು ಕೊಡ ಲಿಲ್ಲ ಒಬ್ಬನಿಗೆ ಜ್ವರಬಂದರೆ ಔಷಧಿಯನ್ನು ಕೊಟ್ಟು ಗುಣಮಾಡುವು ದಿಲ್ಲವೇ? ಗುರುವು ಅನೇಕರಿಗೆ ಕಷ್ಟವನ್ನು ಪರಿಹರಿಸಿದರು, ಶ್ರೀನೃಸಿಂಹ

ಸರಸ್ವತಿಗಳು ನನಗೆ ಕೊಟ್ಟಿದ್ದ ವರವು ಸುಳ್ಳಾಯಿತು. ನಾನು ಗುರುಗಳನ್ನು ಪೂಜಿಸಿದೆನು. ಅವರ ವಚನವನ್ನು ನಂಬಿ ಸ್ವಸ್ಥಚಿತ್ತಳಾಗಿದ್ದೆನು. ಇದರಲ್ಲಿ ನನ್ನ ಮೂರ್ಖತನವೇನು ? ಇನ್ನು ನಾನು ದೇಹವನ್ನು ಬಿಡುವೆನು. ಗುರುವು ಈ ಕೀರ್ತಿಯನ್ನು ಪಡೆಯಲಿ ! ಎಂದಳು.

ಆಗ ಬ್ರಹ್ಮಚಾರಿಯು ಎಲೌ ಸ್ತ್ರೀಯಳೇ, ನೀನು ಗುರುವನ್ನು ನಂಬಿ ಪೂರ್ಣಾಯುಷ್ಯವುಳ್ಳ ಮಗನನ್ನು ನೀನು ಪಡೆದಿದ್ದೆ. ಆದರೆ ಇವನಿಗೆ ಮರಣವಾಯಿತು. ಈ ಪಂಚಗಂಗಾಸಂಗಮದಲ್ಲಿರುವ ಔದುಂಬರತರುವಿನ ಹತ್ತಿರಕ್ಕೆ ಈ ಶವವನ್ನು ತೆಗೆದುಕೊಂಡುಹೋಗು ಎಂದು ಉಪಾಯವನ್ನು ಹೇಳಿದನು.

ಇದನ್ನು ನಂಬಿ ಆಕೆಯು ಪ್ರೇತವನ್ನು ಹೊತ್ತುಕೊಂಡು ಬಂದು ಗುರುಗಳ ಪಾದುಕೆಗಳ ಮೇಲೆ ಅಪ್ಪಳಿಸಿದಳು. ಇದರಿಂದ ಪಾದುಕೆಗಳು ರಕ್ತಮಯವಾದುವು. ಈಕೆಯು ಸಿಟ್ಟಿನಿಂದ ಅಳುತ್ತಿದ್ದಳು. ಎಲ್ಲಾ ಶೋಕಗಳಿಗಿಂತಲೂ ಪುತ್ರಶೋಕವು ಬಲವಾದುದು. ಈ ಹುಡುಗನು ಕ್ಷಯರೋಗದಿಂದ ಸತ್ತಿದ್ದನು. ಇದಕ್ಕೆ ತಾಯಿ ತಂದೆಗಳೇ ಕಾರಣರು. ರಾತ್ರಿಯಾಯಿತು ಪ್ರೇತವನ್ನು ಸಂಸ್ಕಾರಕ್ಕೆ ಕೊಡೆಂದು ವಿಪ್ರರು ಕೇಳಿದರು. ಸಂಸ್ಕಾರವಾಗಿ ನಾವು ಮನೆಗೆ ಹೋಗುವೆವು ಎಂದರು. ಮನುಷ್ಯರಿಲ್ಲದ ಅಡವಿಯಲ್ಲಿ ಯಾರಿರುವರು ? ಪ್ರೇತವನ್ನು ಕೊಡೆಂದು ಕೇಳಿದರು. ಆಗ ಆಕೆಯು ಪ್ರೇತವನ್ನು ತೆಗೆದುಕೊಂಡು ಹೋದರೆ ನನ್ನನ್ನೂ ಅದರೊಡನೆ ಸುಟ್ಟುಬಿಡಿರಿ ಎಂದು ಹೇಳಿ ಹೆಣವನ್ನು ಹೊಟ್ಟೆಯಮೇಲಿಟ್ಟು ಕೊಂಡು ಪಾದುಕೆಗಳಮೇಲೆ ಹೊರಳಾಡುತ್ತಿದ್ದಳು.

ಈಕೆಯ ಜ್ಞಾತಿಗಳು ಎಲೌ ಸ್ತ್ರೀಯಳೇ, ಈ ಕಾಡಿನಲ್ಲಿ ಈಗ ನಾವು ಇರಬಾರದು. ಇಲ್ಲಿ ಕಳ್ಳರ ಬಾಧೆಯಾದೀತು ಏಳು. ಸ್ನಾನಮಾಡಿ ಮನೆಗೆ ಹೋಗೋಣ. ಈ ದಿನ ನಮಗೆ ಉಪವಾಸವಾಯಿತು. ನಾವು ನಾಳೆ ಬೆಳಿಗ್ಗೆ ಬಂದು ಶವವನ್ನು ದಹನಮಾಡುವೆವು ಎಂದರು ಮತ್ತು ಈಗ ಕರ್ಕಶಿಯು ಹೆಣವನ್ನು ದಹನಕ್ಕೆ ಬಿಟ್ಟುಕೊಡುವುದಿಲ್ಲ; ನಾಳೆ ಶವವು ದುರ್ಗಂಧವುಳ್ಳದ್ದಾಗುವುದು, ಆಗ ದಹನಕ್ಕೆ ಬಿಟ್ಟುಕೊಟ್ಟಾಳು ಎಂದು ಹೇಳಿ ಎಲ್ಲರೂ ಹೊರಟು ಹೋದರು.

ಈ ತಾಯಿ ತಂದೆಗಳು ಆ ರಾತ್ರಿ ಅಲ್ಲಿ ದುಃಖಿಸುತ್ತಿದ್ದರು. ಎರಡು ದಿನಗಳಿಂದಲೂ ಇವರಿಗೆ ನಿದ್ರೆಯಿಲ್ಲ ರಾತ್ರಿ ಮೂರು ಜಾವವಾಯಿತು. ಈಕೆಗೆ ನಿದ್ರೆಬಂದಿತು. ಈಕೆಯು ಸ್ವಪ್ನದಲ್ಲಿ ಜಟಾಧಾರಿಯಾಗಿಯೂ, ಭಸ್ಮಲೇಪಿತನಾಗಿಯೂ, ವ್ಯಾಘ್ರಚರ್ಮವನ್ನೂ ರುದ್ರಾಕ್ಷಮಾಲೆಗಳನ್ನೂ ಧರಿಸಿದವನಾಗಿಯೂ, ಯೋಗ ದಂಡ ತ್ರಿಶೂಲಗಳನ್ನು ಧರಿಸಿರುವವನಾಗಿಯೂ ಇರುವ ಯತಿಯು ಆ ಔದುಂಬರದ ಹತ್ತಿರ ಬಂದು ಎಲೌ ಪತಿವ್ರತೆಯೆ! ನಮ್ಮಲ್ಲಿನ ಆಕ್ರೋಶದಿಂದ ಏಕೆ ದುಃಖಿಸುತ್ತೀಯೆ? ನಿನ್ನ ಪುತ್ರನಿಗೇನಾಯಿತು? ಇದಕ್ಕೆ ಪ್ರತೀಕಾರ ಮಾಡೋಣ ಎಂದು ಭಕ್ತವತ್ಸಲನಾದ ಗುರುವು ಅಭಯವನ್ನು ಕೊಟ್ಟನು ಮತ್ತು ಭಸ್ಮವನ್ನು ಪ್ರೇತದ ಸರ್ವಾಂಗದಲ್ಲಿಯೂ ಹಚ್ಚಿದವನಾಗಿ, ಸ್ತ್ರೀಯಳೇ! ಸರ್ವಾಂಗದಲ್ಲಿಯೂ ವಾಯುವನ್ನು ತುಂಬುವವಳಾಗು ಪ್ರಾಣವೆಂದರೆ ಬಂದು ವಾಯುವು ವಾಯುವನ್ನು ತುಂಬಲು ನಿನ್ನ ಮಗನು ಜೀವಿಸುವನು ಎಂದು ಅನುಜ್ಞೆಯಿತ್ತರು.

ಈಕೆಯು ಈ ರೀತಿಯಾದ ಸ್ವಪ್ನವನ್ನು ಕಂಡು ಹೆದರಿದವಳಾಗಿ ಎಚ್ಚತ್ತು ಇದೇನು ಭ್ರಾಂತಿಯು? ಯಾವುದನ್ನು ಚಿಂತಿಸುತ್ತಾ ನಾವು ಮಲಗುವೆವೋ ಸ್ವಪ್ನದಲ್ಲಿಯೂ ಅದನ್ನೇ ಕಾಣುವೆವು ಶ್ರೀ ನೃಸಿಂಹ ಮುನಿಯು ಎಲ್ಲಿಂದ ಬಂದನು? ನಮ್ಮ ಪ್ರಾರಬ್ಧವು ಹೀಗಿರಲು ದೇವರ ಮೇಲೆ ಏಕೆ ಮಾತನ್ನು ಹೊರಿಸಬೇಕು? ಮೂರ್ಖರಾದ ನಾವು ಅಜ್ಞಾನದಿಂದ ಏನು ಹೇಳುವೆವು? ಗುರುವಿನಲ್ಲಿ ಏನು ದೋಷವಿದೆ? ಎಂದು ಚಿಂತಿಸುತ್ತಿದ್ದಳು ಹೆಣದ ಸರ್ವಾಂಗದಲ್ಲಿಯೂ ಬಿಸಿಯಾಗುತ್ತಾ ಬಂದಿತು. ಸರ್ವಸಂಧಿಪ್ರದೇಶಗಳೂ ಸಜೀವಿಗಳಾದುವು ಈ ಹೆಣಕ್ಕೇನಾಯಿತು? ಭೂತಸಂಚಾರವಾಯಿತೇ? ಎಂದು ಸಂಶಯದಿಂದ ಹದರಿ ಹಣವನ್ನು ಬಿಟ್ಟು ದೂರ ಹೋದಳು ಈ ಬಾಲಕನು ಎದ್ದು ಕುಳಿತನು ಅಮ್ಮಾ, ನನಗೆ ಹಸಿವಾಗುವುದು, ಅನ್ನವನ್ನುಕೊಡು ಎಂದು ಅಳುತ್ತಾ ತಾಯಿಯ ಹತ್ತಿರ ಬಂದನು. ಈಕೆಯು ಸ್ತನಗಳಲ್ಲಿ ಮೂವತ್ತೆರಡು ಧಾರೆಗಳು ಹೊರಟವು. ಸಂತೋಷ ಮತ್ತು ಭಯದಿಂದ ಕೂಡಿದ ಈಕೆಯು ಸಂಶಯದಿಂದ ಆ ಹುಡುಗನನ್ನು ತೊಡೆಯಮೇಲಿಟ್ಟುಕೊಂಡು ತನ್ನ ಗಂಡನ

ಹತ್ತಿರ ಬಂದು ಆತನನ್ನೆಬ್ಬಿಸಿ ವೃತ್ತಾಂತವನ್ನೆಲ್ಲಾ ಹೇಳಿದಳು. ಆತನು ಆಕೆಗೆ ಇದು ಶ್ರೀ ಗುರುಗಳ ಚರಿತ್ರೆಯೆಂದು ಹೇಳಿದನು ಈ ದಂಪತಿಗಳು ಈ ಔದುಂಬರವನ್ನು ಪ್ರದಕ್ಷಿಣೆ ಮಾಡಿ ವಂದಿಸಿ ನಾನಾ ಪರಿಯಿಂದ ಸ್ತುತಿಸಿದರು. ಜಯವರದಮೂರ್ತಿಯೇ ! ತ್ರಿಮೂರ್ತಿ ಸ್ವರೂಪನೇ ! ಭಕ್ತವತ್ಸಲನೇ ! ನೀನು ಭಕ್ತರ ಇಷ್ಟವನ್ನು ನೋಡುತ್ತೀಯೆ ! ವಿಶ್ವತಾರಕನೇ ! ನಿನ್ನ ಮಹಿಮೆಯನ್ನು ವರ್ಣಿಸಲು ಅಶಕ್ಯವಾಗಿದೆ, ಮನ್ನಿಸಿರಿ ನಾವು ನಿನ್ನನ್ನು ಕುರಿತು ಮಾಯಾ ಮೋಹಿತರಾಗಿ ನಿಷ್ಠುರ ವಾಕ್ಯಗಳನ್ನಾಡಿದೆವು ಎಂದು ವಂದಿಸಿ ಗಂಗೆಯಲ್ಲಿ ಸ್ನಾನವಮಾಡಿ ಗುರುಗಳ ಪಾದುಕೆಗಳ ರಕ್ತವನ್ನು ತೊಳೆದು ಔದುಂಬರಕ್ಕೆ ಅಭಿಷೇಕ ಮಾಡಿ ಅಲ್ಲಿ ದೀಪವನ್ನು ಹಚ್ಚಿಸಿದರು ಭಕ್ತಿಯಿಂದ ಮಂತ್ರಪೂರ್ವಕವಾಗಿ ವಿಧಿಯಿಂದ ಶಮೀಪುಷ್ಪಗಳಿಂದರ್ಚಿಸಿದರು ನೀರಾಜನ ಸಮಯದಲ್ಲಿ ಈಕೆಯು ಗಾನವಮಾಡಿ ಸ್ತುತಿಸಿದಳು. ಇಷ್ಟರಲ್ಲಿಯೇ ಸೂರ್ಯೋದಯವಾಯಿತು ಆ ಗ್ರಾಮದ ಬ್ರಾಹ್ಮಣರು ಪ್ರೇತಸಂಸ್ಕಾರ ಮಾಡಬೇಕೆಂದು ಬಂದು ಬದುಕಿದ ಕುಮಾರನನ್ನು ನೋಡಿ ವಿಸ್ಮಿತರಾಗಿ ಸಮಾಧಾನಮಾಡಿ ಸಂತೋಷಿಸಿದರು ಗುರುಸ್ಥಾನದ ಮಹಿಮೆಗಳೆಲ್ಲವನ್ನೂ ಹೇಳಲು ಗ್ರಂಥ ವಿಸ್ತಾರವಾಗುವುದು. ಬಂಜೆಗೆ ಪುತ್ರನಾದನು. ಬಡವನಿಗೆ ಔದಾರ್ಯಯುಕ್ತವಾದ ಐಶ್ವರ್ಯವೂ ರೋಗಿಗೆ ಆರೋಗ್ಯವೂ ಅಪಮೃತ್ಯು ಪರಿಹಾರವೂ ಆಗುವುವು. ಗುರುಸ್ಥಾನ ಮಹಿಮೆಯು ಈ ರೀತಿಯಾಗಿ ಇರುವುದು ಔದುಂಬರದಲ್ಲಿ ಶ್ರೀ ಗುರುವು ಸದಾ ವಾಸಿಸುವರು ಗುರುವನ್ನು ಸೇವಿಸಿದರೆ ಸಕಲೇಷ್ಟಗಳೂ ಸಿದ್ಧಿಸುವುವು ಗುರುಚರಣಗಳನ್ನು ಭಕ್ತಿಯಿಂದ ಪೂಜಿಸಿದರೆ ಅವರ ಕೋರಿಕೆಯು ಪೂರ್ಣವಾಗುವುವು. ಗುರುಪಾದುಕೆಗಳನ್ನರ್ಚಿಸಿದರೆ ಹೊಟ್ಟೆನೋವು, ಗಂಡಮಾಲೆ, ಅಪಸ್ಮಾರ ಮುಂತಾದ ರೋಗಗಳೆಲ್ಲವೂ ಬೇಗ ಪರಿಹಾರವಾಗುವುವು ಮಂದಮತಿಯೂ, ಕಿವುಡನೂ, ಮೂಕನೂ, ಹೆಳವನೂ ಔದುಂಬರವನ್ನು ಸೇವಿಸಿದರೆ ಚತುರ್ವಿಧ ಪುರುಷಾರ್ಥಗಳೂ ನಿಶ್ಚಯವಾಗಿ ಸಿದ್ಧಿಸುವುವು. ಇದು ಕಲ್ಪತರುವಿನಂತೆ ಪ್ರತ್ಯಕ್ಷವಾದುದು. ಇಷ್ಟಾರ್ಥಗಳು ಪೂರ್ಣವಾಗುವುವು. ಇಲ್ಲಿನ ಮಹಿಮೆಯನ್ನು ವರ್ಣಿಸಲು ಅಶಕ್ಯವಾಗಿದೆ ಎಂದು ಗಂಗಾಧರನಂದನನು ಗುರುಚರಿತ್ರೆಯನ್ನು ವಿಸ್ತಾರವಾಗಿ ಹೇಳಿದನು.

ಇದನ್ನು ಕೇಳಲು ಇಷ್ಟಾರ್ಥಗಳು ಸಿದ್ಧಿಸುತ್ತವೆ. ಶ್ರೀ ಗುರುಚರಣಂಗಳಲ್ಲಿ ಮನಸ್ಸು ಸ್ಥಿರವಾಗಿರಬೇಕು. ಇದರಿಂದ ಇಹಪರ ಸುಖಗಳು ಉಂಟಾಗುವುವು ಎಂಬಲ್ಲಿಗೆ ವಿಪ್ರಪುತ್ರ ಸಂಜೀವನವೆಂಬ ಇಪ್ಪತ್ತೊಂದನೇ ಅಧ್ಯಾಯವು ಮುಗಿದುದು.

|| ಶ್ರೀ ದತ್ತಾತ್ರೇಯಾರ್ಪಣಮಸ್ತು ||

---

## ೨೨ ನೆಯ ಅಧ್ಯಾಯ.

---

ನಾಮಧಾರಕನು ಕೈಗಳನ್ನು ಜೋಡಿಸಿ ವಂದಿಸಿ ಜಯಯೋಗೀಶ್ವರನೇ, ಶಿಷ್ಯಜನ ಮನೋಹರನೇ, ಭವಸಾಗರತಾರಕನೇ, ಅಜ್ಞಾನವೆಂಬ ಕತ್ತಲೆಗೆ ದೀಪದಂತಿರುವವನೇ, ನಿಮ್ಮ ಪಾದದರ್ಶನದಿಂದ ಈಗ ನಮಗೆ ಜ್ಞಾನೋದಯವಾಯಿತು. ತತ್ವಬೋಧೆಯೂ ಆಯಿತು. ಗುರುಮಾರ್ಗವನ್ನು ಸುಲಭವಾಗಿ ತೋರಿಸಿದಿರಿ. ಪರಮಪುರುಷನೇ, ಈ ಗುರುಚರಿತ್ರೆಯು ರುಚಿಕರವಾಗಿದೆ. ಶ್ರೀ ಗುರುಗಳು ಗಾಣಗಾಪುರದಲ್ಲಿ ಇದ್ದು ಮುಂದೆ ಏನುಮಾಡಿದರು ? ನಿರೂಪಿಸಿರೆಂದು ಬೇಡಿಕೊಂಡನು.

ಆಗ ಸಿದ್ಧರು ಸಂತೋಷದಿಂದ ಶಿಷ್ಯನೇ, ನೀನು ಗುರುಭಕ್ತನಾಗಿದ್ದೀಯೆ. ನಿನ್ನ ಜೀವನವು ಧನ್ಯವು. ನಿನ್ನ ಮನಸ್ಸುಕೂಡಾ ಧನ್ಯವು. ನೀನು ಪೂಜ್ಯನು. ನಿನ್ನ ಪ್ರಶ್ನೆಯನ್ನು ಕೇಳಿ ನನ್ನ ಮನಸ್ಸು ಸಂತೋಷಹೊಂದಿತು. ಈ ಚರಿತ್ರೆಯನ್ನು ಹೇಳಲು ಉಲ್ಲಾಸವುಂಟಾಗುವುದು. ಗುರುಮಹಿಮೆಯು ಅನಂತವಾಯಿತು. ಗುರುಗಳು ಗಾಣಗಾಪುರಕ್ಕೆ ಬಂದರು. ಅಲ್ಲಿ ಸಂಗಮದಲ್ಲಿ ಗೋಪ್ಯವಾಗಿದ್ದರು. ಭೀಮಾನದಿಯು ಉತ್ತರವಾಹಿನಿಯಾದ ಅಮರಜಾಸಂಗಮವು ಶ್ರೇಷ್ಠವಾಗಿದೆ. ಇಲ್ಲಿ ಒಂದು ಅಶ್ವತ್ಥವೃಕ್ಷವಿದೆ. ಇದು ಮಹಾಫಲದ ಸ್ಥಳವು. ಇದು ಪ್ರಯಾಗಕ್ಕೆ ಸಮಾನವು. ಇಲ್ಲಿ ಅಷ್ಟತೀರ್ಥಗಳಿವೆ. ಈ ತೀರ್ಥಗಳ ಮಹಿಮೆಯು ಅಪಾರವಾಗಿದೆ. ತೀರ್ಥಗಳೆಲ್ಲವೂ ಗುರುಪಾದಗಳಲ್ಲಿವೆ ಎಂದು ವೇದಪುರಾಣಗಳು ಹೇಳುತ್ತವೆ. ಆದರೆ ಶ್ರೀ ಗುರುವು ಈ ರೀತಿಯಿಂದ

ಕ್ಷೇತ್ರಗಳಲ್ಲಿ ಸಂಚರಿಸಿದರೆಂದರೆ ಭಕ್ತರ ರಕ್ಷಣೆಗಾಗಿ ತೀರ್ಥಯಾತ್ರೆ ಮಾಡುತ್ತಿದ್ದರೆಂದು ತಿಳಿ. ಗುರುಗಳು ಈ ಸಂಗಮದಲ್ಲಿ ಗೋಪ್ಯವಾಗಿದ್ದರು. ಸೂರ್ಯನ ಸಹಸ್ರಕಿರಣಗಳು ಗೋಪ್ಯವಾಗಿರದೆ ಪ್ರಕಾಶ ಹೊಂದುವಂತೆ ಈ ಸಂಗಮದಲ್ಲಿ ಗುರುಗಳು ಇರುತ್ತಾ ನಿತ್ಯವೂ ಈ ಗಾಣಗಾಪುರಕ್ಕೆ ಭಿಕ್ಷೆಗೆ ಬರುತ್ತಿದ್ದರು. ಈ ಗ್ರಾಮದಲ್ಲಿ ನೂರು ಬ್ರಾಹ್ಮಣರ ಮನೆಗಳಿದ್ದವು. ಇದು ಪೂರ್ವದಲ್ಲಿ ಒಂದು ಅಗ್ರಹಾರವಾಗಿತ್ತು. ಇಲ್ಲಿ ವೇದಾಧ್ಯಯನ ಸಂಪನ್ನನಾದ ಒಬ್ಬ ವಿಪ್ರನಿದ್ದನು. ಇವನ ಸತಿಯು ಮಹಾ ಪತಿವ್ರತೆಯಾಗಿದ್ದಳು. ಇವರ ಮನೆಯಲ್ಲಿ ಮುದಿಯಾದ ಹಲ್ಲಿಲ್ಲದ ಗೊಡ್ಡೆಮ್ಮೆಯೊಂದಿತ್ತು. ಈ ಊರಿನಲ್ಲಿದ್ದ ಒಬ್ಬ ಅಗಸನು ಚೌಳುಪ್ಪನ್ನು ಹೊರಿಸುವುದಕ್ಕೆ ಇದನ್ನು ಬಾಡಿಗೆಗೆ ತೆಗೆದುಕೊಂಡು ಹೋಗಿ ಸ್ವಲ್ಪ ದ್ರವ್ಯವನ್ನು ಬಾಡಿಗೆಯಾಗಿ ಕೊಡುತ್ತಿದ್ದನು. ಈ ವಿಪ್ರನು ಈ ಹಣದಿಂದ ಜೀವಿಸುತ್ತಿದ್ದನು. ಗುರುಗಳು ಇವನ ಮನೆಗೆ ಭಿಕ್ಷೆಗೆ ಬಂದರು. ಈ ಅಗ್ರಹಾರದ ಬ್ರಾಹ್ಮಣರು ಗುರುಗಳನ್ನು ನೋಡಿ ಈ ಯತಿಗಳು ಎಲ್ಲಿಂದ ಬಂದರು ? ನಾವು ಶೋತ್ರಿಯರಾಗಿದ್ದೇವೆ. ನಮ್ಮ ಮನೆಯಲ್ಲಿ ಅನೇಕ ಶಾಕಪಾಕಗಳಿದ್ದರೂ ನಮ್ಮ ಮನೆಯನ್ನು ಬಿಟ್ಟು ಗುರುಗಳು ಈ ಬಡ ಬ್ರಾಹ್ಮಣನ ಮನೆಗೆ ಹೋಗುವರು ಎಂದು ಹೇಳುತ್ತಿದ್ದರು. ಭಕ್ತವತ್ಸಲರಾದ ಗುರುಗಳು ಮನಸ್ಸು ಬಂದಕಡೆಗೆ ಭಿಕ್ಷೆಗೆ ಹೋಗುತ್ತಿದ್ದರು. ಪೂರ್ವದಲ್ಲಿ ಶ್ರೀ ಕೃಷ್ಣನು ದುರ್ಯೋಧನನ ಮನೆಯನ್ನು ಬಿಟ್ಟು ಆ ಬಡ ವಿದುರನ ಮನೆಗೆ ಹೋದಂತೆ ಗುರುವು ಆ ಸಾತ್ವಿಕನಾದ ವಿಪ್ರನ ಮನೆಗೆ ಪ್ರೀತಿಯಿಂದ ಬಂದರು. ದಯಾಮಯರಾದ ಗುರುಗಳು ಪ್ರೇಮದಿಂದ ಬಡವರಿಗಾದರೂ ರಾಜ್ಯವನ್ನು ಕೂಡಾ ಕೊಡಲು ಶಕ್ತರಾಗಿದ್ದರು. ಒಂದುವೇಳೆ ಸಿಟ್ಟು ಬಂದರೆ ದುಷ್ಟರನ್ನು ಭಸ್ಮ ಮಾಡಬಲ್ಲರು. ಬ್ರಹ್ಮನು ಹಣೆಯಲ್ಲಿ ಬರೆದ ಕೆಟ್ಟ ಬರವಣಿಗೆಯಾದರೂ ಶ್ರೀ ಗುರುಗಳ ಚರಣಸ್ಪರ್ಶವಾದರೆ ಶುಭಕರವಾಗುತ್ತಿದ್ದುವು. ಇಂಥಾ ಬಿರುದುಳ್ಳ ಶ್ರೀ ಗುರುಗಳನ್ನು ವರ್ಣಿಸಲಶಕ್ಯವು. ಆ ಬಡಬ್ರಾಹ್ಮಣನ ಪುಣ್ಯವು ಬಹಳ ದೊಡ್ಡದು. ಶ್ರೀ ಗುರುವು ಆ ವಿಪ್ರನ ಮನೆಗೆ ಬರಲು ಆ ದಿನ ರಜಕನು ಇವನ ಮನೆಯ ಎಮ್ಮೆಯನ್ನು ಚೌಳಿಗಾಗಿ ಒಯ್ಯಲಿಲ್ಲ. ಆದುದರಿಂದ ಆ ದಿನ ಬಾಡಿಗೆಯು

ಹಣವಿಲ್ಲ. ಶ್ರೀಗುರುವು ಭಿಕ್ಷೆಗೆ ಬಂದರು ಆ ದಿನ ವೈಶಾಖವಮಾಸ. ಮಧ್ಯಾಹ್ನಕಾಲ. ಗುರುವು ಆ ಬಡಬ್ರಾಹ್ಮಣನ ಮನೆಗೆ ಬಂದರು. ಆ ವಿಪ್ರನು ಯಾಚಕಕ್ಕೆ ಹೋಗಿದ್ದನು ಅವನ ಹೆಂಡತಿಯು ಮನೆಯಲ್ಲಿದ್ದಳು ಗುರುಗಳು "ಭಿಕ್ಷಾಂದೇಹಿ" ಎಂದರು. ಆಪತಿವ್ರತೆಯು ಓಡಿಬಂದು ಗುರುಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಭಕ್ತಿಯಿಂದ ಅಂಜಲಿಬದ್ಧಳಾಗಿ ಪತಿಗಳು ಯಾಚಕಕ್ಕೆ ಹೋಗಿರುವರು. ಅನೇಕರ ಮನೆಗಳಿಂದ ಉತ್ಕೃಷ್ಟವಾದ ಧಾನ್ಯಗಳನ್ನು ಭಿಕ್ಷಬೇಡಿ ತರುವರು. ತಾವು ಕುಳಿತುಕೊಳ್ಳಬೇಕು ಎರಿದು ಪೀಠವನ್ನು ಹಾಕಿದಳು. ಗುರುಗಳು ಕುಳಿತರು.

ಎಲೌ ಸ್ತ್ರೀಯಳೇ, ನಮಗೆ ಹಾಲನ್ನು ಕೊಡುವುದಿಲ್ಲವೇ ? ನಿಮ್ಮ ಮನೆಯ ಬಾಗಿಲಲ್ಲಿ ಎಮ್ಮೆಯು ಇರುವುದಲ್ಲವೇ ? ನಮ್ಮನ್ನೇಕೆ ಬಾಳಸುತ್ತೀಯೆ, ಭಿಕ್ಷೆ ಹಾಕಲು ಏನೂ ಇಲ್ಲವೆನ್ನುವಿಯಾ ? ಎಂದು ಕೇಳಿದರು.

ಆಗ ಆಕೆಯು ವಂದಿಸಿ ಸ್ವಾಮಿ, ನಮ್ಮ ಮನೆಯಲ್ಲಿರುವ ಎಮ್ಮೆಗೆ ಹಲ್ಲುಗಳಿಲ್ಲ. ಮುದಿಯಾದ ಗೊಡ್ಡೆಮ್ಮೆಯಾಗಿದೆ ಇದು ಹುಟ್ಟುಬಂಜೆಯಾಗಿದೆ. ಗರ್ಭವಾಗಲಿಲ್ಲ ಕೋಣನೇ ಸರಿಯೆಂದು ಪೋಷಿಸುತ್ತೇನೆ. ಇದನ್ನು ಅಗಸನ ಮನೆಗೆ ಚೌಳುಪ್ಪನ್ನು ಹೊರಿಸಲು ಬಾಡಿಗೆಗೆ ಕಳುಹಿಸುವೆವು. ಇದರಿಂದ ನಮ್ಮ ಜೀವನವಾಗುವುದು ಎಂದಳು.

ಬಳಿಕ ಗುರುವು ಎಲೌ ಸ್ತ್ರೀಯಳೇ, ನಿನ್ನ ಎಮ್ಮೆಯು ಹಾಲು ಕರೆಯುತ್ತಿದ್ದರೂ ಹಾಲಿಲ್ಲವೆಂದು ಸುಳ್ಳಾಡುವಿ. ಬೇಗ ಹೋಗಿ ನಿನ್ನ ಎಮ್ಮೆಯನ್ನು ಕರೆದುಕೊಂಡು ಹಾಲನ್ನು ತೆಗೆದುಕೊಂಡುಬಾ ಎಂದಾಜ್ಞಾಪಿಸಿದರು.

ಆಗ ಆಕೆಯು ಕಾಷ್ಠಪಾತ್ರೆಯನ್ನು ತೆಗೆದುಕೊಂಡು ವಿಶ್ವಾಸದಿಂದ ಹಾಲನ್ನು ಕರೆಯಲು ಎರಡು ಪಾತ್ರೆಯ ತುಂಬಾ ಹಾಲನ್ನು ಎಮ್ಮೆಯು ಕೊಟ್ಟಿತು. ವಿಸ್ಮಿತಳಾಗಿ ಈ ಯತಿಗಳು ಸಾಕ್ಷಾದೀಶ್ವರನೇಸರಿ–ಇವರ ವಾಕ್ಯವು ಫಲಿಸಿತು. ಇದು ಆಶ್ಚರ್ಯವು ಎಂದು ಹಾಲನ್ನು ತಂದು ಬೆಂಕಿಯಲ್ಲಿ ಕಾಯಿಸಿ ಗುರುಗಳಿಗೆ ಕೊಡುವವಳಾದಳು.

ಗುರುಗಳು ಅದನ್ನು ಕುಡಿದು ಸಂತೋಷಹೊಂದಿ ನಿನ್ನ ಮನೆಯಲ್ಲಿ ಅಖಂಡೈಶ್ವರ್ಯವು ನಿರಂತರವಾಗಿರಲಿ ! ನೀನು ಪುತ್ರಪೌತ್ರರಿಂದ ಕೂಡಿರು ಎಂದು ವರವಿತ್ತು ತಮ್ಮ ಸ್ಥಾನಕ್ಕೆ ತೆರಳಿದರು.

ಬಳಿಕ ಬ್ರಾಹ್ಮಣನು ಮನೆಗೆ ಬಂದನು. ಇವನ ಸತಿಯು ಗುರು ಮಹಿಮೆಯನ್ನು ಹೇಳಿದಳು ಆಗ ವಿಪ್ರನು ಸತಿಯೇ, ಈ ಯತಿಗಳು ಈಶ್ವರಾವತಾರವು ನಮಗೆ ಮನುಷ್ಯಾವತಾರರಾಗಿ ಕಾಣಿಸುವರು. ನಮ್ಮ ಬಡತನ ಹಿಂಗಿತು. ಗುರುದರ್ಶನವಾಯಿತು. ಸಕಲೇಷ್ಟಾರ್ಥಗಳೂ ಉಂಟಾದುವು ಎಂದು ನಿರ್ಧರಿಸಿ ಈ ದಂಪತಿಗಳು ಆರತಿಯನ್ನು ತೆಗೆದು ಕೊಂಡು ಸಂಗಮಕ್ಕೆ ಬಂದು ಗುರುದರ್ಶನ ಮಾಡಿ, ಗಂಧ ಪುಷ್ಪ ಧೂಪ ದೀಪ ನೈವೇದ್ಯ ತಾಂಬೂಲಾದಿಗಳಿಂದರ್ಚಿಸಿ ಪ್ರದಕ್ಷಿಣ ನಮಸ್ಕಾರ ಮಾಡಿದರು. ಇವರಿಗೆ ಗುರು ಅನುಗ್ರಹದಿಂದ ಒಬ್ಬ ಮಗನೂ ಒಬ್ಬ ಮಗಳೂ ಜನಿಸಿದರು ಸಕಲೈಶ್ವರ್ಯವೂ ಉಂಟಾಯಿತು ಗುರುಕೃಪೆ ಇದ್ದರೆ ಬಡತನವುಂಟೇ ? ಅಷ್ಟೈಶ್ವರ್ಯಗಳೂ ಉಂಟಾದುವು ಎಂದು ಸರಸ್ವತೀಗಂಗಾಧರನು ಹೇಳಿದನು ಇದನ್ನು ಕೇಳಲು ಬಡತನವು ಹಿಂಗುವುದು ಗೊಡ್ಡೆಮ್ಮೆಯು ಹಾಲು ಕರೆಯಿತು. ವಿಪ್ರನಿಗೆ ಐಶ್ವ ರ್ಯವುಂಟಾಯಿತು ಎಂಬಲ್ಲಿಗೆ ಗುರುಚರಿತ್ರೆಯಲ್ಲಿ ೨೧ನೇ ಅಧ್ಯಾಯವು ಮುಗಿಯಿತು.

|| ಶ್ರೀಗುರುವೇನಮಃ ||

## ೨೨ನೆಯ ಅಧ್ಯಾಯ.

ಸಿದ್ಧರು ಶಿಷ್ಯನೇ ಕೇಳೆಂದು ಹೇಳುವರು —ಗುರುಲೀಲೆಯು ಅಗ ಮ್ಯವಾದುದು ಆ ವಿಪ್ರನು ತನ್ನ ಗೊಡ್ಡೆಮ್ಮೆಯು ಹಾಲು ಕರೆಯಿತೆಂದು ಪ್ರಕಟಿಸಿದನು. ರಜಕನು ನಿತ್ಯದಂತೆ ಚೌಳನ್ನು ಹೊರಿಸಲು ಬಾಡಿಗೆಗೆ ಎಮ್ಮೆಯನ್ನು ಕೇಳಲು ಬಂದನು

ಆಗ ವಿಪ್ರನು, ಅಯ್ಯಾ, ಎಮ್ಮೆಯು ಎರಡು ಸೇರು ಹಾಲು ಕರೆಯು ವುದು. ಬಾಡಿಗೆಗೆ ಕೊಡುವುದಿಲ್ಲವೆಂದು ಹೇಳಿ ಕಳುಹಿಸಿದನು. ಈ

ಮಾತನ್ನು ಕೇಳಿ ಆ ಗ್ರಾಮದವರೆಲ್ಲರೂ ವಿಸ್ಮಿತರಾದರು. ಹಲ್ಲಿಲ್ಲದೇ ಮೂಗುನೇಣು ಹಾಕಲ್ಪಟ್ಟ ಗೊಡ್ಡೆಮ್ಮೆಯು ಹಾಲು ಕರೆಯಿತೆಂದು ಜನರು ಆ ಗ್ರಾಮದ ಅಧಿಪತಿಯೊಡನೆ ಹೇಳಿದರು. ಆ ಅಧಿಪತಿಯು ಅಲ್ಲಿಗೆ ಬಂದು ವಿಪ್ರನನ್ನು ಕರೆದು ಈ ಸಂಗತಿಯನ್ನು ವಿಚಾರಿಸಿದನು.

ವಿಪ್ರನು ಈ ಸಂಗಮದಲ್ಲಿ ಒಬ್ಬ ಯತಿಗಳಿರುವರು. ಇವರು ಈಶ್ವರಾಂಶದವರು. ನಿತ್ಯವೂ ಭಿಕ್ಷೆಗೆ ನಮ್ಮ ಮನೆಗೆ ಬರುವರು. ನಿನ್ನೆಯ ದಿನ ಭಿಕ್ಷೆಗೆಬರಲು ಭಿಕ್ಷೆ ಹಾಕಲು ಧಾನ್ಯಗಳು ಮನೆಯಲ್ಲಿರಲಿಲ್ಲ ಹಾಲನ್ನು ಕೇಳಿದರು. ಆಗ ನನ್ನ ಪತ್ನಿಯು ನಮ್ಮ ಮನೆಯಲ್ಲಿ ಗೊಡ್ಡೆಮ್ಮೆಯು ಇದೆ. ಹಾಲುಕರೆಯುವುದಿಲ್ಲ ಎಂದಳು. ಆಗ ಗುರುವು ಆ ಎಮ್ಮೆಯನ್ನೇ ಕರೆ ಎಂದರು. ಆ ಗುರ್ವಾಜ್ಞೆಯಂತೆ ಹಾಲು ಕರೆದಳು ಎಮ್ಮೆಯು ಹಾಲು ಕೊಟ್ಟಿತು ಎಂದನು.

ಇದನ್ನು ಕೇಳಿ ಆ ಅಧಿಪತಿಯು ಪುತ್ರ ಮಿತ್ರ ಕಳತ್ರರೊಂದಿಗೆ ಸಂಗಮಕ್ಕೆ ಹೋಗಿ ಗುರುಗಳನ್ನು ವಂದಿಸಿದನು ಜಯ ಜಗದ್ಗುರವೇ! ತ್ರಿಮೂರ್ತಿ ಸ್ವರೂಪನೇ, ನಿಮ್ಮ ಮಹಿಮೆಯು ಅಪಾರವಾಗಿದೆ ವರ್ಣಿಸಲು ನಾವು ಶಕ್ತರಲ್ಲ ನಾವು ಮಾಯಾಮೋಹಿತರಾದ ಮಂದಮತಿಗಳು. ಭವತಾರಕರಾದ ಜಗಜ್ಜ್ಯೋತಿಸ್ವರೂಪರೇ, ನಮ್ಮನ್ನು ರಕ್ಷಿಸಿರಿ. ಅವಿದ್ಯೆಯೆಂಬ ಮಾಯಾ ಸಾಗರದಲ್ಲಿ ಮುಳುಗಿದ್ದೇವೆ ವಿಶ್ವಕರ್ತನೇ, ರಕ್ಷಿಸೆಂದು ಗುರುಚರಣಂಗಳಿಗೆ ವಂದಿಸಿದನು ಶ್ರೀಗುರುವೇ, ನೀನು ಲೀಲಾಮಾತ್ರದಿಂದಲೇ ಸೃಷ್ಟಿಸುವಿರಿ ನಮಗೆ ಮನುಷ್ಯರೂಪರಾಗಿ ಕಾಣಿಸುತ್ತೀರಿ ನಿಮ್ಮ ಮಹಿಮೆಯನ್ನು ವರ್ಣಿಸಲು ಶಕ್ತರಲ್ಲ. ವ್ಯೋಮಕೇಶನೇ, ಚಿನ್ಮಯಾತ್ಮಕನೇ, ನೀವು ಜಗದ್ಗುರುವೇ ಸರಿ ಎಂದು ಸ್ತುತಿಸಿದನು.

ಶ್ರೀ ಗುರುವು ಸಂತೋಷಿಸಿ, ಎಲೈ ಅಧಿಪತಿಯೇ, ನಾವು ಯತಿಗಳು, ಕಾಡಿನಲ್ಲಿರುವೆವು ನೀನು ಪುತ್ರ ಮಿತ್ರರೊಂದಿಗೆ ಸೇರಿ ಬರಲು ಕಾರಣವೇನು ? ಎಂದು ಕೇಳಿದರು

ಆಗ ಆತನು ಸ್ವಾಮೀ! ಭಕ್ತರನ್ನು ರಕ್ಷಿಸುವುದಕ್ಕಾಗಿ ಅವತರಿಸಿದ ನಾರಾಯಣನೇ, ಭಕ್ತವತ್ಸಲನೇ, ಈ ಗಾಣಗಾಪುರದಲ್ಲಿ ಬಂದು

ಮಠವನ್ನು ನಿರ್ಮಿಸಿಕೊಂಡು ಇಲ್ಲಿ ಅನುಷ್ಠಾನವಮಾಡುತ್ತಾ ನಮ್ಮನ್ನು ರಕ್ಷಿಸುತ್ತಿರಬೇಕು ಎಂದು ಭಕ್ತಿಯಿಂದ ವಂದಿಸಿದನು.

ಆಗ ಗುರುವು ಈ ಸ್ಥಳದಲ್ಲಿ ಕೆಲವು ಕಾಲ ಪ್ರಕಟವಾಗಿರಬೇಕಾಯಿತು ಎಂದು ಯೋಚಿಸಿದರು. ಬಳಿಕ ಆತನಿಗೆ ನಿನ್ನ ಇಷ್ಟದಂತಾಗಲೆಂದು ಅನುಜ್ಞೆಯನ್ನಿತ್ತರು. ಆಗ ಆತನು ಮನೆಗೆ ಬಂದು ನಾನಾವಿಧ ವಾದ್ಯಗಳೊಡನೆ ಛತ್ರಪತಾಕಾದಿಗಳನ್ನೂ, ಆನೆ ಕುದುರೆಗಳನ್ನೂ ಸಿಂಗರಿಸಿ ಪುತ್ರ ಮಿತ್ರ ಕಳತ್ರಾದಿಗಳಿಂದ ಕೂಡಿ ವೇದಘೋಷದಿಂದ ಬ್ರಾಹ್ಮಣರೊಡನೆ ಆ ಗ್ರಾಮಾಧಿಪತಿಯು ಆರತಿಗಳನ್ನೆತ್ತಿಸಿ ಸಮಾರಂಭದಿಂದ ಗುರುಗಳನ್ನು ಕರೆದುಕೊಂಡು ಊರೊಳಕ್ಕೆ ಪ್ರವೇಶಮಾಡಿದನು. ಆ ಗ್ರಾಮದ ಪಶ್ಚಿಮದಿಕ್ಕಿನಲ್ಲಿ ಬಹಳ ಉನ್ನತವಾದ ಅಶ್ವತ್ಥವೃಕ್ಷವಿತ್ತು. ಇದರಲ್ಲಿ ಮಹಾ ಕ್ರೂರನಾದ ಬ್ರಹ್ಮರಾಕ್ಷಸನಿದ್ದನು ಗುರುಗಳನ್ನು ನೋಡಿ ಈ ಬ್ರಹ್ಮರಾಕ್ಷಸನು ಗುರುಗಳನ್ನುವಂದಿಸಿ, ಕೈಗಳನ್ನುಜೋಡಿಸಿ ಭಕ್ತಿಯಿಂದ ಸ್ವಾಮಿಾ! ನಾನು ಘೋರವಾದ ಕತ್ತಲೆಯಲ್ಲಿ ಮುಳುಗಿದೆನು ನಿಮ್ಮ ದರ್ಶನದಿಂದ ನನ್ನ ಪಾಪಗಳೆಲ್ಲವೂ ನಾಶವಾದುವು. ದಯಾನಿಧಿಗಳೇ, ನನ್ನನ್ನು ರಕ್ಷಿಸಿರಿ ಎಂದನು.

ಆಗ ಗುರುವು ಎಲೈ ಬ್ರಹ್ಮರಾಕ್ಷಸನೇ, ನೀನು ಸಂಗಮಕ್ಕೆ ಹೋಗಿ ಸ್ನಾನಮಾಡು, ನಿನಗೆ ಪುನರಾವೃತ್ತಿಯಿಲ್ಲ, ನಿನಗೆ ಮುಕ್ತಿಯಾಗುವುದು, ಎಂದರು.

ಇದನ್ನು ಕೇಳಿ ಬ್ರಹ್ಮರಾಕ್ಷಸನು ಸಂಗಮದಲ್ಲಿ ಸ್ನಾನಮಾಡಿ ದೇಹವನ್ನು ಬಿಟ್ಟು ಆ ಕ್ಷಣವೇ ಮುಕ್ತಿಹೊಂದಿದನು ಜನರೆಲ್ಲರೂ ವಿಸ್ಮಿತರಾದರು. ಗುರುಗಳು ಅಲ್ಲಿ ಹೊಸದಾಗಿ ನಿರ್ಮಿಸಲ್ಪಟ್ಟ ಮಠದಲ್ಲಿರುತ್ತಿದ್ದರು. ಆ ಗ್ರಾಮಾಧಿಪತಿಯು ಗೀತವಾದ್ಯಾದಿಗಳಿಂದ ಪೂಜಿಸುತ್ತಿದ್ದನು. ಗುರುಗಳು ನಿತ್ಯವೂ ಸ್ನಾನಕ್ಕಾಗಿ ಸಂಗಮಕ್ಕೆ ಬರುತ್ತಿದ್ದರು. ಮತ್ತು ಮಧ್ಯಾಹ್ನ ಮಠಕ್ಕೆ ಬರುತ್ತಿದ್ದರು. ಗುರುವನ್ನು ಈ ಅಧಿಪತಿಯು ಸೇನೆಯೊಡನೆ ಸದಾ ಹಿಂಬಾಲಿಸುತ್ತಿದ್ದನು. ಗುರುವು ಈತನ ಮನಸ್ಸನ್ನು ಪರೀಕ್ಷಿಸುತ್ತಿದ್ದರು. ಗುರು ಮಹಿಮೆಯು ಗ್ರಾಮಾಂತರಗಳಲ್ಲಿಯೂ ಪ್ರಸಿದ್ಧವಾಯಿತು.

ಕುಮಶಿ ಎಂಬ ಗ್ರಾಮದಲ್ಲಿ ಒಬ್ಬ ತಪಸ್ವಿಯು ಇದ್ದನು. ಈತನ ಹೆಸರು ತ್ರಿವಿಕ್ರಮಭಾರತಿ ಇವನು ಮೂರು ವೇದಗಳನ್ನು ಬಲ್ಲವನಾಗಿದ್ದನು ಇವನು ನರಸಿಂಹನನ್ನು ನಿತ್ಯವೂ ಧ್ಯಾನಿಸುತ್ತಾ ಮಾನಸ ಪೂಜೆಮಾಡುತ್ತಿದ್ದನು. ಇವನು ಗಾಣಗಾಪುರದಲ್ಲಿ ನೃಸಿಂಹಸರಸ್ವತಿಗಳಿರುವುದನ್ನು ಕೇಳಿ ಮನಸ್ಸಿನಲ್ಲಿ ಈ ಗುರುಗಳು ಡಾಂಭಿಕರಾಗಿ ಸನ್ಯಾಸಾಶ್ರಮದಲ್ಲಿರುವರೆಂದು ನಿಂದಿಸಿದನು ಶ್ರೀಗುರುವು ಎಲ್ಲರ ಇಂಗಿತಗಳನ್ನೂ ತಿಳಿಯುತ್ತಿದ್ದರು. ಈ ಯತಿಯು ನಿಂದಿಸುವುದನ್ನು ತಿಳಿದರು. ನಾಮಧಾರಕನೇ, ಮುಂದಿನ ಚರಿತ್ರೆಯನ್ನು ಕೇಳು ಎಂದರು. ಇದನ್ನು ಕೇಳಿದರೆ ಸಕಲೇಷ್ಟಗಳೂ ಉಂಟಾಗುವುವೆಂದು ಸರಸ್ವತಿ ಗಂಗಾಧರನು ನಿರೂಪಿಸಿದನೆಂಬಲ್ಲಿಗೆ ೨೩ನೇ ಅಧ್ಯಾಯವು ಮುಗಿದುದು

---

## ೨೪ ನೆಯ ಅಧ್ಯಾಯ

---

ಶ್ರೀ ಗಣೇಶಾಯನಮಃ ॥ ಸಿದ್ಧರು ಶಿಷ್ಯನಿಗೆ ಹೇಳುವರು. ಶಿಷ್ಯನೇ ಆ ತ್ರಿವಿಕ್ರಮಮುನಿಯು ಗುರುವನ್ನು ಡಾಂಭಿಕಯತಿಯೆಂದು ನಿಂದಿಸಿದುದನ್ನು ತಿಳಿದು ಆ ಗ್ರಾಮಾಧಿಪತಿಯೊಡನೆ ಈ ತ್ರಿವಿಕ್ರಮನಿರುವ ಸ್ಥಳಕ್ಕೆ ಹೋಗಬೇಕೆಂದು ಹೇಳಿದರು. ಈ ರಾಜನು ಸಂತೋಷಿಸಿ ಅಲಂಕೃತಗಳಾದ ಆನೆ, ಕುದುರೆ, ಕಾಲಾಳುಗಳೊಡನೆ ಶ್ರೀಗುರುಗಳನ್ನು ಪಾಲಕಿಯಲ್ಲಿ ಕುಳ್ಳಿರಿಸಿ ನಾನಾವಿಧ ವಾದ್ಯಗಳೊಡನೆ ಹೊರಟನು ಈರೀತಿಯಿಂದಿವರು ಕುಮಶಿಗೆ ಬಂದರು. ತ್ರಿವಿಕ್ರಮನು ಮಾನಸಪೂಜೆ ಮಾಡುತ್ತಿದ್ದನು ಈದಿನ ಇವನ ಮನದಲ್ಲಿ ನರಸಿಂಹನು ಗೋಚರಿಸಲಿಲ್ಲ. ಆದುದರಿಂದಾತನು ಚಿಂತಿಸುತ್ತಾ ತನ್ನ ತಪಸ್ಸು ವ್ಯರ್ಥವಾಯಿತೆಂದೂ, ಇದಕ್ಕೆ ಕಾರಣವೇನೆಂದೂ ಯೋಚಿಸುತ್ತಿದ್ದನು ಇಷ್ಟರಲ್ಲಿಯೇ ಗುರುವು ಮಾನಸ ಪೂಜೆಯಲ್ಲಿ ಕಾಣಿಸುತ್ತಿದ್ದ ಮೂರ್ತಿರೂಪದಿಂದ ದೂರದಲ್ಲಿ ನದೀತೀರದಲ್ಲಿ ಬರುತ್ತಿರುವುದನ್ನು ಕಂಡನು ಗುರುಗಳೊಡನಿರುವ ಸೈನ್ಯದವರೆಲ್ಲರೂ ದಂಡಧಾರಿಗಳಾಗಿ ಬಂದೇರೀತಿಯಾದ ಶ್ರೀಹರಿಯಂತೆ ರೂಪವುಳ್ಳವರಾಗಿ ಬರುವುದನ್ನು ಕಂಡು ವಿಸ್ಮಯದಿಂದ ಶ್ರೀಗುರುಚರಣಗಳಲ್ಲಿ

ಸಾಷ್ಟಾಂಗ ನಮಸ್ಕಾರ ಮಾಡಿದನು. ಎಲ್ಲಾ ಸೇನೆಯ ಜನರೂ ದಂಡ
ಧಾರಿಯಾದ ಯತಿರೂಪವಂಧರಿಸಿರಲು ಇವರಲ್ಲಿ ಗುರುವು ಯಾರು ? ಶಿಷ್ಯ
ರಾರು ? ಎಂದು ತಿಳಿಯದೆ ಭ್ರಾಂತನಾಗಿ ವಂದಿಸಿ ಸ್ವಾಮಿಾ ! ನೀವು
ತ್ರಿಮೂರ್ತಿಸ್ವರೂಪರಾಗಿದ್ದೀರಿ ನಿಮ್ಮ ಸ್ವರೂಪವನ್ನು ಮಾಯೆಯಿಂದ
ತಿಳಿಯಲಾರೆನು ನಿಜರೂಪವನ್ನು ತೋರಿಸಿ ಕೃಪೆಮಾಡಿರಿ ಚರ್ಮಚಕ್ಷು
ವಿನಿಂದ ನಿಮ್ಮ ಸ್ವರೂಪವನ್ನು ತಿಳಿಯಲಾರೆನು ಸರ್ವಭೂತಗಳಲ್ಲಿ ವ್ಯಾಪ
ಕರಾಗಿಯೂ ನೃಸಿಂಹಮೂರ್ತಿಯಾಗಿಯೂ ಇದ್ದೀರಿ ನಿಜರೂಪವನ್ನು
ತೋರಿಸಿರಿ ನಾನು ಬಹುಕಾಲ ತಪಸ್ಸನ್ನು ಮಾಡಿದೆನು. ನಿಮ್ಮ
ಮಾನಸಪೂಜೆಯನ್ನು ಮಾಡಿದೆನು ಈ ದಿನ ಇದರ ಫಲ ಉಂಟಾಯಿತು.
ಸಾಕ್ಷಾತ್ತಾಗಿ ಮೂರ್ತಿದರ್ಶನವಾಯಿತು ವಿಶ್ವತಾರಕರೇ ! ನನ್ನನ್ನು
ರಕ್ಷಿಸಿರಿ ಎಂದು ಭಕ್ತಿಯಿಂದ ಸ್ತುತಿಸಲು ಶ್ರೀಗುರುವು ಏಕರೂಪ
ವನ್ನು ತೋರಿಸಿದರು ಆಗ ಸೈನ್ಯವೂ ಮಧ್ಯದಲ್ಲಿ ಶ್ರೀಗುರುವೂ ಕಾಣಿ
ಸಿದರು.

ಶ್ರೀಗುರುವು ಎಲೈ ಯತಿಯೇ ಸರ್ವರೂ ನಮ್ಮನ್ನು ಡಾಂಭಿಕಯತಿ
ಯೆನ್ನುತ್ತಿರುವಿ. ಆದುದರಿಂದ ನಿನ್ನನ್ನು ಪರೀಕ್ಷಿಸಲು ನಾವು ಬಂದೆವು.
ನೀನು ನೃಸಿಂಹಮಾನಸಪೂಜೆ ಮಾಡುತ್ತೀಯೆ ನಿನ್ನ ಮನದಲ್ಲಿಯೂ
ಹರಿಯು ಇರುವನು. ಅವನೇ ನಿರೂಪಿಸಲಿ, ಡಾಂಭಿಕನೆಂದರೇನು ?
ಹೇಳು ಎಂದರು.

ಆಗ ಆತನು ವಂದಿಸಿ ಸ್ವಾಮಿಾ ! ನನ್ನ ಅವಿದ್ಯಾಮಾಯೆಯನ್ನು ನಾಶ
ಮಾಡಿರಿ ತ್ರಿಮೂರ್ತಿಸ್ವರೂಪರೇ ! ನಾನು ಅಜ್ಞಾನದಿಂದ ವರ್ತಿಸುವೆನು.
ಪರಮಾರ್ಥ ವಿಚಾರವನ್ನರಿಯೆನು. ದಿವಾಂಧನಾಗಿದ್ದೇನೆ ನೀವು
ಜ್ಯೋತಿಸ್ವರೂಪರು ನನ್ನನ್ನು ಮನ್ನಿಸಿರಿ ಅವಿದ್ಯಾಸಾಗರದಲ್ಲಿ ಮುಳುಗಿ
ಪಾರಗಾಣದೆ ತೇಲಾಡುತ್ತಿರುವೆನು. ಜ್ಞಾನವೆಂಬ ನಾವೆಯಲ್ಲಿ ಕುಳ್ಳಿರಿಸಿ
ಕರುಣೆಯೆಂಬ ವಾಯುವನ್ನು ಪ್ರೇರಿಸಿ ನಿಜಸ್ಥಾನವನ್ನು ಕುರಿತು ದಡವನ್ನು
ಸೇರಿಸಿರಿ. ನಿಮ್ಮ ಕೃಪೆಯುಂಟಾದವರಿಗೆ ದೈನ್ಯವೆಲ್ಲಿಯದು ? ಆತನು ಕಲಿ
ಯನ್ನು ಗೆದ್ದು ಪರಮಾರ್ಥದಲ್ಲಿ ಐಕ್ಯನಾಗುವನು. ಮಹಾಭಾರತದಲ್ಲಿ
ಹೇಳಿದಂತೆ ಶ್ರೀಕೃಷ್ಣನು ಅರ್ಜುನನಿಗೆ ವಿಶ್ವರೂಪವನ್ನು ತೋರಿಸಿದ

ಚಂದದಿಂದ ಈಗ ತಾವು ನನಗೆ ವಿಶ್ವರೂಪವನ್ನು ತೋರಿಸಿದಿರಿ. ಭಕ್ತವ ತ್ಸಲನಾದ ಗುರುನಾಥನೇ! ನಿಮ್ಮ ಮಹಿಮೆಯು ಆಶ್ಚರ್ಯವುಳ್ಳದ್ದಾಗಿದೆ. ಜಯಜಗದ್ಗುರುವೇ ! ತ್ರಿಮೂರ್ತಿಸ್ವರೂಪರೇ ! ನೃಸಿಂಹಸರಸ್ವತಿಯೇ! ನಿಮ್ಮ ದರ್ಶನದಿಂದ ಕೃತಾರ್ಥನಾದೆನು. ಪ್ರಯತ್ನವಿಲ್ಲದೇ ಚಿಂತಾಮಣಿ ಯು ನನಗೆ ಗೋಚರಿಸಿತು. ಗಂಗಾನದಿಯು ಸಾಗರಕ್ಕೆ ಹೋಗುವಂ ತೆಯೂ, ವಿದುರನ ಮನೆಗೆ ಕೃಷ್ಣನು ಬಂದಂತೆಯೂ ದಯಾಮಯರಾದ ತಾವು ನನ್ನೆದುರಿಗೆ ಬಂದಿರಿ. ನಿಮ್ಮ ಕೀರ್ತಿಯು ಬಹಳವಾಗಿ ಹರಡಿದೆ. ಇದನ್ನು ವರ್ಣಿಸಲಾರೆನು. ಅನಂತಮಹಿಮನೇ ! ಜಗದ್ಗುರುವೇ ! ಎಂದು ಸ್ತುತಿಸಲು ಶ್ರೀಗುರುವು ಸಂತೋಷದಿಂದ ಆತನಿಗೆ ವರವನ್ನು ಕೊಟ್ಟರು. ತ್ರಿವಿಕ್ರಮನೇ, ನಿನ್ನ ಭಕ್ತಿಗೆ ಮೆಚ್ಚಿದೆನು. ನಿನಗೆ ಸದ್ಗತಿಯಾಗುವುದು. ಪುನರಾವೃತ್ತಿಯಿಲ್ಲ. ನಿನಗೆ ಪರಮಾರ್ಥಸಾಧನೆಯಾಯಿತು. ಈಶ್ವರ ನಲ್ಲಿ ಐಕ್ಯವಾಗುವಿ ಎಂದು ವರವಿತ್ತು ನಿಜಸ್ಥಾನಕ್ಕೆ ತೆರಳಿದರು.

ನಾಮಧಾರಕನೇ, ಗುರುಮಹಿಮೆಯು ಈರೀತಿಯಾಗಿರುವುದು. ಗುರುಗಳು ತ್ರಿಮೂರ್ತಿಗಳ ಅಂಶದಿಂದ ನರರಾಗಿ ಹುಟ್ಟಿರುವರು. ಇವ ರನ್ನು ನರರೆನ್ನುವವರು ಏಳು ಜನ್ಮಗಳಲ್ಲಿಯೂ ನರಕದಲ್ಲಿರುವರು. ಗುರುವು ಬ್ರಹ್ಮನೂ ವಿಷ್ಣುವೂ ಈಶ್ವರನೂ ಆಗಿದ್ದಾನೆಂದು ಪುರಾಣಗಳು ಹೇಳುವುವು. ಆದುದರಿಂದ ಗುರುವನ್ನು ಮರೆಹೊಗಬೇಕು. ನನ್ನ ಮಾತನ್ನು ನಂಬು. ಗುರುಚರಣಗಳಲ್ಲಿ ಲೀನನಾಗು. ಜ್ಞಾನಿಗಳು ಗುರು ಚರಿತ್ರೆಯೆಂಬ ಕಾಮಧೇನುವಿನ ಅಮೃತವನ್ನು ಕುಡಿಯುವರು ಎಂದನು. ಗಂಗಾಧರನಂದನನು ಈ ಗುರುಚರಿತ್ರೆಯನ್ನು ಹೇಳಿದನು ಎಂಬಲ್ಲಿಗೆ ತ್ರಿವಿಕ್ರಮಭಾರತಿಗಳಿಗೆ ವಿಶ್ವರೂಪದರ್ಶನ ತೋರಿಸಿದರೆಂಬ ೨೫ ನೇ ಅಧ್ಯಾಯವು ಮುಗಿದುದು.

## ೨೬ನೆಯ ಅಧ್ಯಾಯವು.

ಶ್ರೀ ಗಣೇಶಾಯನಮಃ || ನಾಮಧಾರಕನು ಜಯಸಿದ್ಧಮುನಿಯೇ, ಗುರುಶಿರೋಮಣಿಯೇ, ನೀವು ಹೇಳಿದ ಪರಮಾರ್ಥವು ನನ್ನ ಅಂತಃಕರಣ

ದಲ್ಲಿ ನಿಂತಿತು ಶ್ರೀಗುರುವು ಈಶ್ವರಾವತಾರವೇ ನಿಜವು. ನರರೆನ್ನುವವರು ಅಜ್ಞಾನಿಗಳೇಸರಿ. ಮುಂದಿನ ಕಥೆಯನ್ನು ವಿಸ್ತಾರವಾಗಿ ನಿರೂಪಿಸಬೇಕೆಂದು ಬೇಡಿಕೊಂಡನು.

ಸಿದ್ಧರು ಹೇಳುವರು ಶಿಷ್ಯನೇ, ಗುರುಲೀಲೆಯು ಅಗಮ್ಯವಾದುದು. ಇದೆಲ್ಲವನ್ನೂ ವಿವರಿಸಲು ಗ್ರಂಥವಿಸ್ತಾರವಾಗುವುದು ಮುಂದಿನ ಕಥೆಯನ್ನು ಕೇಳು.—

ವಿದುರಾಎಂಬ ನಗರದಲ್ಲಿ ಒಬ್ಬ ಯುವನರಾಜನಿದ್ದನು. ಇವನು ಅತಿಕ್ರೂರನಾಗಿಯೂ ಬ್ರಹ್ಮದ್ವೇಷಿಯಾಗಿಯೂ ಸದಾ ಜೀವಹಿಂಸೆ ಮಾಡುತ್ತಾ ತನ್ನೆದುರಿನಲ್ಲಿ ವೇದಗಳೆಲ್ಲವನ್ನೂಹೇಳಿರಿ ಎಂದು ಬ್ರಾಹ್ಮಣರನ್ನು ಬಲಾತ್ಕರಿಸುತ್ತಿದ್ದನು ವಿಪ್ರರೇ, ನೀವು ನನ್ನ ಸಭೆಗೆ ಬಂದು ವೇದಗಳನ್ನೂ ವೇದಾರ್ಥಗಳನ್ನೂ ಹೇಳಿರಿ ನಾನು ನಿಮ್ಮನ್ನು ಪೂಜಿಸಿ ನಿಮಗೆ ಧನವನ್ನು ಕೊಡುವೆನು ಎಂದು ಆಜ್ಞಾಪಿಸುತ್ತಿದ್ದನು. ಇದನ್ನು ಕೇಳಿ ಜ್ಞಾನಿಗಳು ವಿಪ್ರರಿರಾ! ಬುದ್ಧಿಹೀನರಾಗಿ ನೀವು ಈ ಮ್ಲೇಂಛನೆದುರಿನಲ್ಲಿ ಧನದ ಆಶೆಯಿಂದ ವೇದವನ್ನೇಕೆಹೇಳುವಿರಿ? ಈ ರಾಜನು ನಮ್ಮನ್ನು ಕುರಿತು ವಿಪ್ರರು ಯಜ್ಞದಲ್ಲಿ ಪಶುಹತ್ಯೆಯನ್ನು ಮಾಡುವರು ಎಂದು ನಿಂದಿಸುವನು. ಇವನು ಯೋಗ್ಯತಾನುಸಾರವಾಗಿ ಧನವನ್ನು ಕೊಡುವನು ಎನ್ನುತ್ತಿದ್ದರು. ಅನೇಕರು ಈ ವಿಷಯವನ್ನುಕೇಳಿ ಈ ಯವನನ ಎದುರಿನಲ್ಲಿ ವೇದಶಾಸ್ತ್ರ ಪುರಾಣಗಳನ್ನು ಹೇಳಿ ದ್ರವ್ಯದಮೇಲೆ ಮನಸ್ಸನ್ನಿಟ್ಟು ಫಲವನ್ನು ಹೊಂದಿದರು. ಇಂಥವರಿಗೆ ದುರ್ಗತಿಯುಂಟಾಗುವುದು. ಈರೀತಿಯಿಂದ ವಿಪ್ರರು ದುರಾಚಾರಿಗಳಾಗಿರುವುದೇ ಕಲಿಗೆ ಇಷ್ಟವಾಗಿದೆ.

ಹೀಗಿರಲೊಂದುದಿನ ಮಂದಭಾಗ್ಯರಾದ ಇಬ್ಬರು ವಿಪ್ರರು ಬಂದು ಜನರನ್ನು ಕುರಿತು ನಾವು ಮೂರು ವೇದಗಳನ್ನೂ ಶಾಸ್ತ್ರಗಳನ್ನೂ ತಿಳಿದಿದ್ದೇವೆ ಎನ್ನುತ್ತಾ ಆ ರಾಜನ ಹತ್ತಿರಬಂದು ಮಹಾರಾಜನೇ, ನಮ್ಮನ್ನು ವಾದಿಸುವುದಕ್ಕೆ ನಾಲ್ಕು ರಾಷ್ಟ್ರಗಳಲ್ಲಿಯೂ ಯಾರೂ ಇಲ್ಲವು. ನಿಮ್ಮ ನಗರದಲ್ಲಿ ವಿಪ್ರರು ಯಾರಾದರೂ ವೇದಶಾಸ್ತ್ರಗಳಲ್ಲಿ ವಾದ ಮಾಡಬಲ್ಲರೇ? ಹಾಗಿದ್ದರೆ ವಾದಿಸಲಿ ಎಂದರು.

ಈ ವಿಪ್ರರ ಮಾತನ್ನು ಕೇಳಿ ರಾಜನು ದುರಭಿಮಾನದಿಂದ ಆ ನಗರದ ವಿಪ್ರರನ್ನು ಕರೆಯಿಸಿ ನಿಮ್ಮಲ್ಲಿ ಯಾರಾದರೂ ಈ ವಿಪ್ರರೊಡನೆ ತರ್ಕಿಸಿ ಗೆದ್ದರೆ ಅಪಾರವಾದ ಧನವನ್ನು ಕೊಡುವೆನು ಎಂದನು.

ಈ ಮಾತನ್ನು ಕೇಳಿ ವಿಪ್ರರು ರಾಜನನ್ನು ವಂದಿಸಿ ಮಹಾಸ್ವಾಮಿ! ಇವರು ಶ್ರೇಷ್ಠರಾಗಿರುವರು. ಇವರೊಡನೆ ವಾದಿಸಲು ನಮಗೆ ಶಕ್ತಿಯಿಲ್ಲ ಇವರಿಗೆ ಮರ್ಯಾದೆಯನ್ನು ಮಾಡಿಸಿರಿ ಎಂದು ವಿಜ್ಞಾಪಿಸಿದರು.

ಈ ಮಾತನ್ನು ಕೇಳಿ ರಾಜನು ಆ ವಿಪ್ರರಿಗೆ ವಿಚಿತ್ರತರವಾದ ವಸ್ತ್ರಗಳಿಂದ ಸನ್ಮಾನಿಸಿ ಆನೆಯಮೇಲೆ ಕುಳ್ಳಿರಿಸಿ ಆ ನಗರದಲ್ಲೆಲ್ಲಾ ಇವರಿಗೆ ಸರಿಯಾದವರಿಲ್ಲವೆಂದು ಸಾರಿಸಿ ಮೆರವಣಿಗೆ ಮಾಡಿಸಿದನು. ಈ ಪರಿಯಿಂದ ವಿಪ್ರರು ಆ ರಾಜನಿಂದ ಸನ್ಮಾನಿತರಾಗಿ ತಾಮಸಗುಣದಿಂದ ಬ್ರಾಹ್ಮಣರೆಲ್ಲರನ್ನೂ ನಿಂದಿಸುತ್ತಿದ್ದರು ಮತ್ತು ಇವರಲ್ಲೊಬ್ಬನು ರಾಜನನ್ನು ಕುರಿತು ಮಹಾರಾಜನೇ ನಮ್ಮ ಯೋಗ್ಯತೆಯು ಹೆಚ್ಚಾದುದು. ನಮ್ಮೊಡನೆ ವಾದಿಸುವವರು ಯಾರೂ ಸಿಕ್ಕುವುದಿಲ್ಲ ನಾವು ಕಲಿತುದು ವ್ಯರ್ಥವಾಯಿತು. ವಾದಿಸಬೇಕೆಂದು ನಮಗೆ ಇಷ್ಟವಿದೆ. ನಿಮ್ಮ ದೇಶದಲ್ಲೆಲ್ಲಾ ಸಂಚರಿಸಿ ಯಾರಾದರೂ ವಾದಕ್ಕೆ ಸಿಕ್ಕಿದರೆ ವಾದಿಸುವೆವು ದೊರೆಯದಿರಲು ಬ್ರಾಹ್ಮಣರಿಂದ ಜಯಪತ್ರವನ್ನು ಬರೆಯಿಸಿಕೊಂಡು ಹೋಗುವೆವು ಎಂದರು

ಆಗ ರಾಜನು ಅವರನ್ನು ಕುರಿತು ವಿಪ್ರರೇ, ಬೇಗ ನಮ್ಮ ದೇಶದಲ್ಲಿ ಸಂಚರಿಸಿ ಬ್ರಾಹ್ಮಣರನ್ನು ಜಯಿಸಿರಿ ಎಂದು ನಿರೂಪಿಸಿದನು.

ಬಳಿಕ ಈ ವಿಪ್ರರು ತಾಮಸದಿಂದ ಪ್ರತಿಗ್ರಾಮದಲ್ಲಿಯೂ ವಿಚಾರಿಸುತ್ತಾ ಜಯಪತ್ರವನ್ನು ಬರೆಯಿಸಿಕೊಂಡು ಭೀಮಾತೀರದಲ್ಲಿರುವ ಕುಮಸಿಗೆ ಬಂದರು. ಅಲ್ಲಿ ತ್ರಿವಿಕ್ರಮಭಾರತಿಯನ್ನು ಕಂಡು ಅಯ್ಯಾ, ನಾವು ಸಕಲ ವೇದಶಾಸ್ತ್ರಗಳನ್ನೂ ಬಲ್ಲವರಾಗಿದ್ದೇವೆ. ನಮ್ಮೊಡನೆ ವಾದಿಸಬೇಕು ಅಥವಾ ಜಯಪತ್ರವನ್ನು ಕೊಡಬೇಕು ಎಂದು ಕೇಳಿದರು.

ಇದನ್ನು ಕೇಳಿ ತ್ರಿವಿಕ್ರಮನು ಅಯ್ಯಾ—ನನಗೆ ಮೂರು ವೇದಗಳೂ ಬರುವುದಿಲ್ಲ. ತಿಳಿದಿದ್ದರೂ ನಾನು ವಾದಿಸಲ್ಲಿರುವೆನು. ನಿಮ್ಮಂಥ

ವರು ರಾಜಸಭೆಯಲ್ಲಿ ವಾದಮಾಡಿ ಮರ್ಯಾದೆ ಹೊಂದಿ ಸುಖವಾಗಿರು ವರು. ನಾನು ಸನ್ಯಾಸಿಯೂ ಭಿಕ್ಷುಕನೂ ಆಗಿದ್ದೇನೆ ನಾನು ನಿಮಗೆ ಸಮಾನನಲ್ಲ. ನೀವು ಸರ್ವಜ್ಞರು. ನಿಮ್ಮೊಡನೆ ವಾದವೇಕೆ ? ಎಂದನು.

ಇದನ್ನು ಕೇಳಿ ವಿಪ್ರರು ಯತಿವರ್ಯರೇ, ತ್ರಿಭುವನಗಳಲ್ಲಿಯೂ, ನಮ್ಮೊಡನೆ ವಾದಿಸುವವರು ಯಾರು ? ಅನೇಕರು ಜಯಪತ್ರಗಳನ್ನು ಕೊಟ್ಟಿರುವರು ಎಂದರು.

ತ್ರಿವಿಕ್ರಮನು ಎಷ್ಟು ವಿನಯದಿಂದ ಹೇಳಿದರೂ ಜಯಪತ್ರವನ್ನಾ ಗಲೀ ವಾದವನ್ನಾಗಲೀ ಕೊಡಬೇಕೆಂದು ಪೀಡಿಸಿದರು.

ತ್ರಿವಿಕ್ರಮನು ಮನಸ್ಸಿನಲ್ಲಿ ಈ ವಿಪ್ರರಿಗೆ ತಕ್ಕ ಶಿಕ್ಷೆಯನ್ನು ಮಾಡಿಸಬೇಕೆಂದು ಯೋಚಿಸಿದನು ಈ ವಿಪ್ರರು ಅನೇಕ ಬ್ರಾಹ್ಮಣ ರನ್ನು ತಿರಸ್ಕರಿಸಿರುವರು ಇವರಿಗೆ ಶಿಕ್ಷೆ ಮಾಡಿಸಬೇಕೆಂದು ಯೋಚಿಸಿ ಅವರನ್ನು ಕುರಿತು ಅಯ್ಯಾ, ಗಾಣಗಾಪುರದಲ್ಲಿ ನಮ್ಮ ಗುರುಗಳಿರುವರು. ಅವರಿಂದ ಜಯಪತ್ರವನ್ನು ಕೊಡಿಸುವೆನು ಮತ್ತು ಮನಶ್ಶಾಂತಿಯ ನ್ನುಂಟುಮಾಡಿಸುವೆನು ಎಂದನು.

ಈ ವಿಪ್ರರೀರ್ವರೂ ಪಾಲಕಿಯಲ್ಲಿ ಕುಳಿತು ಹೊರಟರು. ಈ ಅಜ್ಞಾನಿಗಳು ತ್ರಿವಿಕ್ರಮಯತಿಯನ್ನು ನಡೆಯಿಸಿಕೊಂಡು ತಾವು ಮಾತ್ರ ಅಂದಣದಲ್ಲಿ ಕುಳಿತು ಹೊರಟುದದರಿಂದ ಅಲ್ಪಾಯುಷಿಗಳಾದರು

ತ್ರಿವಿಕ್ರಮನು ಗಾಣಗಾಪುರಕ್ಕೆ ಬಂದು ಗುರುಗಳನ್ನು ವಂದಿಸಿ, ವ್ಯೋಮಕೇಶನೇ, ಭಕ್ತವತ್ಸಲನೇ, ಪರಮಪುರುಷನೇ, ಕೃಪಾನಿಧಿಯೇ, ಜಯಜಗದ್ಗುರುವೇ, ನಿರ್ಗುಣನೇ, ನಿರ್ವಿಕಾರನೇ ತ್ರಿಮೂರ್ತಿಸ್ವರೂ ಪನೇ, ಅನಾಥರಕ್ಷಕನೇ, ನಿಮ್ಮ ದರ್ಶನಮಾತ್ರದಿಂದ ಸಂಸಾರಯಾತ ನೆಯು ನಾಶವಾಗುವುದು. ಮೂಢರು ಅಜ್ಞಾನದಿಂದ ಅಧೋಗತಿಗೆ ಹೋಗು ವರು ಎಂದು ಸದ್ಗದಿತಕಂಠನಾಗಿಯೂ ರೋಮಾಂಚವುಳ್ಳವನಾಗಿಯೂ ಆನಂದಬಾಷ್ಪವುಳ್ಳವನಾಗಿಯೂ ಗುರುಚರಣಗಳಲ್ಲಿ ಮಸ್ತಕವನ್ನಿಟ್ಟನು.

ಬಳಿಕ ಶ್ರೀಗುರುವು ತ್ರಿವಿಕ್ರಮನನ್ನು ಸಂತೈಸಿ ಬಂದ ಕಾರ್ಯ ವಿಷಯವೇನೆಂದು ಕೇಳಿದರು.

ಆಗ ತ್ರಿವಿಕ್ರಮನು ಮಹಾಸ್ವಾಮಿ, ಉತ್ತಮರಾದ ಇಬ್ಬರು ವಿಪ್ರರು ವೇದಶಾಸ್ತ್ರಗಳಲ್ಲಿ ತಾವು ಪೂರ್ಣಜ್ಞಾನಿಗಳೆಂದು ಹೇಳುತ್ತಾ ವಾದಮಾಡ ಬೇಕೆಂದು ಇಲ್ಲಿಗೆ ಬಂದಿರುವರು, ಇವರು ಜಯಪತ್ರವನ್ನು ಕೇಳುವರು. ಎಷ್ಟು ಹೇಳಿದರೂ ಇವರು ಕೇಳುವುದಿಲ್ಲ. ಇದಕ್ಕೋಸುಗ ತಮ್ಮ ಸನ್ನಿಧಿಗೆ ಬಂದೆನು. ಮುಂದೆ ಏನು ಮಾಡಬೇಕು ಎಂಬುದನ್ನು ನಿರೂಪಿಸಿರಿ ಎಂದು ಬೇಡಿದನು.

ಇದನ್ನು ಕೇಳಿ ಗುರುವು ಮಂದಹಾಸದಿಂದ ಆ ವಿಪ್ರರನ್ನು ಕುರಿತು ವಿಪ್ರರೇ, ಏಕೆ ಬಂದಿರಿ? ನಿಮಗೆ ವಾದವೇಕೆ? ಇದರಿಂದ ಲಾಭ ವೇನು? ನಾವು ತಪಸ್ವಿಗಳಾದ ಯತಿಗಳು. ಜಯಪತ್ರವೇತಕ್ಕೆ? ಎಂದು ಕೇಳಿದರು.

ಇದನ್ನು ಕೇಳಿ ವಿಪ್ರರಿಬ್ಬರೂ ಸ್ವಾಮಿ, ನಾವು ಎಲ್ಲಾ ದೇಶಗಳ ಲ್ಲಿಯೂ ಸಂಚರಿಸಿ ಜಯಹೊಂದಿದೆವು. ನಮ್ಮಲ್ಲಿ ವಾದಿಸುವವರಿಲ್ಲವೆಂದು ಜಯಪತ್ರಗಳೆಲ್ಲವನ್ನೂ ತೋರಿಸಿದರು ಸ್ವಾಮಿ, ಈ ತ್ರಿವಿಕ್ರಮ ಯತಿಗಳನ್ನು ಕುರಿತು ವಾದವನ್ನಾಗಲೀ ಅಥವಾ ಜಯಪತ್ರವನ್ನಾಗಲೀ ಕೊಡಿರೆಂದು ಕೇಳಿದೆವು ಇವರು ಕೋಪದಿಂದ ನಿಮ್ಮ ಸನ್ನಿಧಿಗೆ ಕರೆ ತಂದರು. ಇಷ್ಟವಿದ್ದರೆ ತಾವಿಬ್ಬರೂ ವೇದಶಾಸ್ತ್ರಪುರಾಣಗಳಲ್ಲಿ ನಮ್ಮೊ ಡನೆ ವಾದಿಸಿರಿ ನಾವು ನಾಲ್ಕು ವೇದಗಳನ್ನೂ ಬಲ್ಲೆವು. ನಮಗೆ ಯಾರೂ ಸಮಾನರಿಲ್ಲ ನೀವು ಯಾವ ಶಾಸ್ತ್ರಗಳನ್ನು ತಿಳಿದಿರುವಿರಿ? ಎಂದು ಕೇಳಿದರು.

ಬಳಿಕ ಶ್ರೀಗುರುವು ವಿಪ್ರರಿರಾ, ದೇವದಾನವರೆಲ್ಲರಿಗೂ ಗರ್ವವೇ ನಾಶವನ್ನೂ ಮೃತ್ಯುವನ್ನೂ ತಂದಿತು. ಗರ್ವದಿಂದ ಬಲಿಯು ಏನಾದನು? ಬಾಣಾಸುರನೇನಾದನು? ರಾವಣನೂ ಕೌರವರೂ ಏನಾದರು? ವೇದದ ಅಂಶವನ್ನು ಬ್ರಹ್ಮಾದಿಗಳೂ ತಿಳಿಯರು ವೇದಗಳು ಅನಂತವಾಗಿವೆ ನಿಮ್ಮ ಗರ್ವವು ವ್ಯರ್ಥವಾದುದು ನೀವು ವೇದಶಾಸ್ತ್ರಗಳನ್ನು ಬಲ್ಲೆ ವೆನ್ನುವಿರಿ ಗರ್ವದಿಂದ ಏಕೆ ಭ್ರಾಂತರಾದಿರಿ? ಎಂದರು

ಇದನ್ನು ಕೇಳಿ ವಿಪ್ರರು ಸ್ವಾಮಿ! ನಾವು ವೇದಗಳೆಲ್ಲವನ್ನೂ ತಿಳಿದಿದ್ದೇವೆ. ವೇದಸಂಹಿತೆಯನ್ನು ಕೇಳಿರಿ ಎಂದು ಗರ್ವದಿಂದ ಹೇಳಿದರು.

...ಮುಧಾರಕನೆ ಶ್ರೀ...ವು ಆ ವಿಪ್ರರಿಗೆ ನಾಲ್ಕು ವೇದಗಳ ಲಕ್ಷಣಗಳನ್ನು ಹೇಳುವುದನ್ನು ಕೇಳು ಎಂದರು ಎಂಬಲ್ಲಿಗೆ ಗುರುಚರಿತ್ರೆಯಲ್ಲಿ ...ನೇ ಅಧ್ಯಾಯವು ಮುಗಿದುದು

## ...ನೆಯ ಅಧ್ಯಾಯ.

ಶ್ರೀಗಣೇಶಾಯನಮಃ ॥ ಶ್ರೀಗುರುಗಳು ಹೇಳುವರು. ವಿಪ್ರರೇ, ನಿಮಗೆ ಭ್ರಾಂತಿಯೇಕೆ ? ವೇದಗಳನ್ನು ಬ್ರಹ್ಮಾದಿಗಳೂ ತಿಳಿಯರು. ನಾರಾಯಣಾವತಾರರಾದ ವೇದವ್ಯಾಸರು ವೇದಗಳನ್ನು ವ್ಯಕ್ತಪಡಿಸಿ ವೇದವ್ಯಾಸರೆಂಬ ಹೆಸರನ್ನು ಪಡೆದರು ಇವರೂ ಪೂರ್ಣವಾಗಿ ತಿಳಿಯಲಿಲ್ಲ ಸಂಗ್ರಹವಾಗಿ ಹೇಳಿದ್ದಾರೆ ಇವರಿಗೆ ನಾಲ್ವರು ಶಿಷ್ಯರಿದ್ದರು. ಪೈಲ, ವೈಶಂಪಾಯನ, ಜೈಮಿನಿ, ಸುಮಂತರೆಂಬ ಶಿಷ್ಯರು ವೇದವ್ಯಾಸರಲ್ಲಿ ವೇದಾಭ್ಯಾಸಮಾಡುತ್ತಿದ್ದರು ಇವರನ್ನು ಕುರಿತು ವ್ಯಾಸರು ನಿಮಗೆ ವಿದ್ಯೆಯನ್ನು ಕಲಿಸುವುದು ಅಶಕ್ಯವು ಒಂದು ವೇದವನ್ನು ಕಲಿಸಲು ಕಲ್ಪಕಾಲವುಬೇಕು ನಾಲ್ಕುವೇದಗಳನ್ನೂ ಕಲಿಸುವುದೆಂತು? ವೇದಗಳನಂತವಾಗಿವೆ ಮೂರು ಬ್ರಹ್ಮಕಲ್ಪದಿಂದಲೂ ಬ್ರಹ್ಮಚರ್ಯದಿಂದ ವೇದಗಳನ್ನು ಪೂರ್ಣವಾಗಿ ಕಲಿಯಬೇಕೆಂದು ತಿರುಗಿದೆನು ಈ ವೇದಗಳ ಲಕ್ಷಣಗಳನ್ನು ಹೇಳುವೆನು, ಏಕ ಚಿತ್ತದಿಂದ ಕೇಳಿರಿ. ಪೂರ್ವದಲ್ಲಿ ಪ್ರಸಿದ್ಧನಾದ ಭರದ್ವಾಜ ಋಷಿಯು ವೇದಾಭ್ಯಾಸ ಮಾಡುತ್ತಿದ್ದನು ಈತನಿಗೆ ವೇದದ ಲವಾಂಶಮಾತ್ರ ತಿಳಿಯಿತು ಪುನಃ ತಪಸ್ಸು ಮಾಡಿದನು ಆಗ ಬ್ರಹ್ಮನು ಪ್ರತ್ಯಕ್ಷನಾಗಿ ಏನುಬೇಕೆಂದು ಕೇಳಿದನು

ಆಗ ಭರದ್ವಾಜನು ಸ್ವಾಮಿ! ನಾನು ಬ್ರಹ್ಮಚರ್ಯಾಶ್ರಮದಲ್ಲಿ ವೇದವನ್ನು ಕಲಿಯುವೆನು. ವೇದಾಂಶವನ್ನು ನನಗೆ ಕೊಡಿಸಿ ಇದನ್ನು ಕಲಿಸಿರಿ ನನಗೀವರವನ್ನು ಕೊಡಿಸಿರಿ ಎಂದು ವಂದಿಸಿದನು

ಆಗ ಬ್ರಹ್ಮನು ಭರದ್ವಾಜನೇ, ವೇದಗಳಿಗೆ ಮಿತಿಯಿಲ್ಲ. ವೇದಗಳು ಅಗೋಚರವಾಗಿವೆ ಎಲ್ಲವನ್ನೂ ಹೇಗೆ ಕಲಿಸಲಿ ? ನಿನಗೆ ಸ್ವಲ್ಪಕಾಲ

ಕಲಿಸುವೆನು. ನಿರ್ಮಲ ಮನಸ್ಸಿನಿಂದ ಇರು ಎಂದು ಹೇಳಿ ವೇದಗಳ ಮೂರು ಪರ್ವತಗಳನ್ನು ಆತನಿಗೆ ತೋರಿಸಿದನು.

ಜ್ಯೋತಿರ್ಮಯವಾದ, ಕೋಟಿ ಸೂರ್ಯ ಸದೃಶವಾದ ವೇದರಾಶಿಗಳನ್ನು ನೋಡಿ ಇದನ್ನು ಕಲಿಯುವುದೆಂತು? ಎಂದು ಹೆದರಿದನು. ಮೂರು ಬ್ರಹ್ಮಕಲ್ಪದವರೆಗೆ ಈತನು ನಾಲ್ಕು ವೇದಗಳಲ್ಲಿಯೂ ಸ್ವಲ್ಪಭಾಗವನ್ನು ಮಾತ್ರ ಅಭ್ಯಾಸಮಾಡಿದನು. ಆತನು ಈ ವೇದರಾಶಿಯನ್ನು ನೋಡಿ ಹೆದರಿ ಇದನ್ನು ಕಲಿಯಲು ಶಕ್ಯವಲ್ಲ. ಮನ್ನಿಸಿರಿ, ಸ್ವಾಮಿಾ, ನೀವು ಎಷ್ಟು ಕೊಡುವಿರೋ ಅಷ್ಟುಮಾತ್ರ ಗ್ರಹಿಸುವೆನು. ಶರಣಾಗತಾಧಾರನೇ, ವೇದವನ್ನು ಕಲಿಯಲು ನನಗೆ ಬಹಳ ಇಷ್ಟವಿದೆ ಎಂದು ನಿಮ್ಮ ಹತ್ತಿರ ಬಂದೆನು. ಈ ವೇದರಾಶಿಯನ್ನು ನೋಡಿ ಹೆದರಿದೆನು ಎಂದನು.

ಇದನ್ನು ಕೇಳಿ ಬ್ರಹ್ಮನು ಭರದ್ವಾಜನಿಗೆ ಮೂರು ಮುಷ್ಟಿ ವೇದವನ್ನು ಸಂತೋಷದಿಂದ ಕೊಟ್ಟನು ಮೂರು ವೇದಗಳ ಮಂತ್ರಗಳನ್ನು ಬೇರೆ ಮಾಡಲು ನಾಲ್ಕು ವೇದಗಳಾದುವು ಈವರೆಗೂ ಭರದ್ವಾಜನು ಇದನ್ನು ಕಲಿತಿಲ್ಲ ಯಾವಾಗ ಕಲಿಯುವನೋ ತಿಳಿಯದು ನಾಲ್ಕು ವೇದಗಳನ್ನೂ ನೀವು ಕಲಿತಿರುವುದು ನಿಜವೇ ? ಒಂದು ವೇದವನ್ನು ಪೂರ್ಣವಾಗಿ ಕಲಿಯಲು ಅನನಿಗೆ ಬಹಳ ಪ್ರಯತ್ನವಾಯಿತು ಇವನ ಅಭ್ಯಾಸ ಕ್ರಮವನ್ನು ಹೇಳುವೆನು ಕೇಳಿರಿ—

ಶಿಷ್ಯರು ವ್ಯಾಸರನ್ನುಕುರಿತು ಸ್ವಾಮಿಾ ' ಒಂದೊಂದು ವೇದವನ್ನೂ ವಿಸ್ತಾರವಾಗಿ ಆದ್ಯಂತವನ್ನು ತಿಳಿಸಿರಿ ನಾವು ಶಕ್ತ್ಯನುಸಾರವಾಗಿ ಕಲಿಯುವೆವು ಎಂದರು

ಆಗ ವ್ಯಾಸರು ದಯೆಯಿಂದ ಪೈಲನೆಂಬ ಶಿಷ್ಯನಿಗೆ ಹೇಳುವರು. ಪೈಲನೇ, ಋಗ್ವೇದವನ್ನು ಧ್ಯಾನಪೂರ್ವಕವಾಗಿ ಪಠಿಸು ಇದರ ಭೇದಗಳನ್ನು ಹೇಳುವೆನು ಕೇಳೆಂದರು—

ಆಗ ಶಿಷ್ಯನು ಸ್ವಾಮಿಾ, ಇದರಲ್ಲಿ ಯಾವುದು [illegible] ಅದನ್ನು ನನಗೆ ಕಲಿಸಿರಿ, ಭಕ್ತಿಯಿಂದ ಕಲಿಯುವೆನು, ನೀವು ನನಗೆ ಕಾಮಧೇನು ವಿನಂತಿರುವಿರಿ ಎಂದು ವಿಜ್ಞಾಪಿಸಿದನು

ಆಗ ವ್ಯಾಸರು ಹೇಳುವರು— ಋಗ್ವೇದದಲ್ಲಿ ಆಯುರ್ವೇದವು ಉಪವೇದವಾಗಿದೆ. ಇದು ಅತ್ರಿಗೋತ್ರ, ಬ್ರಹ್ಮನು ದೇವತೆಯು, ಗಾಯತ್ರೀ ಛಂದಸ್ಸು, ರಕ್ತವರ್ಣ, ಪದ್ಮದಂತೆ ನೇತ್ರ, ವಿಸ್ತಾರವಾದ ಶಂಖದಂತಿರುವ ಕೊರಳು, ಕೂದಲೂ ಮೀಸೆಯೂ ದ್ವಿರತ್ನಿಪ್ರಮಾಣವು (ಎರಡು ಮೊಳ) ಈರೀತಿಯಾದ ಋಗ್ವೇದಮೂರ್ತಿಯನ್ನು ಧ್ಯಾನಿಸು. ಇದರ ಮೊದಲನೇ ಚರ್ಚೆಯು ಶ್ರಾವಕವು, ಎರಡನೇ ಶ್ರವಣೀಯು ಪರಾಕ್ರಮಿಯು, ಷಟ್ ಕ್ರಮಶಾಖೆಯೂ ಎರಡು, ಐದನೇ [illegible] ಭೇದಗಳು, ಆಶ್ವಲಾಯನೀ, ಶಾಂಖಾಯನೀ, ಶಾಕಲ, ಬಾಷ್ಕಲ, ಮಾಂಡೂಕ, ಮುಂತಾದ ಭೇದಗಳುಂಟು ಎಂದರು ಈ ಕಲಿಯುಗದಲ್ಲಿ ವೇದಗಳೆಲ್ಲವನ್ನೂ ಕಲಿತಿರುವವೆನ್ನುವಿರಿ ಈ ಋಗ್ವೇದದ ಮೇಲಿನ ಹನ್ನೆರಡು ಭೇದಗಳಲ್ಲಿ ಪ್ರತಿಯೊಂದೂ ವಿಸ್ತಾರವಾಗಿದೆ ಇದರ ಸುಲಕ್ಷಣವನ್ನುಯಾರು ಹೇಳುವರು ? ವ್ಯಾಸರು ಶಿಷ್ಯರಿಗೆ ಹೇಳಿದರು ಯಜುರ್ವೇದವನ್ನು ವಿಸ್ತಾರವಾಗಿ ಹೇಳುವೆನು ವೈಶಂಪಾಯನನೇ ಕೇಳು ಇದನ್ನು ಕಲಿಯುವವನಾಗು ಇದರ ಉಪವೇದವು ಧನುರ್ವೇದವು, ಭರದ್ವಾಜಗೋತ್ರ, ವಿಷ್ಣುವೇ ದೇವನು, ತ್ರಿಷ್ಟುಪ್ ಛಂದಸ್ಸು, ಇದರ ಮೂರ್ತಿಸ್ವರೂಪ ಹೇಗಂದರೆ —ಮಧ್ಯಭಾಗ ಕೃಶವು ಸ್ಥೂಲವಾದ ಕೊರಳೂ ಕಪಾಲವೂ ಉಳ್ಳದ್ದು, ಕಾಂಚನವರ್ಣವು, ಕಣ್ಣು ಪಿಂಗಳವರ್ಣ, ಕೆಂಪಾದ ಸೂರ ನ ವರ್ಣ, ಐದು ಅರತ್ನಿ (ಮೊಳ) ಉದ್ದವಾದುದು ಎಂದೀಮೂರ್ತಿಯನ್ನು ಧ್ಯಾನಿಸು ಇದರ ಭೇದಗಳಲ್ಲಿ ೧ನೇದು ಚರಕ, ಆಹೂರಕ, ನಾಮಕರ, ಪ್ರಾಚ್ಯಕರ, ಕಪಿಲಕರ, ಆರಾಯಣಿ, ವಾರ್ತಾಂತವೀಯ, ಶ್ವೇತ, ಶ್ವೇತತರ, ಮೈತ್ರಾಯಣಿ ಎಂದು ಹತ್ತು ಶಾಖಾ ಭೇದಗಳಿವೆ ಇವುಗಳಲ್ಲಿ ಉಪಭೇದಗಳು ಏಳು —ಮಾನವ, ದುಂದುಭಿ, ಐಕೇಯ, ವಾರಾಹ, ಹರಿದ್ರವೇಯ, ಶಾಮ, ಶಾಮಾಯಣೀ ಎಂಬೇಳು ವಿಧಗಳು. ವಾಜಸನೇಯ ಶಾಖೆಯಲ್ಲಿ ೧೮ ಭೇದಗಳಿವೆ—ವಾಜಸನೇಯ, ಜಾಬಾಲ, ಕಣ್ವ, ಬಹುಧೇಯ, ಮಾಧ್ಯಂದಿನ, ಶಾಪಿಯಾ, ಸ್ಥಾಪಣೀಯ, ಕಾಪಾಲ, ಪೌಂಡ್ರವತ್ಸಾ, ಆವಟಿಕಾ, ಪರಮಾವಟಿಕಾ ಎಂದು ೧೧ ಭೇದಗಳು. ೧೨ನೇ ಪಾರಾಶರ್ಯ, ೧೩ ವೈದೇಯ, ೧೪ ವೈನೇಯ, ೧೫ ಔಧೇಯ, ೧೬ ಗಾಲವ, ೧೭ ವೈಜವಾ ೧೮ ಕಾತ್ಯಾಯನೀ ಎಂದು ೧೮ ಭೇದಗಳು,

ತೈತ್ತರೀಯ ಶಾಖೆಯಲ್ಲಿ-ಔಖ್ಯಾ, ಕಾಂಡಿಕೇಯ ಎಂಬೆರಡು ಭೇದಗಳು ಇವುಗಳಲ್ಲಿ ಆಪಸ್ತಂಭ ಪ್ರಮನೋಹರವಾದ ದೊಡ್ಡ ಶಾಖೆಯಾಗಿದೆ ಯಜ್ಞಾದಿ ಕರ್ಮಗಳಲ್ಲಿನ ಆಚಾರವು ಇದರಲ್ಲಿದೆ ೧ ಬೋಧಾಯನೀ, ೨ ಸತ್ಯಾಷಾಢಿ, ೩ ಅಘನಾಶನಿ, ೪ ಹಿರಣ್ಯಕೇಶಿ ೫ ಔಧೇಯಿ ಎಂದೈದು ಭೇದಗಳು ಇವುಗಳನ್ನು ಅನುಕ್ರಮವಾಗಿ ಪಠಿಸಬೇಕು ಶೀಕ್ಷಾ, ವ್ಯಾಕರಣ, ಕಲ್ಪ ನಿರುಕ್ತ, ಛಂದಸ್ಸು, ಜ್ಯೋತಿಷ ಎಂದು ವೇದಗಳ ಷಡಂಗಗಳವೆ ಇವುಗಳ ಉಪಾಂಗಗಳು ಯಾವುವೆಂದರೆ —ಪ್ರತಿಪದ, ಅನುಪದ, ಛಂದ, ಭಾಷಾಧರ್ಮ, ಮೀಮಾಂಸ, ನ್ಯಾಯ, ಕರ್ಮಸಂಹಿತ ಇವು ಪ್ರಸಿದ್ಧಗಳಾಗಿವೆ ಪರಿಶಿಷ್ಟವು ೨೮ ಇವೆ ನರರಿಗೆ ಅಶಕ್ಯವಾಗಬಾರದೆಂದು ಲೋಕೋಪಕಾರಕ್ಕಾಗಿ ಈ ರೀತಿಯಾಗಿ ಹೇಳಲ್ಪಡುತ್ತದೆ. ಈ ಶಾಖಾ ಭೇದಗಳಲ್ಲಿ ನಿನ್ನ ಶಕ್ತಿಯಿದ್ದಷ್ಟು ಕಲಿ ಎಂದರು ಆಗ ವೈಶಂಪಾಯನನು ಸ್ವಾಮಿ! ಯಜುರ್ವೇದದ ಶಾಖಾ ಭೇದಗಳನ್ನು ಕ್ರಮವಾಗಿ ವಿವರಿಸಿರಿ ಇದರ ಮೂಲ ಶಾಖೆಯು ಯಾವುದೆಂಬ ಸಂದೇಹವುಂಟಾಗಿದೆ. ಇದನ್ನು ಪರಿಹರಿಸಿರಿ ಎಂದು ವಿಜ್ಞಾಪಿಸಿದನು ವ್ಯಾಸನು ಈ ಮಾತನ್ನು ಕೇಳಿ, ಶಿಷ್ಯನೇ, ಕೇಳು ಈ ವೇದಮೂಲವನ್ನು ಹೇಳುವೆನು ಯಜುರ್ವೇದವು ಮಂತ್ರ, ಬ್ರಾಹ್ಮಣ, ಸಂಹಿತೆ ಎಂದು ೩ ಭೇದಗಳಾಗಿವೆ ಇದೇ ಇದರ ಮೂಲವು ಯಜ್ಞಾದಿ ಕರ್ಮಗಳಿಗಾಗಿ ಇದನ್ನು ಅಭ್ಯಾಸ ಮಾಡಬೇಕು. ಈ ಯಜುರ್ವೇಗ ಕ್ರಮವನ್ನು ವಿವರಿಸುವೆನು ಕೇಳು ಮೊದಲು ಇಷೇತ್ವಾ ಎಂಬ ಪ್ರಶ್ನೆಗೆ ೧೪ ಅನುವಾಕಗಳವೆ ಇವುಗಳಲ್ಲಿ ೨೮ ಪನ್ನಗಳವೆ ಆಪವ್ಯೂರ್ಧ್ವಪ್ರಶ್ನೆಗೆ ೧೨ ಅನುವಾಕಗಳೂ, ೩೭ ಪನ್ನಗಳೂ ಇವೆ ದೇವಸ್ಯತ್ವಾ ಪ್ರಶ್ನೆಗೆ ೧೧ ಅನುವಾಕಗಳೂ, ೩೧ ಪನ್ನಗಳವೆ ಆದದೆ ಎಂಬ ಪ್ರಶ್ನೆಗೆ ೪೬ ಅನುವಾಕಗಳೂ ೫೪ ಪನ್ನಗಳೂ ಇವೆ. ದೇವಾಸುರ ಪ್ರಶ್ನೆಗೆ ೧೧ ಅನುವಾಕಗಳೂ, ೫೧ ಪನ್ನಗಳೂ ಇವೆ. ಸಂತ್ವಾಸಿಂಚಾ ಎಂಬ ಪ್ರಶ್ನೆಗೆ ೧೨ ಅನುವಾಕಗಳವೆ. ಇವುಗಳಲ್ಲಿ ೫೧ ಪನ್ನಗಳವೆ. ಪಾಕಯಜ್ಞ ಪ್ರಶ್ನೆಗೆ ೧೩ ಅನುವಾಕಗಳೂ ೫೧ ಪನ್ನಗಳೂ ಇವೆ ಅನುಮತ್ಯೈ ಪ್ರಶ್ನೆಗೆ ೨೨ ಅನುವಾಕಗಳೂ, ೪೨ ಪನ್ನಗಳೂ ಇವೆ. ಇದು ಪ್ರಥಮಾಷ್ಟಕವು. ಇದರಲ್ಲಿ ಒಟ್ಟು ೧೧೩ ಅನುವಾಕಗಳೂ, ೩೪೨ ಪನ್ನಗಳೂ ಇವೆ. ೨ ನೇ ಅಷ್ಟಕ ವಿಚಾರವನ್ನು ಕೇಳು—ಇದರಲ್ಲಿ ೧ ನೇ

ವಾಯುವ್ಯವೆಂಬ ಪ್ರಶ್ನೆಗೆ ೧೧ ಅನುವಾಕಗಳೂ ೬೫ ಪನ್ನಗಳೂ, ೨ ನೇ ಪ್ರಜಾಪತಿ ಎಂಬ ಪ್ರಶ್ನೆಗೆ ೧೨ ಅನುವಾಕಗಳೂ ೩೧ ಪನ್ನಗಳೂ, ಆದಿತ್ಯ ಎಂಬ ಪ್ರಶ್ನೆಗೆ ೧೪ ಅನುವಾಕಗಳೂ ೫೬ ಪನ್ನಗಳೂ ಇವೆ ದೇವಾ ಮನುಷ್ಯಾ ಪ್ರಶ್ನೆಗೆ ೧೪ ಅನುವಾಕಗಳೂ ೪೭ ಪನ್ನಗಳೂ ಇವೆ ವಿಶ್ವ ರೂಪ ಪ್ರಶ್ನೆಗೆ ೧೬ ಅನುವಾಕಗಳೂ ೩೪ ಪನ್ನಗಳು ಇವೆ ಇದನ್ನು ಪಠಿಸಿದರೆ ಮಹಾ ಪಾತಕಗಳೂ ಹೋಗುವುವು ಸಮಿಧಾನಾಮ ಪ್ರಶ್ನೆಗೆ ೧೨ ಅನುವಾಕಗಳೂ ೩೦ ಪನ್ನಗಳೂ ಇವೆ ಈರೀತಿಯಾಗಿ ೨ ನೇ ಅಷ್ಟಕಕ್ಕೆ ೭೫ ಅನುವಾಕಗಳೂ ೪೭೭ ಪನ್ನಗಳಿವೆ ೩ ನೇ ಅಷ್ಟಕದ ಲಕ್ಷಣವನ್ನು ಕೇಳು —ಇದರಲ್ಲಿ ೧ ನೇ ಪ್ರಜಾಪತಿರಕಾಮಯುತ ಎಂಬುದಕ್ಕೆ ೧೧ ಅನುವಾಕಗಳೂ ೪೨ ಪನ್ನಗಳೂ ಇವೆ ಯೋವೈಪವಮಾನವೆಂಬ ಪ್ರಶ್ನೆಗೆ ೧೧ ಅನುವಾಕಗಳೂ ೪೬ ಪನ್ನಗಳೂ, ೩ ನೇ ಅಗ್ನೇತೇಜಸ್ವಿ ಪ್ರಶ್ನೆಗೆ ೧೧ ಅನುವಾಕಗಳೂ ೪೬ ಪನ್ನಗಳೂ, ೪ ನೇ ವಿವಾತ್ಯಾದಲ್ಲಿ ೧೧ ಅನುವಾಕಗಳೂ ೪೬ ಪನ್ನಗಳೂ ಇವೆ ೫ ನೇ ಪೂರ್ಣಾ ಎಂಬುದಕ್ಕೆ ೧೧ ಅನುವಾಕಗಳೂ ೨೬ ಪನ್ನಗಳೂ ಇವೆ ಈರೀತಿ ೩ ನೇ ಅಷ್ಟಕಕ್ಕೆ ೫೫ ಅನುವಾಕಗಳೂ ೨೦೬ ಪನ್ನಗಳೂ ಇವೆ ೪ ನೇ ಅಷ್ಟಕದ ೧ ನೇ ಯುಂಜಾನ ಎಂಬ ಪ್ರಶ್ನೆಗೆ ೧೧ ಅನುವಾಕಗಳೂ ೪೬ ಪನ್ನಗಳೂ ಇವೆ ೨ ನೇ ವಿಷ್ಣೋಃ ಕ್ರಮ ಎಂಬುದಕ್ಕೆ ೧೧ ಅನುವಾಕಗಳೂ ೪೭ ಪನ್ನಗಳೂ ಇವ ೩ ನೇ ಅಪಾಂತ್ವಾ ಪ್ರಶ್ನೆಗೆ ೧೩ ಅನುವಾಕಗಳೂ ೩೬ ಪನ್ನಗಳೂ ಇವೆ ೪ ನೇ ರಶ್ಮಿರಸೀ ಪ್ರಶ್ನೆಗೆ ೧೨ ಅನುವಾಕಗಳೂ ೩೩ ಪನ್ನಗಳೂ ಇವೆ ನಮಸ್ತೆರುದ್ರಪ್ರಶ್ನೆಗೆ ೧೧ ಅನುವಾಕಗಳೂ ೨೩ ಪನ್ನಗಳೂ ಇವೆ ಅತ್ಮನ್ನೂರ್ಜಾ ಪ್ರಶ್ನೆಗೆ ೯ ಅನುವಾಕಗಳೂ ೪೬ ಪನ್ನಗಳೂ ಇವೆ ಅಗ್ನಾವಿಷ್ಣೋಃ ಪ್ರಶ್ನೆಗೆ ೧೫ ಅನುವಾಕಗಳೂ ೩೯ ಪನ್ನಗಳೂ ಇವೆ. ೪ ನೇ ಅಷ್ಟಕದಲ್ಲಿ ಈರೀತಿಯಾಗಿ ಏಳು ಪ್ರಶ್ನೆಗಳೂ ೭೨ ಅನುವಾಕಗಳೂ ೨೩೯ ಪನ್ನಗಳೂ ಇವೆ. ಪಂಚಮಾಷ್ಟಕದ ೧ ನೇ ಸಾವಿತ್ರಾಣಿ ಪ್ರಶ್ನೆಗೆ ೧೧ ಅನುವಾಕಗಳೂ ೬೦ ಪನ್ನಗಳೂ ಇವೆ. ೨ ನೇ ವಿಷ್ಣುಮುಖ ಪ್ರಶ್ನೆಗೆ ೧೨ ಅನುವಾಕಗಳೂ ೬೪ ಪನ್ನಗಳಿವೆ. ೩ ನೇ ಉತ್ಪನ್ನಯಜ್ಞ ಪ್ರಶ್ನೆಗೆ ೧೨ ಅನುವಾಕಗಳೂ ೪೭ ಪನ್ನಗಳೂ ಇವೆ. ೪ ನೇ ದೇವಾಸುರ ಪ್ರಶ್ನೆಗೆ ೧೩ ಅನು

ವಾಕಗಳೂ ೫೯ ಪನ್ನಗಳೂ ಇವೆ ಯದೇಕೆ ಎಂಬ ಪ್ರಶ್ನೆಗೆ ೨೪ ಅನು
ವಾಕಗಳೂ ೬೦ ಪನ್ನಗಳೂ ಇವೆ ಹಿರಣ್ಯವರ್ಣಾ ಎಂಬ ಪ್ರಶ್ನೆಗೆ ೨೩
ಅನುವಾಕಗಳೂ ೫೪ ಪನ್ನಗಳೂ ಇವೆ ಯೋವಾ ಆಯುಥಾ ಎಂಬ
ಪ್ರಶ್ನೆಗೆ ೨೬ ಅನುವಾಕಗಳೂ ೫೮ ಪನ್ನಗಳೂ ಇವೆ ಈರೀತಿಯಾಗಿ
೫ ನೇ ಅಷ್ಟಕದ ೭ ಪ್ರಶ್ನೆಗಳಿಗೆ ೧೨೦ ಅನುವಾಕಗಳೂ ೪೦೩ ಪನ್ನಗಳೂ
ಇವೆ. ಷಷ್ಠಾಷ್ಟಕದ ಪ್ರಾಚೀನವಂಶವೆಂಬ ೧ ನೇ ಪ್ರಶ್ನೆಗೆ ೧೧ ಅನು
ವಾಕಗಳೂ ೭೬ ಪನ್ನಗಳೂ ಇವೆ ಯದುಭವ ಎಂಬ ಪ್ರಶ್ನೆಗೆ ೧೧
ಅನುವಾಕಗಳೂ ೫೯ ಪನ್ನಗಳೂ ಇವೆ ಚಾತ್ವಾಲ ಎಂಬ ಪ್ರಶ್ನೆಗೆ ೧೧
ಅನುವಾಕಗಳೂ ೬೦ ಪನ್ನಗಳೂ ಇವೆ ಯಜ್ಞೇನ ಎಂಬ ಪ್ರಶ್ನೆಗೆ
೧೧ ಅನುವಾಕಗಳೂ ೫೧ ಪನ್ನಗಳೂ ಇವೆ. ಇಂದ್ರೋವೃತ್ರ ಎಂಬ
ಪ್ರಶ್ನೆಗೆ ೧೧ ಅನುವಾಕಗಳೂ ೪೦ ಪನ್ನಗಳೂ ಇವೆ ಸುವರ್ಗಾಯ
ಎಂಬ ಪ್ರಶ್ನೆಗೆ ೧೧ ಅನುವಾಕಗಳೂ ೪೩ ಪನ್ನಗಳೂ ಇವೆ ೬ ನೇ
ಅಷ್ಟಕದಲ್ಲಿ ೬೬ ಅನುವಾಕಗಳೂ ೩೩೩ ಪನ್ನಗಳೂ ಇವೆ. ೭ ನೇ
ಅಷ್ಟಕದ ೧ ನೇ ಪ್ರಜನನ ಎಂಬ ಪ್ರಶ್ನೆಗೆ ೨೦ ಅನುವಾಕಗಳೂ ೫೭
ಪನ್ನಗಳೂ ಇವೆ ೨ ನೇ ಸಾಧ್ಯಾ ಎಂಬ ಪ್ರಶ್ನೆಗೆ ೨೦ ಅನುವಾಕಗಳೂ
೫೦ ಪನ್ನಗಳೂ ಇವೆ ೩ ನೇ ಪ್ರಜವೇವಾ ಪ್ರಶ್ನೆಗೆ ೨೦ ಅನುವಾಕ
ಗಳೂ ೪೭ ಪನ್ನಗಳೂ ಇವೆ ೪ ನೇ ಬೃಹಸ್ಪತೀ ಎಂಬ ಪ್ರಶ್ನೆಗೆ ೨೭
ಅನುವಾಕಗಳೂ ೫೩ ಪನ್ನಗಳೂ ಇವೆ ೫ ನೇ ಗಾವೋವಾ ಪ್ರಶ್ನೆಗೆ
೨೫ ಅನುವಾಕಗಳೂ ೫೪ ಪನ್ನಗಳೂ ಇವೆ ಸಪ್ತಮಾಷ್ಟಕದಲ್ಲಿ
ಈರೀತಿಯಾಗಿ ೧೦೭ ಅನುವಾಕಗಳೂ ೨೫೧ ಪನ್ನಗಳೂ ಇವೆ ೮ ನೇ
ಅಷ್ಟಕದ ಸಂಹಿತೆಯಲ್ಲಿ ೪೦ ಪ್ರಶ್ನೆಗಳಲ್ಲಿ ೬೪೮ ಅನುವಾಕಗಳು ೧೭೯೮
ಪನ್ನಗಳೂ ಇವೆ. ಬ್ರಾಹ್ಮಣದಲ್ಲಿ ಮೂರು ಅಷ್ಟಕಗಳವೆ ೧ ನೇ ಅಷ್ಟಕ
ದಲ್ಲಿ ೮ ಪ್ರಶ್ನೆಗಳು ಇವೆ ೧ ನೇ ಸಂಧತ್ತಾ ಎಂಬುದಕ್ಕೆ ೧೦ ಅನುವಾಕ
ಗಳು ಸೇರಿದ ಎಂಭತ್ತು ದಶಕಗಳು ಮನೋಹರವಾಗಿವೆ. ಉದ್ಧನ್ಯಾ
ಎಂಬ ೨ ನೇ ಪ್ರಶ್ನೆಗೆ ೬ ಅನುವಾಕಗಳೂ ೫೦ ದಶಕಗಳೂ ಇವೆ. ೩ ನೇ
ವಾಜಪೇಯದ ಅನುಸಂಧಾನವಾದ ದೇವಾಸುರ ಪ್ರಶ್ನೆಗೆ ೧೦ ಅನುವಾಕ
ಗಳೂ ೬೫ ದಶಕಗಳೂ ಇವೆ. ೪ ನೇ ಉಭಯೇ ಎಂಬ ಪ್ರಶ್ನೆಗೆ ೧೦
ಅನುವಾಕಗಳೂ ೬೬ ದಶಕಗಳೂ ಇವೆ. ೫ ನೇ ಅಗ್ನೇಃಕೃತ್ತಿಕಾ ಎಂಬ

ಪ್ರಶ್ನೆಗೆ ೧೨ ಅನುವಾಕಗಳೂ ೬೨ ದಶಕಗಳೂ ಇವೆ. ೬ನೇ ಅನುಮತ್ಯಪ್ರಶ್ನೆಗೆ ೧೦ ಅನುವಾಕಗಳೂ ೭೫ ದಶಕಗಳು ಇವೆ. ೭ನೇ ಏಕದ್ವಾಬ್ರಾಹ್ಮಣದಲ್ಲಿ ೧೦ ಅನುವಾಕಗಳೂ ೬೪ ದಶಕಗಳೂ ಇವೆ. ೮ನೇ ವರುಣಸ್ಯಪ್ರಶ್ನೆಗೆ ೧೦ ಅನುವಾಕಗಳೂ ೩೭ ದಶಕಗಳೂ ಇವೆ. ಈರೀತಿಯಾಗಿ ಪ್ರಥಮಾಷ್ಟಕ ಬ್ರಾಹ್ಮಣದಲ್ಲಿ ೮ ಪ್ರಶ್ನೆಗಳೂ ೭೮ ಅನುವಾಕಗಳೂ ೪೯೯ ದಶಕಗಳೂ ಇವೆ. ಬ್ರಾಹ್ಮಣದ ೨ನೇ ಅಷ್ಟಕದಲ್ಲಿ ೧ನೇ ಪ್ರಶ್ನೆ ಆಂಗೀರಸ ಎಂಬುದಕ್ಕೆ ೧೧ ಅನುವಾಕಗಳೂ ೬೦ ದಶಕಗಳೂ ಇವೆ. ಪ್ರಜಾಪತಿರಕಾಂಡ ಎಂಬ ೨ನೇ ಪ್ರಶ್ನೆಗೆ ೧೧ ಅನುವಾಕಗಳೂ ೭೩ ದಶಕಗಳೂ ಇವೆ. ೩ನೇ ಖಾಂಡ ಬ್ರಹ್ಮವಾದಿನದಲ್ಲಿ ೧೧ ಅನುವಾಕಗಳೂ ೫೦ ದಶಕಗಳೂ ಇವೆ. ೪ ಜುಷ್ಟೋ ಎಂಬ ಪ್ರಶ್ನೆಗೆ ೧೮ ಅನುವಾಕಗಳೂ ಪ್ರಾಣೋರಕ್ಷತಿಯೆಂಬ ಪ್ರಶ್ನೆಗೆ ೮ ಅನುವಾಕಗಳೂ ೪೫ ದಶಕಗಳೂ ಇವೆ. ೬ನೇ ಸ್ವಾದ್ವಿತ್ವಾ ಪ್ರಶ್ನೆಯಲ್ಲಿ ೨೦ ಅನುವಾಕಗಳೂ ೮೬ ದಶಕಗಳೂ ಇವೆ. ೭ನೇ ತ್ರಿವೃತ್ತ್ವಾಪ್ರಶ್ನೆಗೆ ೧೮ ಅನುವಾಕಗಳೂ ೬೬ ದಶಕಗಳೂ ಇವೆ. ೮ನೇ ಪೀವ್ನೋನ ಪ್ರಶ್ನೆಗೆ ೯ ಅನುವಾಕಗಳೂ ೭೯ ದಶಕಗಳೂ ಇವೆ. ದ್ವಿತೀಯಾಷ್ಟಕ ಬ್ರಾಹ್ಮಣದಲ್ಲಿ ೮ ಪ್ರಶ್ನೆಗಳೂ ೯೬ ಅನುವಾಕಗಳೂ ೪೬೭ ದಶಕಗಳೂ ಇವೆ. ತೃತೀಯಾಷ್ಟಕ ಬ್ರಹ್ಮಣದಲ್ಲಿ ೧೨ ಪ್ರಶ್ನೆಗಳು ಇವೆ.—೧ನೇ ಪ್ರಶ್ನೆಯಾದ ಅಗ್ನಿರ್ನಃಪಾತು ಎಂಬುದರಲ್ಲಿ ೬ ಅನುವಾಕಗಳೂ, ೬೧ ದಶಕಗಳೂ, ೨ನೇ ಪ್ರಶ್ನೆಯಲ್ಲಿ ೧೦ ಅನುವಾಕಗಳೂ ೮೫ ದಶಕಗಳೂ ಇವೆ. ೩ನೇ ಪ್ರತ್ಯುಷ್ಟಾದಲ್ಲಿ ೧೧ ಅನುವಾಕಗಳೂ ೭೯ ದಶಕಗಳೂ ಇವೆ. ೪ನೇ ಪ್ರಶ್ನೆಯಲ್ಲಿ ಒಂದು ಅನುವಾಕವೂ ೧೯ ದಶಕಗಳೂ ಇವೆ. ೫ನೇ ಸತ್ಯಾ ಎಂಬುದರಲ್ಲಿ ೧೪ ಅನುವಾಕಗಳೂ ೨೯ ದಶಕಗಳೂ ಇವೆ. ೬ನೇ ಅಂಜಂತೀ ಪ್ರಶ್ನೆಗೆ ೧೫ ಅನುವಾಕಗಳೂ ೩೭ ದಶಕಗಳೂ ಇವೆ ೭ನೇ ಅಚ್ಛಿದ್ರಸರ್ವಾಸ್ವಾ ಎಂಬ ಪ್ರಶ್ನೆಗೆ ೧೪ ಅನುವಾಕಗಳೂ ೧೩೦ ದಶಕಗಳೂ ಇವೆ. ೮ನೇ ಅಶ್ವಮೇಧದಲ್ಲಿ ಪ್ರಸಿದ್ಧವಾದ ಸಾಂಗ್ರಹಣ್ಯಾದಲ್ಲಿ ೧೩ ಅನುವಾಕಗಳೂ ೯೧ ದಶಕಗಳೂ ಇವೆ. ೯ನೇ ಅಶ್ವಮೇಧದಲ್ಲಿ ಪ್ರಸಿದ್ಧವಾದ ಪ್ರಜಾಪತಿರಕಾಮದಲ್ಲಿ ೨೩ ಅನುವಾಕಗಳೂ ೮೪ ದಶಕಗಳೂ ಇವೆ. ೧೦ನೇ ಕಾಠಣಸಂಜ್ಞಾನದಲ್ಲಿ ೧೧ ಅನುವಾಕಗಳೂ೪೯ ದಶಕಗಳೂ ಇವೆ. ೧೧ನೇ

ಲೋಕೋಸಿಕಾರಕದಲ್ಲಿ ೧೦ ಅನುವಾಕಗಳೂ ೬೦ ದಶಕಗಳೂ ಇವೆ. ೧೦ನೇ ತುಭ್ಯಾ ಎಂಬ ಪ್ರಶ್ನೆಗೆ ೯ ಅನುವಾಕಗಳೂ ೫೬ ದಶಕಗಳೂ ಇವೆ ಈರೀತಿಯಿಂದ ೩ನೇ ಅಷ್ಟಕದಲ್ಲಿ ೧೪೭ ಅನುವಾಕಗಳೂ ೭೮೦ ದಶಕಗಳೂ ಇವೆ ಮೂರು ಅಷ್ಟಕಗಳಲ್ಲಿ ಒಟ್ಟು ೨೮ ಪ್ರಶ್ನೆಗಳೂ ೩೭೧ ಅನುವಾಕಗಳೂ ೧೭೪೮ ದಶಕಗಳೂ ಇವೆ ಅರುಣದಲ್ಲಿ ೧೦ ಪ್ರಶ್ನೆಗಳು ಇವೆ. ೧ನೇ ಭದ್ರಾ ಎಂಬುದರಲ್ಲಿ ೩೨ ಅನುವಾಕಗಳೂ ೧೩೦ ದಶಕಗಳೂ ಇವೆ ಸ್ವಾಧ್ಯಾಯದಲ್ಲಿ ೨೦ ಅನುವಾಕಗಳೂ ೨೪ ದಶಕಗಳೂ ಇವೆ ಚಿತ್ತಿಯೆಂಬ ಪ್ರಶ್ನೆಯಲ್ಲಿ ೨೧ ಅನುವಾಕಗಳೂ ೫೨ ದಶಕಗಳೂ ಇವೆ ಮಂತ್ರಬ್ರಾಹ್ಮಣದಲ್ಲಿ ೪೨ ಅನುವಾಕಗಳೂ ೬೨ ದಶಕಗಳೂ ಇವೆ ಶ್ರೇಷ್ಠಬ್ರಾಹ್ಮಣದಲ್ಲಿ ೧೨ ಅನುವಾಕಗಳೂ ೧೦೮ ದಶಕಗಳೂ ಇವೆ. ಪಿತೃಭೇದ ಎಂಬ ಪ್ರಶ್ನೆಗೆ ೧೨ ಅನುವಾಕಗಳೂ ೨೩ ದಶಕಗಳೂ ಇವೆ ಶಿಕ್ಷಾ ಎಂಬ ಪ್ರಶ್ನೆಗೆ ೧೨ ಅನುವಾಕಗಳೂ ೨೩ ದಶಕಗಳೂ ಇವೆ ಬ್ರಹ್ಮವಿದಾ ಎಂಬುದರಲ್ಲಿ ೯ ಅನುವಾಕಗಳೂ ೧೪ ದಶಕಗಳೂ ಇವೆ ಭೃಗುರ್ವೈ ಎಂಬುದಕ್ಕೆ ೧೧ ಅನುವಾಕಗಳೂ ೧೫ ದಶಕಗಳೂ ಇವೆ ೧೦ನೇ ನಾರಾಯಣ ಪ್ರಶ್ನಗೆ ೩೦ ಅನುವಾಕಗಳೂ ೧೦೮ ದಶಕಗಳೂ ಇವೆ ಅರುಣಕ್ಕೆ ೧೦ ಪ್ರಶ್ನೆಗಳವೆ ೨೦೭ ಅನುವಾಕಗಳೂ ೫೫೯ ದಶಕಗಳೂ ಇವೆ ಇದರಲ್ಲಿ ೮೨ ಪ್ರಶ್ನೆಗಳೂ ೧೧೬೯ ಅನುವಾಕಗಳೂ ೨೨೦೮ ದಶಕಗಳೂ ಇವೆ ಗ್ರಂಥತ್ರಯದಿಂದ ೨೩೦೭ ದಶಕಗಳವೆ ಈರೀತಿಯಿಂದ ಯಜುರ್ವೇದದ ಒಂದು ಶಾಖೆಯಲ್ಲಿ ಇಷ್ಟು ಭೇದಗಳವೆ ಎಂದು ವ್ಯಾಸರು ವೈಶಂಪಾಯನನಿಗೆ ವಿಸ್ತಾರವಾಗಿ ಹೇಳಿದರು ಎಂದು ಗುರುಗಳು ಆ ವಿಪ್ರನಿಗೆ ಹೇಳಿದರು

೩ನೇ ಶಿಷ್ಯನಾದ ಜೈಮಿನಿಯನ್ನು ಕುರಿತು ವ್ಯಾಸರು ಸಾಮವೇದವನ್ನು ವಿಸ್ತಾರವಾಗಿ ಹೇಳುವರು -ಸಾಮವೇದವು ಗಾಂಧರ್ವೋಪವೇಶವುಳ್ಳದ್ದು ಕಾಶ್ಯಪಗೋತ್ರ ರುದ್ರದೇವತೆ ಜಗತೀಛಂದಸ್ಸು, ನಿತ್ಯವೂ ಪುಷ್ಪವನ್ನೂ ಶುಚಿಯಾದ ವಸ್ತ್ರವನ್ನೂ ಧರಿಸಿರುವುದು ಇಂದ್ರಿಯದಮನವುಳ್ಳದ್ದು ಶಮೀದಂಡವನ್ನು ಧರಿಸಿರುವುದು ಚೆನ್ನದಂತೆ ಕಣ್ಣು ಶ್ವೇತವರ್ಣವೂ ಉಳ್ಳದ್ದು ಸೂರ್ಯನಂತೆ ಕಿರಣವುಳ್ಳದ್ದು ಷಡ್ರತ್ನಿದೀರ್ಘ

ಪ್ರಮಾಣವುಳ್ಳದ್ದು ಇದರ ಭೇದಗಳಿಗೆ ಮಿತಿಯಿಲ್ಲ ಸಾವಿರಾರು ಭೇದಗಳಿವೆ ಎನ್ನುವರು ಇದನ್ನು ಕಲಿಯಲು ಯಾರು ಶಕ್ತರು ? ಶ್ರೀಮನ್ನಾರಾಯಣನೇ ಇದಕ್ಕೆ ಶಕ್ತನು ಸಮಸ್ತ ವೇದಗಳನ್ನೂ ಯಾರು ತಿಳಿದಿರುವರು? ಜೈಮಿನಿಯೇ, ಸ್ವಲ್ಪ ವಿಷಯಗಳನ್ನು ಹೇಳುವೆನು ಕೇಳು:

ಈ ವೇದದಲ್ಲಿ ಆಸುರಾಯಣೀಯ, ವಾಸುರಾಯಣೀಯ, ವಾರ್ತಾಂತರೇಯ ಎಂದು ಮೂರು ಭೇದಗಳುಂಟು. ಪ್ರಾಂಜಲಿ, ಋಜ್ಞಗ್ವೈನವಿಧಾ, ಪ್ರಾಚೀನಯೋಗ್ಯಶಾಖಾ ಎಂದು ಆರು ಭೇದಗಳು ರಾಣಾಯಣೀಯವೆಂಬ ಏನೇ ಜ್ಞಾನಯೋಗದಲ್ಲಿ ಹತ್ತು ಭೇದಗಳಿವೆ, ಕೇಳುವವನಾಗು ರಾಣಾಯಣೀಯ, ಸಾಂಖ್ಯಾಯನೀ, ಶಾರ್ಯ, ಮುದ್ಗಲ, ಖಲ್ವಲಾ, ಲಾಜ್ಗಲಾ ಕೈಥುವಾ, ಮಹಾಖಲ್ವಲ, ಗೌತುಮಾ, ಜೈಮಿನಿ ಎಂದು ಹತ್ತು ಭೇದಗಳುಂಟೆಂದು ವ್ಯಾಸರು ಹೇಳಿದರು ಸಾಮವೇದವನ್ನು ಪೂರ್ಣವಾಗಿ ತಿಳಿದವರು ಈ ಭೂಮಿಯಲ್ಲಿ ಯಾರಿದ್ದಾರೆ? ಮದೋನ್ಮತ್ತನಾಗಿ ಮೂರು ವೇದಗಳನ್ನು ಕಲಿತಿರುವೆನೆಂದು ಹೇಳುವಿರಿ ಎಂದು ಗುರುಗಳು ಹೇಳಿದರು ಅಥರ್ವಣ ವೇದವು ಮಂತ್ರಶಾಸ್ತ್ರವಾಗಿದೆ ಇದು ಉಪವೇದವೆನ್ನಿಸುವುದು ಇದು ವೈತಾನಸಗೋತ್ರದ್ದು. ಇಂದ್ರನು ಅಧಿದೇವತೆಯು ಅನುಷ್ಟುಪ್ ಛಂದಸ್ಸು ತೀಕ್ಷ್ಣವಾದ ಕೃಷ್ಣವರ್ಣವುಳ್ಳದ್ದು ಕಾಮರೂಪಿಯಾಗಿಯೂ ಕ್ಷುದ್ರಕರ್ಮವುಳ್ಳದ್ದಾಗಿಯೂ ಇದೆ. ಸ್ವದಾರವೆಂಬ ಹಸರುಳ್ಳದ್ದು. ವಿಶ್ವಸೃಷ್ಟಿಸಾಧ್ಯಕರ್ಮವುಳ್ಳದ್ದು. ತಲೆಯಲ್ಲಿ ಜಲವುಳ್ಳದ್ದು ಎಂಬ ಅಥರ್ವಣವೇದ ಭೇದವನ್ನು ವ್ಯಾಸರು ಸುಮಂತನೆಂಬ ಶಿಷ್ಯನಿಗೆ ಹೇಳಿದರು ಇವರಲ್ಲಿ ಪೈಪ್ಪಲಾ, ದಾಂತ, ಪ್ರದಾಂತ, ಸ್ತೋತಾ, ಔತಾ, ಬ್ರಹ್ಮದಾಯತವಾ, ಶೌನಕೀ, ವೇದದರ್ಶ, ಚರಣವಿದ್ಯಾ ಎಂಬ ಒಂಭತ್ತು ಭೇದಗಳಾಗಿವೆ ಹೀಗೆ ಐದು ಕಲ್ಪದವರೆಗೆ ಇದರ ಭೇದಗಳನ್ನು ಹೇಳಬಹುದು ಈರೀತಿಯಾಗಿ ವ್ಯಾಸರು ನಾಲ್ಕು ಜನ ಶಿಷ್ಯರಿಗೆ ವೇದಗಳನ್ನು ಉಪದೇಶಮಾಡಿದರು ಈ ಭರತಖಂಡದಲ್ಲಿ ಪೂರ್ವದಲ್ಲಿ ಜನರು ವರ್ಣಾಶ್ರಮ ಧರ್ಮವು ಸರಿಯಾಗಿ ನಡೆಯುತ್ತಾ ಪುಣ್ಯವಂತರಾಗಿದ್ದರು ಕಲಿಯುಗದಲ್ಲಿ ಬ್ರಾಹ್ಮಣರು ಸತ್ಕರ್ಮಗಳನ್ನು ಬಿಟ್ಟರು ಈ ಕರ್ಮಲೋಪದಿಂದ ಈ ಲೋಕದಲ್ಲಿ ವೇದಗಳು

ಗುಪ್ತವಾದುವು. ಬ್ರಾಹ್ಮಣರು ಕರ್ಮಭ್ರಷ್ಟರಾದರು. ಮ್ಲೇಂಛರು ವೇದ ಬೀಜವನ್ನು ಹೇಳುವರು. ವಿಪ್ರರ ಸತ್ವವು ಹೋಯಿತು. ಮಂದಮತಿ ಗಳಾದರು. ಪೂರ್ವದಲ್ಲಿ ಬ್ರಾಹ್ಮಣರು ದೊಡ್ಡ ಮಹತ್ವವನ್ನು ಹೊಂದಿ ದೇವಸಮಾನರಾಗಿದ್ದರು. ವೇದಗಳು ನಿತ್ಯವಾಗಿದ್ದವು. ಬ್ರಾಹ್ಮಣರನ್ನು ಭೂಸುರರೆನ್ನುತ್ತಿದ್ದರು. ಪೂರ್ವದಲ್ಲಿ ರಾಜರು ಕೂಡಾ ವಿಪ್ರರನ್ನು ವಂದಿ ಸುತ್ತಿದ್ದರು. ವಿಪ್ರರು ಆಗ ದಕ್ಷಿಣೆಯನ್ನು ಸ್ವೀಕರಿಸುತ್ತಿರಲಿಲ್ಲ. ವೇದ ಬಲದಿಂದ ವಿಪ್ರರು ತ್ರಿಮೂರ್ತಿಗಳನ್ನು ವಶಪಡಿಸಿಕೊಳ್ಳುತ್ತಿದ್ದರು. ಇಂದ್ರಾದಿಗಳೂಕೂಡ ವಿಪ್ರರಲ್ಲಿ ಭಯವುಳ್ಳವರಾಗಿದ್ದರು. ವಿಪ್ರವಾಕ್ಯವು ಕಾಮಧೇನುವಿಗೂ ಕಲ್ಪವೃಕ್ಷಕ್ಕೂ ಸಮಾನವಾಗಿದ್ದವು. ವಿಪ್ರರು ಪರ್ವತವನ್ನು ತೃಣವನ್ನಾಗಿಯೂ ತೃಣವನ್ನು ಪರ್ವತವನ್ನಾಗಿಯೂ ಮಾಡುತ್ತಿದ್ದರು. ವಿಷ್ಣುವೂ ಸಹ ಬ್ರಾಹ್ಮಣರನ್ನು ತಮ್ಮ ದೇವರೆಂದು ಪೂಜಿಸುತ್ತಿದ್ದನು.

श्लोक ॥ दैवाधीनंजगत्सर्वं मंत्राधीनंतुदैवतं ।
तेमंत्राःब्राह्मणाधीना ब्राह्मणोममदेवताः ॥

ದೈವಾಧೀನಂ ಜಗತ್ಸರ್ವಂ ಮಂತ್ರಾಧೀನಂತು ದೈವತಂ ।
ತೇಮಂತ್ರಾಃ ಬ್ರಾಹ್ಮಣಾಧೀನಾಃ ಬ್ರಾಹ್ಮಣೋಮಮದೇವತಾ॥

(ಜಗತ್ತೆಲ್ಲವೂ ದೈವಾಧೀನವಾದುದು. ದೇವತೆಯು ಮಂತ್ರಾಧೀನ ವುಳ್ಳದ್ದು. ಆ ಬ್ರಾಹ್ಮಣರಿಗೆ ಮಂತ್ರಗಳು ಅಧೀನಗಳಾಗಿವೆ. ಆ ಬ್ರಾಹ್ಮ ಣರೇ ನಮ್ಮ ದೇವರು.) ಇಂಥಾ ಮಹತ್ವವು ಪೂರ್ವದ ಬ್ರಾಹ್ಮಣರಿಗೆ ಇತ್ತು. ಈಗ ವೇದಮಾರ್ಗವನ್ನು ಬಿಟ್ಟು ನೀಚರಾಗಿ ಹೀನಜಾತಿಯ ವರಿಗೆ ವೇದವನ್ನು ಹೇಳುವರು. ಇಂಥವರ ಮುಖವನ್ನು ನೋಡಬಾ ರದು. ಬ್ರಾಹ್ಮಣರ ಬಲವು ಹೋಯಿತು. ವಿಪ್ರರು ಹೀನಜಾತಿಯವ ರಿಗೆ ವೇದವಿಕ್ರಯ ಮಾಡುವರು. ವೇದವನ್ನು ಭ್ರಷ್ಟವಾಗಿ ಮಾಡು ವರು. ಈ ರೀತಿಯಾಗಿ ನಾಲ್ಕು ವೇದಗಳಿಗೆ ಶಾಖೆಗಳಿವೆ. ಇದನ್ನು ಭೂಮಿಯಲ್ಲಿ ಯಾರು ತಿಳಿಯುವರು ? ಎಲ್ಲವೂ ಗೋಪ್ಯವಾದುವು. ನಾಲ್ಕು ವೇದಗಳನ್ನು ಬಲ್ಲೆವೆಂದು ವಾದಿಸುತ್ತೀರಿ ವೇದಗಳ ಭೇದ

ಗಳನ್ನೆಲ್ಲವನ್ನೂ ತಿಳಿದಿರುವಿರಾ? ಇದರಲ್ಲಿ ಲಾಭವೇನು? ಬ್ರಾಹ್ಮಣರನ್ನು ಕ್ಷೋಭಿಸಬಾರದು. ಹೀಗೆ ಮಾಡೆಂದು ಯಾರು ಹೇಳಿದರು? ಇಲ್ಲಿಂದ ಹೊರಟುಹೋಗಿರಿ. ನಿಮ್ಮನ್ನು ನೀವೇ ಹೊಗಳಿಕೊಳ್ಳುವಿರಿ. ಜಯಪತ್ರಗಳನ್ನು ತೋರಿಸುವಿರಿ. ತ್ರಿವಿಕ್ರಮಯತಿಯನ್ನು ಕುರಿತು ಜಯಪತ್ರವನ್ನು ಕೇಳುವಿರಿ. ನಮ್ಮ ಮಾತನ್ನು ಕೇಳಿ ಇಲ್ಲಿಂದ ಹೊರಟುಹೋಗಿರಿ. ಗರ್ವದಿಂದ ಭ್ರಮಿಸಿ ಪ್ರಾಣವನ್ನು ಕೊಡಬೇಡಿರಿ ಎಂದು ಶ್ರೀಗುರುವು ವಿಪ್ರರಿಗೆ ಬುದ್ಧಿಯನ್ನೂ ಹಿತವನ್ನೂ ಹೇಳಿದರು.

ಆದರೂ ಆ ವಿಪ್ರರಿಬ್ಬರೂ ವಾದವನ್ನು ಕೊಡಿರೆಂದು ಹೇಳುತ್ತಿದ್ದರು. ಅವರಲ್ಲೊಬ್ಬ ವಿಪ್ರನು ಸ್ವಾಮಿ! ನಾವು ವಾದಿಸದೇಹೋದರೆ ಜನರು ರಾಜನ ಹತ್ತಿರ ಹೋಗಿ ನಾವು ಸೋತೆವೆಂದು ಹೇಳುವರು. ಆಗ ನಮ್ಮ ಗೌರವವು ಉಳಿಯುವುದೆಲ್ಲಿ? ಎಂದರು. ನಾಮಧಾರಕನೇ ಕೇಳು. ಈ ರೀತಿಯಾಗಿ ವಿಪ್ರರು ಮತ್ತಹತ್ತಿರಾಗಿ ಗುರುವಿನ ಹಿತಬೋಧನೆಯನ್ನು ಕೇಳದೇ ಇದ್ದುದರಿಂದ ಇವರಿಗೆ ಮೃತ್ಯುವು ಹತ್ತಿರ ಬಂದಿತು ಎಂದರು. ಗಂಗಾಧರನಂದನನು ಶ್ರೋತೃಗಳಿರಾ, ಈವೇದವಿವರವನ್ನುಕೇಳಲು ಸಮಾಧಾನವಾಗುವುದು ಎಂದು ವೇದಚತುರ್ಥಾಕದ ವಿವರವನ್ನು ಹೇಳುತ್ತಿದ್ದನೆಂಬಲ್ಲಿಗೆ ಇಪ್ಪತ್ತಾರನೇ ಅಧ್ಯಾಯವು ಮುಗಿದುದು.

---

## ೨೭ ನೆಯ ಅಧ್ಯಾಯ.

---

ಶ್ರೀ ಗಣೇಶಾಯನಮಃ॥ ಶ್ರೋತೃಗಳಿರಾ, ಏಕಚಿತ್ತದಿಂದ ಕೇಳಿರಿ. ನಾಮಧಾರಕನನ್ನು ಕುರಿತು ಸಿದ್ಧರು ಮುಂದಿನ ಕಥೆಯನ್ನು ಹೇಳುವರು. ಶಿಷ್ಯನೇ ಕೇಳು.—ಗುರುಮಹಿಮೆಯು ಅನುಪಮವಾದುದು. ಎಷ್ಟು ಹೇಳಿದರೂ ಕೇಳದೆ ವಾದವನ್ನಾಗಲೀ, ಜಯಪತ್ರವನ್ನಾಗಲೀ ಕೊಡಿಸಿರಿಎನ್ನುತ್ತಾ ತಾಮಸಗುಣವುಳ್ಳವರಾಗಿ ಆ ವಿಪ್ರರು ಗುರುಗಳನ್ನು ಕೇಳಿದರು. ಮನಸ್ಸು ಹೇಗಿರುವುದೋ ಹಾಗೆಯೇ ಸಿದ್ಧಿಯಾಗುವುದು. ಹಾವಿನ ಬಿಲಕ್ಕೆ ಇಲಿಯು ಹೋದಂತೆಯೂ, ದೀಪಕ್ಕೆ ಪತಂಗದಹುಳುವು ಬಿದ್ದಂತೆಯೂ ಈ ವಿಪ್ರರು ಆತ್ಮಘಾತಮಾಡಿಕೊಳ್ಳುವನರಾದರು. ಇವರು

ಮಂದಬುದ್ಧಿಯಿಂದ ಗುರುಮಹಿಮೆಯನ್ನರಿಯದೇ ದಿವಾಂಧರಾಗಿ ಪ್ರಾಣ ಬಿಡುವರು

ಇಷ್ಟರಲ್ಲೇ ಶ್ರೀಗುರುವು ಶಿಷ್ಯರನ್ನು ಕುರಿತು ಅಲ್ಲಿ ದಾರಿಯಲ್ಲಿ ಹೋಗುವವನು ಯಾರು ? ಆತನನ್ನು ಕರೆದುಕೊಂಡು ಬನ್ನಿರಿ ಎಂದು ಆಜ್ಞಾಪಿಸಿದರು

ಗುರುವಚನವನ್ನು ಕೇಳಿ ಶಿಷ್ಯರು ಅವನನ್ನು ಕರೆತಂದರು

ಆ ಪಥಿಕನು ಗುರುಗಳನ್ನು ಕುರಿತು ಸ್ವಾಮಿ ! ನಾನು ಜಾತಿಹೀನನಾದ ಮಾತಂಗನೆಂಬುವನು ನನ್ನ ವಾಸಸ್ಥಳವು ಊರ ಹೊರಗಿದೆ ಕೃಪಾಳುಗಳಾದ ನೀವು ನನ್ನನ್ನು ಉದ್ಧರಿಸಿರಿಯೆಂದು ಸಾಷ್ಟಾಂಗ ನಮಸ್ಕಾರ ಮಾಡಿದನು

ಆಗ ದಯಾಶಾಲಿಗಳಾದ ಗುರುಗಳು ಅಮೃತಮಯವಾದ ದೃಷ್ಟಿಯಿಂದ ನೋಡಿದರು ಸ್ಪರ್ಶಮಣಿಯು ತಗಲಲು ಲೋಹವು ಸುವರ್ಣವಾದಂತಾಯಿತು ಶ್ರೀಗುರುವು ಪತಿತನಲ್ಲಿ ದಯೆಯನ್ನು ತೋರಿಸಿ, ಶಿಷ್ಯರಿಂದ ತಮ್ಮ ಯೋಗದಂಡದಿಂದ ಏಳು ಗೆರೆಗಳನ್ನು ಬರೆಯಿಸಿ, ಆ ಪತಿತನನ್ನು ಕುರಿತು ಎಲೈ ನೀನು ಒಂದೊಂದು ಗೆರೆಯನ್ನು ದಾಟು ಎಂದರು

ಆಗ ಅವನು ಒಂದು ಗೆರೆಯನ್ನು ದಾಟಲು ಅವನಿಗೆ ಜ್ಞಾನವುಂಟಾಯಿತು. ಆಗ ಗುರುವು ಅವನನ್ನು ಕುರಿತು ಎಲೈ, ನೀನು ಯಾವ ಕುಲದವನು ? ಎನ್ನಲು, ಆತನು ಸ್ವಾಮಿ, ನಾನು ಕಿರಾತಕುಲದಲ್ಲಿ ಹುಟ್ಟಿದೆನು. ನನ್ನ ಹೆಸರು ವನರಾಖ ಎಂದನು ೨ನೇ ಗೆರೆಯನ್ನು ದಾಟಲು ಮತ್ತೂ ಜ್ಞಾನ ಬಂದಿತು ಆಗ ಅನೇಕ ವಾರ್ತೆಗಳನ್ನು ಹೇಳಿದನು. ಜನರೆಲ್ಲರೂ ವಿಸ್ಮಿತರಾದರು ೩ನೇ ಗೆರೆಯನ್ನು ದಾಟಿದನು, ಆಗ ಅವನಿಗೆ ಜಾತಿಸ್ಮರಣೆಯುಂಟಾಯಿತು. ಸ್ವಾಮಿ, ನಾನು ಗಂಗಾಪುತ್ರನು, ಗಂಗೆಯ ದಡದಲ್ಲಿರುವೆನು ಎಂದನು ೪ನೇ ಗೆರೆಯನ್ನು ದಾಟಿದನು. ಆಗ ನಾನು ಶೂದ್ರಜಾತಿಯುವನು ಎಂದನು. ೫ನೇ ಗೆರೆಯನ್ನು ದಾಟಿದನು. ಮತ್ತೂ ಜ್ಞಾನ ಉಂಟಾಯಿತು. ಆಗ ತಾನು ವೈಶ್ಯಜಾತಿಯುವನು ಸೋಮದತ್ತನೆಂಬ ಹೆಸರು ಎಂದನು ೬ನೇ ಗೆರೆಯನ್ನು ದಾಟಿದನು. ಆಗ

ಆತನು ಕ್ಷತ್ರಿಯನು ಗೋದಾವರಿ ಹೆಸರು ಎಂದನು. ಇನೇ ಗೆರೆಯನ್ನು ದಾಟಿದನು ಆಗ ಆತನು ತಾನು ವೇದ ಶಾಸ್ತ್ರ ವ್ಯಾಕರಣಾಧ್ಯಾಪಕನಾದ ಬ್ರಾಹ್ಮಣನು ಎಂದನು

ಆಗ ಗುರುವು ಎಲೈ, ನೀನು ಸಕಲವೇದಶಾಸ್ತ್ರಗಳನ್ನೂ ಅಭ್ಯಾಸ ಮಾಡಿದೆಯಷ್ಟೆ ? ಇಲ್ಲಿರುವ ಈ ಬ್ರಾಹ್ಮಣರಿಬ್ಬರೂ ವಾದಕ್ಕೆ ಬಂದಿರುವರು. ಇವರೊಡನೆ ವಾದಿಸು ಎಂದು ವಿಭೂತಿಯನ್ನು ಮಂತ್ರಿಸಿ ಅವನ ಸರ್ವಾಂಗಕ್ಕೂ ಲೇಪಿಸಲು ಆತನಿಗೆ ಜ್ಞಾನೋದಯವಾಯಿತು ಮಾನಸ ಸರಸ್ಸಿಗೆ ಹೋದ ಕಾಗೆಯು ಹಂಸವಾದಂತೆ ಈತನಿಗೆ ಗುರು ಹಸ್ತವು ಸ್ಪರ್ಶವಾಗಲು ಜ್ಞಾನರಾಶಿಯೇ ಉಂಟಾಯಿತು ನೃಸಿಂಹಸರಸ್ವತಿಗಳನ್ನು ಮನುಷ್ಯರೆಂದು ಹೇಳಿದವರು ಅಧೋಗತಿಯನ್ನೈದುವರು. ಗುರುಗಳು ಆಪತಿತನನ್ನು ಕುರಿತು ಆ ವಿಪ್ರರೊಡನೆ ವಾದಿಸೆನ್ನಲು ಆ ವಿಪ್ರರು ಭಯಚಕಿತರಾದರು ನಾಲಿಗೆಯು ಕಿತ್ತುಹೋಯಿತು. ಕಿವುಡರಾದರು. ಆಗಲೇ ಹೃದಯಶೂಲೆಯುಂಟಾಯಿತು. ಆಗ ಅವರು ತರತರನೆ ನಡುಗಿ ಗುರುಚರಣಂಗಳಲ್ಲಿ ಬಿದ್ದು ಜಗಜ್ಜ್ಯೋತಿಸ್ವರೂಪರೇ, ನಮಗೆ ಗತಿಯೇನು ? ಗುರುದ್ರೋಹಿಯಾದೆವು ಈ ಬ್ರಾಹ್ಮಣನು ತಿರಸ್ಕರಿಸಿದನು ನೀವು ಸಾಕ್ಷಾದೀಶ್ವರರೇ ನಿಜವು ಮಾಯಾ ಮೋಹಿತರಾಗಿ ನಿಮ್ಮ ಸ್ವರೂಪವನ್ನು ತಿಳಿಯಲಿಲ್ಲ. ನಮ್ಮನ್ನು ಮನ್ನಿಸಿರಿ. ಸರ್ವಭೂತಗಳಲ್ಲಿಯೂ ದಯಾಮಯರಾಗಿರುವಿರಿ ನಮ್ಮ ದೋಷಗಳನ್ನು ಮನಸ್ಸಿನಲ್ಲಿಡಬಾರದು ನಮಗೆ ಸದ್ಗತಿಯನ್ನು ದಯಪಾಲಿಸಿರಿ ಎಂದು ವಂದಿಸಿದರು. ನೀವು ಲೀಲೆಯಿಂದ ಪರ್ವತವನ್ನು ತೃಣವಾಗಿ ಮಾಡುವಿರಿ. ಸಿಟ್ಟಿನಿಂದ ಬೆಟ್ಟವನ್ನು ಸುಟ್ಟುಬಿಡಬಲ್ಲಿರಿ. ತ್ರಿಮೂರ್ತಿಸ್ವರೂಪರೇ ! ಜಗದ್ಗುರುವೇ! ನಿಮ್ಮ ಮಹಿಮೆಯನ್ನು ವರ್ಣಿಸಲು ನಮಗೆ ಬುದ್ಧಿಯು ಸಾಲದು. ದೀನ ರಕ್ಷಕರೇ ! ಶರಣಾಗತ ವರಪ್ರದರೇ ! ಎಂದು ವಂದಿಸಿದರು.

ಆಗ ಗುರುವು ವಿಪ್ರರಿರಾ, ನೀವು ತ್ರಿವಿಕ್ರಮ ಭಾರತಿಯನ್ನೂ ಅನೇಕ ವಿಪ್ರರನ್ನೂ ನಿಂದಿಸಿದಿರಿ. ಬ್ರಹ್ಮರಾಕ್ಷಸರಾಗಿ ನಿಮ್ಮ ಕರ್ಮ ಫಲವನ್ನನುಭವಿಸಿರಿ. ಅವರವರ ಪಾಪಕರ್ಮಫಲವನ್ನು ಅವರವರು ಅನುಭವಿಸಲೇಬೇಕು ಎಂದಪ್ಪಣೆ ಮಾಡಿದರು

ಈ ವಚನವನ್ನು ಕೇಳಿ ವಿಪ್ರರಿಬ್ಬರು ಗುರುಚರಣಂಗಳಿಗೆ ವಂದಿಸಿ ಸ್ವಾಮಿ, ನಮಗೆಂದಿಗೆ ಗತಿಯಾದೀತು ? ಎಂದು ಕೇಳಿದರು. ಆಗ ಶ್ರೀಗುರುವು ವಿಪ್ರರೇ, ನೀವಿಬ್ಬರೂ ಬ್ರಹ್ಮರಾಕ್ಷಸರಾಗಿ ಹನ್ನೆರಡು ವರ್ಷಗಳು ವಾಸಮಾಡಿರಿ ಅನುತಪ್ತರಾಗಿ ಶಾಂತರಾಗಿರಿ ಬಳಿಕ ನಿಮ್ಮ ಪಾಪವು ಹೋಗುವುದು ಮುಂದೆ ಬ್ರಾಹ್ಮಣಜನ್ಮವು ಬರುವುದು. ಮುಂದೆ ಗತಿಯಾದೀತು ಈಗ ಗಂಗೆಗೆ ಹೋಗಿ ಅಲ್ಲಿ ವಾಸವಾಗಿರಿ ಎಂದು ನಿರೂಪಿಸಲು ಅವರಿಬ್ಬರೂ ಬ್ರಹ್ಮರಾಕ್ಷಸರಾಗಿ ಹೊರಟು ಹೋದರು ಇವರು ಊರಹೊರಗೆ ಹೋಗಿ ಹೃದಯಶೂಲೆಯಿಂದ ಸತ್ತುಹೋದರು. ತಾವು ಮಾಡಿದ ಪಾಪಕರ್ಮಕ್ಕೆ ಬೇರೆ ಪ್ರಯತ್ನವೇನಿದೆ ? ತಾಮಸಿಗಳಾದ ಆ ವಿಪ್ರರು ತಾವೇ ಆತ್ಮಘಾತಮಾಡಿಕೊಂಡರು. ಗುರುವಚನವು ಅನ್ಯಥಾ ಆಗದು. ಆ ವಿಪ್ರರು ಬ್ರಹ್ಮರಾಕ್ಷಸರಾಗಿ ಹನ್ನೆರಡು ವರ್ಷಗಳಿದ್ದು ಬಳಿಕ ಗತಿ ಹೊಂದಿದರು ಗುರ್ವನುಗ್ರಹದಿಂದ ಪತಿತನು ಮಹಾಜ್ಞಾನಿಯಾಗಿ ಏಳು ಜನ್ಮಗಳ ಸ್ಮರಣೆಯುಳ್ಳವನಾದನು. ಈತನು ಪೂರ್ವಾಪರ ವಿಚಾರಗಳನ್ನು ಹೇಳುತ್ತಾ, ಭಕ್ತಿಯಿಂದ ಗುರುಗಳನ್ನು ವಂದಿಸಿ, ಮಹಾಸ್ವಾಮಿ ' ಅಜ್ಞಾನವಾದ ಮಾಯೆಯೆಂಬ ಕತ್ತಲೆಗೆ ದೀಪದಂತಿರುವಿರಿ. ಪೂರ್ವದಲ್ಲಿ ಬ್ರಾಹ್ಮಣನಾದ ನಾನು ಯಾವಾಗ ಜಾತಿಹೀನನಾದೆನು ? ತ್ರಿಕಾಲಜ್ಞರಾದ ನೀವು ದಯೆಯಿಟ್ಟು ನಿರೂಪಿಸಿರಿ. ನಾನು ಜನ್ಮಾಂತರದಲ್ಲಿ ಮಹಾ ಪಾಪಗಳನ್ನು ಮಾಡಿರುವೆನು ಎಂದು ವಿಜ್ಞಾಪಿಸಿದನು.

ಬಳಿಕ ಗುರುಗಳು ಆತನನ್ನು ಕುರಿತು ಹೇಳತೊಡಗಿದರು ಎಂದು ಸಿದ್ಧರು ನಾಮಧಾರಕನಿಗೆ ಹೇಳಿದರು ಎಂದು ಗಂಗಾಧರನಂದನನು ಹೇಳುತ್ತಿದ್ದನು ಮುಂದಿನ ಕಥೆಯನ್ನು ಕೇಳಲು ಪತಿತನು ಬ್ರಹ್ಮಜ್ಞಾನಿಯಾಗುವನು. ಅನಾಥನು ಚತುರ್ವಿಧಪುರುಷಾರ್ಥಗಳನ್ನು ಹೊಂದುವನು ಎಂಬಲ್ಲಿಗೆ ಮದೋನ್ಮತ್ತವಿಪ್ರಶಾಪಕಥನವೆಂಬ ೨೭ ನೇ ಅಧ್ಯಾಯವು ಮುಗಿದುದು.

|| ಶ್ರೀ ಗುರವೇನಮಃ ||

# ೨೮ನೆಯ ಅಧ್ಯಾಯ.

ಶ್ರೀಗಣೇಶಾಯನಮಃ॥ಸಿದ್ಧರು ನಾಮಧಾರಕನನ್ನು ಕುರಿತು ಹೇಳು ವರು. ಶಿಷ್ಯನೇ ಕೇಳು:—

ಶ್ರೀಗುರುವು ಆ ಪತಿತನನ್ನು ಕುರಿತು ಎಲೈ, ನಿನ್ನ ಪೂರ್ವಜನ್ಮದ ಕಥೆಯನ್ನುಕೇಳು —ಪಾಪ ಪುಣ್ಯಗಳ ಫಲಗಳನ್ನುಎಲ್ಲರೂ ಅನುಭವಿಸು ವರೆಂದು ಕರ್ಮವಿಪಾಕದಲ್ಲಿ ಹೇಳದೆ ಕರ್ಮಾನುಸಾರವಾಗಿ ಬ್ರಾಹ್ಮಣ, ಚಂಡಾಲಾದಿ ವರ್ಣಗಳು ಉಂಟಾಗುವುವು ಬ್ರಾಹ್ಮಣ ಸ್ತ್ರೀಯಲ್ಲಿ ಶೂದ್ರನಿಂದ ಹುಟ್ಟಿದವನೇ ಚಂಡಾಲನಾಗುವನು. ಈ ಚಂಡಾಲರಲ್ಲಿ ಹದನಾರು ಜಾತಿಗಳಿವೆ ಬ್ರಾಹ್ಮಣಾದಿವರ್ಣಗಳಿಗೆ ನಾನಾ ದೋಷಾ ಚರಣೆಯಿಂದ ಹೀನ ಜನ್ಮವು ಬರುವುದು ಅನಾಚಾರದಿಂದ ವಿಪ್ರರು ಜಾತಿಹೀನರಾಗುವರು ಗುರುಗಳನ್ನೂ ತಾಯಿ ತಂದೆಗಳನ್ನೂ ಕುಲ ಸ್ತ್ರೀಯನ್ನೂ ಬಿಟ್ಟವನಿಗೂ, ಕುಲದೈವವನ್ನು ಬಿಟ್ಟು ಅನ್ಯದೇವತೆ ಯನ್ನು ಅರ್ಚಿಸುವವನಿಗೂ, ಸದಾ ಸುಳ್ಳು ಹೇಳುವವನಿಗೂ, ಜೀವ ಹಿಂಸೆ ಮಾಡುವವನಿಗೂ, ಕನ್ಯಾವಿಕ್ರಯ ಮಾಡುವವನಿಗೂ ಚಂಡಾಲ ಜನ್ಮ ಉಂಟಾಗುವುದು ದುಷ್ಟನಾಗಿ ಪ್ರಮಾಣ ಮಾಡುವವನಿಗೂ, ಶೂದ್ರನ ಕೈಯಿಂದ ಊಟಮಾಡಿದವನಿಗೂ, ಅಶ್ವವಿಕ್ರಯ ಮಾಡಿದವ ನಿಗೂ, ಶೂದ್ರಸಂಪರ್ಕ ಮಾಡುವವನಿಗೂ, ಶೂದ್ರಸ್ತ್ರೀಸಂಗಮಾಡುವ ವನಿಗೂ, ದಾಸಿಯರಿಂದ ತೊಳೆಯಿಸಲ್ಪಟ್ಟ ಪಾತ್ರೆಗಳಲ್ಲಿ ದೇವಪಿತೃಕರ್ಮ ಮಾಡುವವನಿಗೂ, ಕಾಡಿಗೆ ಬೆಂಕಿಹಾಕಿದವನಿಗೂ, ಹಸುವನ್ನೂ ಅದರ ಕರುವನ್ನೂ ಬೇರೆ ಇಟ್ಟವನಿಗೂ, ತನ್ನ ತಾಯಿಯನ್ನು ಬಿಟ್ಟವನಿಗೂ, ಮಕ್ಕಳನ್ನು ಹೊಡೆಯುವವನಿಗೂ, ಎತ್ತಿನಮೇಲೆ ಕುಳಿತ ಬ್ರಾಹ್ಮಣ ನಿಗೂ,ಶೂದ್ರಾನ್ನತಿಂದವನಿಗೂ ತೀರ್ಥಯಾತ್ರೆಗೆ ಹೋಗಿ ಅಲ್ಲಿ ಶ್ರಾದ್ಧಾದಿ ಗಳನ್ನು ಮಾಡದೆ ಪರಾನ್ನತಿಂದವನಿಗೂ, ಷಟ್ಕರ್ಮರಹಿತನಾಗಿ ಕಪಿಲಾ ಧೇನುವಿನ ಹಾಲನ್ನು ಅಭಿಷೇಕ ಮಾಡದೇ ಹಾಲು ಕುಡಿಯುವವನಿಗೂ ಚಂಡಾಲ ಜನ್ಮ ಉಂಟಾಗವುದು. ತುಳಸಿಯ ಎಲೆಗಳಿಂದರ್ಚಿಸುವ ಶೂದ್ರನಿಗೂ, ತಾಯಿತಂದೆಗಳನ್ನುಸೇವಿಸಿ ರಕ್ಷಿಸದೇ ಇದ್ದವನಿಗೂ ಬಾವಿ

ಜನ್ಮಗಳಲ್ಲಿಯೂ ಕ್ರಿಮಿಜನ್ಮವುಂಟಾದೀತು ಮೊದಲಿನ ಹೆಂಡತಿಯು ಇರಲು ಅವಳನ್ನು ಬಿಟ್ಟು, ಬೇರೆ ಸ್ತ್ರೀಯನ್ನು ಹೊಂದಿದವನಿಗೂ ಪತಿತತ್ವ ಉಂಟಾಗುವುದು. ಬಳಲಿದ ಅತಿಥಿಯು ಬರಲು ಅವನಿಂದ ವೇದವನ್ನು ಹೇಳಿಸಿ ಅನ್ನಹಾಕಿದವನಿಗೂ, ಯೋಗ್ಯ ಬ್ರಾಹ್ಮಣರನ್ನು ನಿಂದಿಸಿ ಬೇರೆ ಜಾತಿಯವನನ್ನು ಪೂಜಿಸಿ ವೃತ್ತಿಯನ್ನು ಅಪಹರಿಸಿದವನಿಗೂ, ಕೆರೆ, ಭಾವಿಗಳನ್ನು ಒಡೆಯಿಸಿದವನಿಗೂ, ಶಿವಾಲಯದ ಪೂಜೆಯನ್ನು ಬಿಟ್ಟವನಿಗೂ, ಬ್ರಾಹ್ಮಣರ ಮನೆ ಮುರಿದವನಿಗೂ ಸ್ವಾಮಿ ಸ್ತ್ರೀಯಲ್ಲಿಯೂ ಗುರು ಸ್ತ್ರೀಯಲ್ಲಿಯೂ ಶತ್ರು ಮಿತ್ರರು ವಿಶ್ವಾಸಿಸಿದ ಸ್ತ್ರೀಯಲ್ಲಿಯೂ ವ್ಯಭಿಚರಿಸಿದವನಿಗೂ ಚಂಡಾಲ ಜನ್ಮ ಉಂಟಾಗುವುದು. ಇಬ್ಬರು ಸ್ತ್ರೀಯರಿರಲು ಅವರಲ್ಲಿ ಪಕ್ಷಪಾತ ಮಾಡಿದವನಿಗೂ, ಅಸ್ತಮಯಕಾಲದಲ್ಲಿ ಅತಿಥಿಯು ಬರಲು ಅವನಿಗೆ ಅನ್ನಹಾಕದವನಿಗೂ ಚಂಡಾಲ ಜನ್ಮವಾಗುವುದು ತ್ರಿಸಂಧ್ಯೆಗಳಲ್ಲಿ ಅವಿವೇಕದಿಂದ ಪೂಜಿಸಿದವನಿಗೂ, ರಾಜನು ಕೊಟ್ಟ ಭೂದಾನವನ್ನು ಅಪಹರಿಸಿದವನಿಗೂ, ಸಂಧ್ಯಾಕಾಲದಲ್ಲಿ ಮಲಗಿದವನಿಗೂ ಚಂಡಾಲ ಜನ್ಮವು ಬರುವುದು. ವೈಶ್ವದೇವಕಾಲದಲ್ಲಿ ಅತಿಥಿಯು ಬರಲು ಅವನಿಗೆ ಅನ್ನವನ್ನುಹಾಕದೇ ಕೆಟ್ಟಮಾತನ್ನು ಹೇಳುವವನಿಗೆ ಕೋಳಿಯ ಜನ್ಮ ಬರುವುದು ಗಂಗಾತೀರ್ಥವನ್ನು ನಿಂದಿಸಿದವನಿಗೂ, ಏಕಾದಶಿಯ ದಿನ ಊಟ ಮಾಡಿದವನಿಗೂ, ಸ್ವಾಮಿಯನ್ನು ಯುದ್ಧಕ್ಕೆ ಕಳುಹಿಸಿದವನಿಗೂ, ಪರ್ವಕಾಲದಲ್ಲಿ ಸ್ತ್ರೀಸಂಗ ಮಾಡಿದವನಿಗೂ, ಶೂದ್ರನಿಗೆ ವೇದವನ್ನು ಕಲಿಸಿದವನಿಗೂ ಮೃತತಿಥಿಯಲ್ಲಿ ಶ್ರಾದ್ಧಮಾಡದವನಿಗೂ ಪಾಲು ಹಂಚುವಾಗ ಭೇದಮಾಡಿದವನಿಗೂ, ಗ್ರೀಷ್ಮಕಾಲದಲ್ಲಿಟ್ಟ ಅರವಟ್ಟಿಗೆಗೆ ವಿಘ್ನಮಾಡಿದವನಿಗೂ, ನಾಡಿಯ ಜ್ಞಾನವಿಲ್ಲದೇ ವೈದ್ಯಮಾಡುವವನಿಗೂ ಮಹಾಪಾತಕಿಯಾದ ಚಂಡಾಲಜನ್ಮ ಬರುವುದು ವೇದಮಾರ್ಗವನ್ನು ಬಿಟ್ಟು ಜಾರಣ, ಮಾರಣ, ಮೋಹನ ಮಂತ್ರಗಳನ್ನು ದುಷ್ಟಬುದ್ಧಿಯಿಂದ ಜಪಿಸಿದವನಿಗೂ ಶ್ರೀಗುರುವನ್ನು ನರರೆಂದವರಿಗೂ, ಹರಿಹರರಂ ನಿಂದಿಸಿ ಅನ್ಯದೇವತೆಯನ್ನು ಪೂಜಿಸಿದವನಿಗೂ ಚಂಡಾಲ ಜನ್ಮವು ಬರುವುದು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು, ತಮ್ಮ, ತಮ್ಮ ಕರ್ಮಗಳನ್ನು ಬಿಟ್ಟು ಬೇರೆಯಾದ ಕರ್ಮಗಳನ್ನು ಮಾಡುವವನಿಗೂ ಚಂಡಾಲಜನ್ಮ ಬರುವುದು. ಶೂದ್ರನಿಗೆ ಮಂತ್ರವನ್ನು ಕಲಿಸಿದವನಿಗೆ ನಾಯಿಯ ಚರ್ಮದಲ್ಲಿ

ನೀರನ್ನೂ ಹಾಲನ್ನೂ ಹಾಕಿದಂತೆ ಸರ್ವಪಾತಕಗಳೂ ಉಂಟಾಗುವುವು. ವಿಧವಾಸಂಗ ಮಾಡಿದವನಿಗೂ, ಅತಿಥಿಗೆ ಬೈಯುತ್ತಾ ಅನ್ನಹಾಕಿದವನಿಗೂ, ಶ್ರಾದ್ಧದಿನದಲ್ಲಿ ಪಿಂಡಹಾಕದವನಿಗೂ, ತಾಯಿ ತಂದೆ ಗುರುಗಳನ್ನು ದ್ವೇಷಿಸಿದವನಿಗೂ, ಗುರುನಿಂದಕನಿಗೂ [illegible] ವು ಬರುವುದು ಬ್ರಾಹ್ಮಣರಲ್ಲಿ ದ್ವೇಷಿಸಿ ಬಹುಕಾಲ ವೇದಗಲ್ಲಿ ವಾದಿಸಿದವನಿಗೆ ಬ್ರಹ್ಮರಾಕ್ಷಸತ್ವ ಬರುವುದು. ತಾನು ಒಂದು ದೇವರನು ಪೂಜಿಸುತ್ತಾ ಬೇರೆ ದೇವರನ್ನು ನಿಂದಿಸಿದವಗೂ ಅಪಸ್ಮಾರಯಾದ ಬಹತನವು ಬರುವುದು ತಾಯಿ ತಂದೆಗಳನ್ನು ಬಿಟ್ಟು ತಾನು ಹೆಂಡತಿಯೊಡನೆ ಬೇರೆ ಸಂಸಾರ ಮಾಡಿದರೆ ಅಡ್ಡಾದಿಡ್ಡಿಯಾಗಿ ಹುಟ್ಟಿ ರೋಗಿಯಾಗುವನು ಸದಾ ವೇದಗಳನ್ನು ನಿಂದಿಸುತ್ತಾ ವಿಪ್ರರನ್ನು ನಿಂದಿಸಿ ಕರ್ಮಭ್ರಷ್ಟನಾದರೆ ಮೂತ್ರಕೃಚ್ಛ್ರ ರೋಗವುಳ್ಳವನಾಗುವನು ಜನರ ಮತ್ಸರಕೃತ್ಯವನ್ನು ಧ್ಯಾನಿಸುತ್ತಾ ಇರುವವನು ಹೃದಯ ರೋಗಿಯಾಗಿ ಅತಿಯಾಗಿ ಕಷ್ಟಪಡುತ್ತಾನೆ ಗರ್ಭಪಾತ ಮಾಡಿದ ಸ್ತ್ರೀಯು ಬಂಜೆಯಾದಾಳು ಅಥವಾ ಮಕ್ಕಳಾದರೂ ಅವು ಬೇಗ ಸಾಯುತ್ತವೆ ಧರ್ಮ ಶಾಸ್ತ್ರ ಪುರಾಣಾದಿಗಳನ್ನು ಕೇಳಿ ಅದರಂತೆ ನಡೆಯದಿರಲು ಕಿವುಡನಾಗುವನು ಪತಿತನೊಡನೆ ಸ್ನೇಹ ಮಾಡಿದರೆ ಕತ್ತೆಯಾಗುವನು ಪತಿತನೊಡನೆ ವಿಷಯವನ್ನು ತೆಗೆದುಕೊಂಡರೆ ಮೃಗಜನ್ಮವು ಬರುವುದು ಸ್ತ್ರೀಹತ್ಯೆಗೈದರೆ ಕ್ಷಯರೋಗಿಯಾಗುವನು ಸುರಾಪಾನ ಮಾಡಿದರೆ ಕ[illegible]ಲ್ಲಿಯಾಗುವನು ಅಶ್ವವಧೆ, ಗೋವಧೆ ಮಾಡಿದರೆ ಜ್ವರವುಳ್ಳವನಾಗುವನು ವಿಶ್ವಾಸಘಾತ ಮಾಡಿದವರಿಗೆ ಊಟ ಮಾಡಿದ ಅನ್ನವು ವಾಂತಿಯಾಗಿ ಅನ್ನವೈರಿಯಾಗುವನು ಒಬ್ಬ ಸೇವಕನಿಗೆ ಆಸೆ ಹೇಳಿ ಮತ್ತೊಬ್ಬನನ್ನು ಇಟ್ಟುಕೊಂಡರೆ ಕಾರಾಗೃಹ ಶಿಕ್ಷೆಯಾಗುವುದು ಸರ್ಪವನ್ನು ಕೊಂದರೆ ಸರ್ಪ ಜನ್ಮ ಬರುವುದು ಒಬ್ಬ ಸ್ತ್ರೀಯನ್ನು ಅಪಹರಿಸಿಕೊಂಡು ಹೋದರೆ ಬಹು ಕಷ್ಟಪಟ್ಟು ನರಕಕ್ಕೆ ಹೋಗುವನು ಹಸುವನ್ನು ಕದ್ದರೆ ಪ್ರಮೇಹ ರೋಗಿಯಾಗುವನು ಪುಸ್ತಕವನ್ನು ಕದ್ದರೆ ಕುರುಡನಾಗುವನು ವಸ್ತ್ರವನ್ನು ಕದ್ದರೆ ತನ್ನ ಸ್ತ್ರೀಯು ರೋಗಿಯಾಗುವಳು ಬೆಂತೆಕಾಯಿ ಕದ್ದರೆ ಗಂಡಮಾಲೆ ಉಂಟಾಗುವುದು ಪರದ್ರವ್ಯಾಪಹಾರ ಮಾಡಿದರೂ, ಪರರ

ಕೊಟ್ಟುದನ್ನಪಹರಿಸಿದರೂ, ಪರರನ್ನುದ್ವೇಷಿಸಿದರೂ ಅಪುತ್ರವಂತನಾಗುವನು. ಅನ್ನವನ್ನು ಕದ್ದರೆ ಗುಲ್ಮರೋಗಿಯಾಗುವನು. ಧಾನ್ಯವನ್ನು ಕದ್ದರೆ ದೇಹವು ಕೆಂಪಾಗಿ ದುರ್ಗಂಧವಾಗುವುದು. ಎಣ್ಣೆಯನ್ನುಕದ್ದರೆ ದುರ್ಗಂಧ ಶರೀರಿಯಾಗುವನು. ಪರಸ್ತ್ರೀಯನ್ನೂ ಬ್ರಹ್ಮಸ್ವವನ್ನೂ ಅಪಹರಿಸಿದವನು ಬ್ರಹ್ಮರಾಕ್ಷಸನಾಗುವನು. ಮುತ್ತು ಮಾಣಿಕ ರತ್ನಗಳನ್ನುಕದ್ದರೆ ಹೀನಜಾತಿಯಲ್ಲಿ ಹುಟ್ಟುವನು. ಎಲೆಯನ್ನೂ ಕಾಯಿಪಲ್ಯಗಳನ್ನೂ ಹಣ್ಣುಗಳನ್ನೂ ಕದ್ದರೆ ಮೈಯಲ್ಲಿ ಸದಾ ಕಜ್ಜಿಯುಳ್ಳವನಾಗಿ ಉಣ್ಣೆಯೂ ಹೇನೂ ಉಳ್ಳವನಾಗುವನು. ಕಂಚು, ಲೋಹ, ಹತ್ತಿ, ಉಪ್ಪುಗಳನ್ನು ಕದ್ದರೆ ಬಿಳೀ ಕುಷ್ಟರೋಗಿಯಾಗುವನು. ದೇವದ್ರವ್ಯಾಪಹಾರಕನಿಗೂ ದೇವಕಾರ್ಯ ನಾಶಮಾಡಿದವನಿಗೂ ಪಾಂಡುರೋಗ ಉಂಟಾದೀತು! ಪರರ ನಿಧಿಯನ್ನು ಕದ್ದರೆ ಬಂಟೆಯಾಗುವನು. ಹಣ್ಣುಗಳನ್ನು ಕದ್ದರೆ ಕಪಿಯಾಗುವನು. ನೀರನ್ನೂ ಮನೆಯ ಉಪಕರಣಗಳನ್ನೂ ಕದ್ದರೆ ಕಾಗೆಯಾಗುವನು. ಜೇನುತುಪ್ಪವನ್ನು ಕದ್ದರೆ ಕೆಂಪು ಕಾಗೆಯಾಗುವನು. ಹಾಲು ಕದ್ದರೆ ಕುಷ್ಟರೋಗಿಯಾಗುವನು. ಶಾಂತಿಪರ್ವದಲ್ಲಿ ಹೇಳಿದ ವ್ಯಭಿಚಾರಪ್ರಕರಣವನ್ನು ಕೇಳು—ಪರಸ್ತ್ರೀಯನ್ನು ಆಲಿಂಗಿಸಿದರೆ ನಾಯಿಯ ಜನ್ಮದಲ್ಲಿ ನೂರು ಸಾರಿ ಹುಟ್ಟಿ ಮುಂದಿನ ಏಳು ಜನ್ಮಗಳಲ್ಲಿ ದುಃಖಿಯಾಗುವನು. ಪರಸ್ತ್ರೀಯನ್ನು ನೋಡಿದರೆ ಕುರುಡನಾಗುವನು. ಅತ್ತಿಗೆ ನಾದಿನಿಯರನ್ನುಭೋಗಿಸಿದರೆ ಕತ್ತೆಯಾಗುವನು. ಬಳಿಕ ಸರ್ಪಜನ್ಮ ಹೊಂದಿ ನರಕದಲ್ಲಿ ನಾನಾಕಷ್ಟಗಳನ್ನು ಅನುಭವಿಸುವನು. ಮಿತ್ರಪತ್ನಿಯನ್ನೂ ಸೋದರತ್ತೆಯನ್ನೂ ಭೋಗಿಸಿದರೆ ನಾಯಿಯಾಗುವನು. ಕುಬುದ್ಧಿಯಿಂದ ಪರಸ್ತ್ರೀಯನ್ನು ನೋಡಿದರೆ ಕಣ್ಣು ನೋವುಳ್ಳವನಾಗುವನು. ಶೂದ್ರನು ವಿಪ್ರಸ್ತ್ರೀಯನ್ನು ಭೋಗಿಸಿದರೆ ಇಬ್ಬರೂ ಕೃಮಿಗಳಾಗುವರು. ಶೂದ್ರಸ್ತ್ರೀಸಂಗ ಮಾಡಿದರೆ ನಾಯಿಯಾಗುವನು, ಎಂದೀಪರಿಯಿಂದ ಗುರುಗಳು ಪತಿತನಿಗೆ ಧರ್ಮೋಪದೇಶ ಮಾಡುವವರಾದರು. ತ್ರಿವಿಕ್ರಮಭಾರತಿಗಳು ಕೇಳುತ್ತಿದ್ದರು. ಈ ಧರ್ಮವನ್ನು ಕೇಳಲು ಸಕಲ ಪಾಪಗಳೂ ಪರಿಹಾರವಾಗುವುವು. ಶ್ರೀಗುರುವು ತ್ರಿವಿಕ್ರಮಭಾರತಿಯನ್ನು ಕುರಿತು ನೀನು ಮಾಡಿದ ಪಾಪಕ್ಕಾಗಿ ಪಶ್ಚಾತ್ತಾಪಪಟ್ಟರೆ ಇದೇ ಪ್ರಾಯಶ್ಚಿತ್ತವಾಗಿ ಮನಸ್ಸಿನಲ್ಲಿ ಪಶ್ಚಾತ್ತಾಪಪಡುವುದ

ರಿಂದ ಪಾಪ ಪರಿಹಾರವಾಗುವುದೆಂದು ಕರ್ಮವಿಪಾಕದಲ್ಲಿ ಹೇಳಿದೆ. ಅನೇಕ ಋಷಿಗಳು ಹೇಳಿದ ಪ್ರಾಯಶ್ಚಿತ್ತವಿಧಾನವನ್ನು ಕೇಳು—

ಮೊದಲು ಬ್ರಹ್ಮದಂಡವಿತಲು ಪಾಪ ಪರಿಹಾರವಾಗುವುದು. ಸಾಲಂಕೃತ ಗೋದಾನ ಮಾಡಬೇಕು. ಇದಕ್ಕೆ ಅಶಕ್ತನಾದರೆ ದ್ರವ್ಯವನ್ನು ಕೊಡಬೇಕು. ಸ್ಥೂಲಸೂಕ್ಷ್ಮ ಪಾತಕಪರಿಹಾರಕ್ಕಾಗಿ ನಿಷ್ಕ, ಅರ್ಧನಿಷ್ಕ, ಕಾಲು ನಿಷ್ಕಗಳನ್ನು ದಾನ ಮಾಡಬೇಕು. ಅಜ್ಞಾನಕೃತವಾದ ಪಾಪಗಳಿಗೆ ಪಶ್ಚಾತ್ತಾಪದಿಂದ ಶುದ್ಧವಾಗುವುದು. ಗುರುವನ್ನು ಸೇವಿಸಿದರೆ ಪಾಪವು ಪರಿಹಾರವಾಗುವುದು. ಇನ್ನೂರು ಪ್ರಾಣಾಯಾಮ ಮಾಡಿದರೂ ಮತ್ತು ಪುಣ್ಯತೀರ್ಥಗಳಲ್ಲಿ ಹತ್ತು ಬಾರಿ ಸ್ನಾನ ಮಾಡಿದರೂ, ಮೂರು ಗುಲುಗಂಜಿ ತೂಕ ಚಿನ್ನವನ್ನು ದಾನಮಾಡಿದರೂ ಸೌಮ್ಯವಾದ ಪಾಪಗಳು ಪರಿಹಾರವಾಗುವುವು. ದಂಪತಿಗಳಲ್ಲಿ ಯಾರು ಪಾಪ ಮಾಡಿದರೂ ಇಬ್ಬರಿಗೂ ದೋಷವುಂಟು. ಇಬ್ಬರೂ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಹತ್ತುಸಾವಿರ ಗಾಯತ್ರೀಜಪ ಮಾಡಿದರೆ ಅನೇಕ ಪಾಪಗಳು ಪರಿಹರಿಸುವುವು ಇದಕ್ಕೆ ಗಾಯತ್ರೀಕೃಚ್ಛ್ರವೆನ್ನುವರು. ಇದರಿಂದ ಮಹಾದೋಷಗಳು ಪರಿಹರಿಸುವುವು. ದಿನಕ್ಕೊಂದು ಊಟಮಾಡುತ್ತಾ ಅಥವಾ ಅಯಾಚಿತವಾದ ಭಿಕ್ಷವನ್ನು ಮಾಡುತ್ತಾ ಮೂರು ದಿನಗಳು ಉಪವಾಸ ಮಾಡುತ್ತಾ ಗುರುಚರಣವನ್ನು ಸ್ಮರಿಸಿದರೆ ಸಾಮಾನ್ಯದೋಷಗಳು ಪರಿಹರಿಸುವುವು. ಇದೇ ಪ್ರಾಜಾಪತ್ಯಕೃಚ್ಛ್ರವೆನ್ನುವರು. ಅತಿ ಕೃಚ್ಛ್ರಲಕ್ಷಣವನ್ನು ಕೇಳು—ಇದರಿಂದ ಅಜ್ಞಾನಕೃತಪಾಪವು ಹೋಗುವುದು. ನಿತ್ಯವೂ ಇಪ್ಪತ್ತೇಳು ಕವಳ ಆಹಾರ ತೆಗೆದುಕೊಳ್ಳಬೇಕು. ಪ್ರಾತಃಕಾಲ ಹನ್ನೆರಡು ಗ್ರಾಸವನ್ನೂ ರಾತ್ರಿ ಹದಿನೈದು ಗ್ರಾಸವನ್ನೂ ತೆಗೆದುಕೊಳ್ಳಬೇಕು. ಎಂಟು ಗ್ರಾಸವನ್ನು ಅಯಾಚಿತವಾಗಿ ಕೊಡಬೇಕು. ಸೌಮ್ಯಪಾಪಕ್ಕೆ ಈ ವಿಧಿಯಿಂದ ಒಂದು ತಿಂಗಳು ಭುಜಿಸಬೇಕು. ಬಳಿಕ ಮೂರು ದಿನ ಉಪವಾಸ ಮಾಡಬೇಕು.

ಇನ್ನೊಂದುವಿಧ ಹೇಳುವೆನು:—ಮೂರು ದಿನಗಳು ಉಪವಾಸವಿರಬೇಕು. ನಾಲ್ಕನೇ ದಿನ ತುಪ್ಪವನ್ನು ಪ್ರಾಶನಮಾಡಬೇಕು. ಈರೀತಿಯಾಗಿ ಮೂರು ದಿನಗಳು ತುಪ್ಪವನ್ನು ತೆಗೆದುಕೊಂಡು ಮೂರು ದಿನಗಳು

ಹಾಲು ತೆಗೆದುಕೊಳ್ಳಬೇಕು. ಒಳಿಕ ಮೂರು ದಿನಗಳು ವಾಯುವನ್ನು ಭಕ್ಷಿಸಬೇಕು. ಪುನಃ ಹಾಲನ್ನು ತೆಗೆದುಕೊಳ್ಳಬೇಕು. ಈರೀತಿಯಾಗಿ ಆಚರಿಸಲು ಅಶಕ್ತನಾದರೆ ಎಳ್ಳು, ಬೆಲ್ಲ, ಅರಳಹಿಟ್ಟುಗಳನ್ನು ಭುಜಿಸಿ ಉಪವಾಸ ಮಾಡಬೇಕು. ಪರ್ಣಕೃಛ್ರವಿಧಿ ಹೇಗೆಂದರೆ — ಪರ್ಣೋದಕವನ್ನು ನಿತ್ಯವೂ ತೆಗೆದುಕೊಳ್ಳಬೇಕು. ಕಮಲ, ಬಿಲ್ವ, ಅಶ್ವತ್ಥ, ಕುಶ ಇವುಗಳ ಉದಕಗಳನ್ನು ಸೇವಿಸಬೇಕು ಚಾಂದ್ರಾಯಣ ಲಕ್ಷಣ ಹೇಗೆಂದರೆ — ಕುಕ್ಕುಟಾಂಡ ಪ್ರಮಾಣದ ಆಹಾರ ಗ್ರಾಸವನ್ನು ದಿನಂಪ್ರತಿ ಒಂದೊಂದರಂತೆ ಹೆಚ್ಚಿಸುತ್ತಾ ಒಂದು ಹುಣ್ಣಿಮೆಯ ದಿನ ಹದಿನೈದು ಗ್ರಾಸವನ್ನು ತೆಗೆದುಕೊಳ್ಳಬೇಕು ಕೃಷ್ಣಪಕ್ಷದಲ್ಲಿ ಕ್ರಮವಾಗಿ ದಿನಂಪ್ರತಿ ಒಂದೊಂದನ್ನು ಇಳಿಸುತ್ತಾ ಬರಬೇಕು ಎರಡನೇ ತಿಂಗಳಲ್ಲಿ ಹವಿಸ್ಸನ್ನು ಭುಜಿಸಬೇಕು ಸಭಾಮಧ್ಯದಲ್ಲಿ ತನ್ನ ಪಾಪವನ್ನು ಉಚ್ಚರಿಸಬೇಕು. ಪಶ್ಚಾತ್ತಾಪಪಟ್ಟರೆ ಪಾಪವು ಹೋಗುವುದು ತೀರ್ಥಕೃಛ್ರಲಕ್ಷಣವನ್ನು ಕಾಶೀ, ಮಾನಸಾ (ಕಾಶಿ) ಪ್ರಾಂತಪರ್ವತಗಳಲ್ಲಿ ಸ್ನಾನ ಮಾಡಲು ಪಾಪವು ಹೋಗುವುದು ಶ್ರೇಷ್ಠ ತೀರ್ಥಗಳಲ್ಲಿ ಸಾವಿರ ಗಾಯತ್ರೀಜಪ ಮಾಡಿದರೆ ಜಾಗ್ರತೆಯಾಗಿ ಪಾಪವು ಹೋಗುವುದು ಎಂದು ಅಗಸ್ತ್ಯರು ಹೇಳಿರುವರು ಸೇತುಬಂಧದಲ್ಲಿ ಸ್ನಾನಮಾಡಲು ಬ್ರಹ್ಮಹತ್ಯಾ ಕೃತಘ್ನಾದಿ ಪಾಪಗಳು ಪರಿಹಾರವಾಗುವುವು ವಿಧಿಯಂತೆ ಕೋಟಿ ಗಾಯತ್ರಿಯನ್ನು ಜಪಿಸಿದರೆ ಬ್ರಹ್ಮಹತ್ಯಾದಿ ಪಾಪಗಳು ಹೋಗುವುವು. ಲಕ್ಷಗಾಯತ್ರಿಯನ್ನು ಜಪಿಸಿದರೆ ಸುರಾಪಾನ ಪಾಪವು ಪರಿಹರಿಸುವುದು ಚಿನ್ನವನ್ನು ಕದ್ದರೆ ಏಳು ಲಕ್ಷ ಜಪವನ್ನು ಮಾಡಬೇಕು. ಗುರುಪತ್ನೀ ಸಂಗಮಾಡಿದರೆ ಎಂಟು ಲಕ್ಷ ಜಪಮಾಡಬೇಕು ಪವಮಾನ ಸೂಕ್ತವನ್ನು ನಾಲ್ಕು ಬಾರಿ ಪಠಿಸಲು ಬ್ರಹ್ಮಹತ್ಯಾ ದೋಷ ಹೋಗುವುದು. ಇಂದ್ರಮಿತ್ರಂ ಎಂಬುದನ್ನು ತಿಂಗಳುಕಾಲ ಜಪಿಸಬೇಕು ಶುನಶ್ಶೇಪಸೂಕ್ತವನ್ನು ಜಪಿಸಲು ಸುರಾಪಾನದೋಷ ಹೋಗುವುದು ಚಿನ್ನವನ್ನು ಕದ್ದ ಪಾಪ ಹೋಗುವುದು. ಪವಮಾನ, ಶನ್ನ ಸೂಕ್ತಗಳನ್ನು ಪಠಿಸುತ್ತಾ ತಿಂಗಳುಕಾಲ ಹವಿಸ್ಸನ್ನು ಭುಜಿಸಿದರೆ ಗುರುತಲ್ಪಗಮನ ದೋಷಹೋಗುವುದು. ಪುರುಷನು ಆರು ತಿಂಗಳು ಕಾಲ ಮಿತಾಹಾರಿಯಾಗಿ ಪುರುಷಸೂಕ್ತ ಜಪಿಸಿದರೆ ಪಂಚಮಹಾಪಾತಕಗಳು ಪರಿಹರಿಸು

ವುವು ಮಂತ್ರಸೂಕ್ತವನ್ನೂ ಸುಪರ್ಣಾಸಿ ಮಂತ್ರವನ್ನೂ ನಾಚಿಕೇತ ಮಂತ್ರವನ್ನೂ ಜಪಿಸಲು ಸರ್ವ ಪಾಪ ಪರಿಹಾರವಾಗುವುದು ನಾರಾಯಣ ಸೂಕ್ತವನ್ನು ಭಕ್ತಿಯಿಂದ ಜಪಿಸಲು ಪಂಚಮಹಾಪಾಪಗಳು ಹೋಗುವುವು ತ್ರಿಪದಿಯಾದ ಗಾಯತ್ರಿಯನ್ನೂ ಮೂರುಬಾರಿ ಅಘಮರ್ಷಣ ಸೂಕ್ತವನ್ನೂ ಜಪಿಸಲು ಏಳು ಜನ್ಮಗಳ ಪಾಪ ಪರಿಹಾರವಾಗುವುದು ಆಪೋಂಮಧ್ಯೇ ಎಂಬ ಪನ್ನವನ್ನು ತದ್ವಿಷ್ಣೋಃ ಎಂಬ ಸೂಕ್ತವನ್ನು ಭಕ್ತಿಯಿಂದ ಜಪಿಸಲು ಏಳು ಜನ್ಮಗಳ ಪಾಪಗಳು ಪರಿಹರಿಸುವುವು ಪಂಚಗವ್ಯಪ್ರಾಶನ ಮಾಡಿದರೆ ಅಜ್ಞಾನಕೃತ ದೋಷ ಪರಿಹಾರವಾಗುವುದು. ಗೋಮೂತ್ರ, ಗೋಮಯ, ಗೋಕ್ಷೀರ, ಗೋದಧಿ, ಗೋಘೃತ ಕುಶೋದಕ ಇವುಗಳ ಮಿಶ್ರಣವೇ ಪಂಚಗವ್ಯವು ಮೊದಲು ದಿನ ಉಪವಾಸ ಮಾಡಿ ವಿಧಿವಿಹಿತ ಮಂತ್ರದಿಂದ ತೆಗೆದುಕೊಳ್ಳಬೇಕು ನೀಲವರ್ಣದ ಗೋವಿನ ಮೂತ್ರವೂ, ಕರೀಹಸುವಿನ ಗೋಮಯವೂ, ಕೆಂಪು ಹಸುವಿನ ಹಾಲೂ ಬಿಳೀಹಸುವಿನ ಮೊಸರೂ ಕಪಿಲೆಯ ತುಪ್ಪವೂ ಇವೇ ಪಂಚಗವ್ಯಗಳು ಒಂದು ಪಾವು ಗೋಮೂತ್ರವನ್ನೂ ಅಂಗುಷ್ಠಪರ್ವದಷ್ಟು ಗೋಮಯವನ್ನೂ ಏಳುಪಾವು ಹಾಲನ್ನೂ ಮೂರುಪಾವು ಮೊಸರನ್ನೂ ಒಂದು ಪಾವು ತುಪ್ಪವನ್ನೂ ಸೇರಿಸಿ ಕುಶೋದಕವನ್ನು ಸೇರಿಸಬೇಕು ಇರಾವತೀ, ಇದಂವಿಷ್ಣು, ಮಾನಸ್ತೋಕೆ, ಪ್ರಜಾಪತೇ ಮಂತ್ರಗಳನ್ನೂ ವ್ಯಾಹೃತಿಪ್ರಣವಯುಕ್ತವಾಗಿ ಗಾಯತ್ರಿಯನ್ನೂ ಉಚ್ಚರಿಸಿ ಪ್ರಾಶನ ಮಾಡಲು ಅಸ್ಥಿಚರ್ಮಗತಗಳಾದ ಪಾಪಗಳು ಹೋಗುವುವು. ಮೇಲೆ ಹೇಳಿದ ಬಣ್ಣದ ಹಸುಗಳು ದೊರೆಯದಿರಲು ಕಪಿಲಾಧೇನುವಿನ ಪದಾರ್ಥಗಳನ್ನು ಸಂಗ್ರಹಿಸಬೇಕು ಕಪಿಲೆಯನ್ನು ನೋಡುವುದರಿಂದಲೇ ದೋಷಗಳು ಪರಿಹರಿಸುವುವು ಬ್ರಹ್ಮಹತ್ಯಾ, ಸುರಾಪಾನ, ಸ್ವರ್ಣಸ್ತೇಯ, ಗುರುತಲ್ಪಗಮನಾದಿ ಪಂಚಮಹಾಪಾತಕಗಳು ಗುರ್ವನುಗ್ರಹದಿಂದಲೂ, ಸ್ವಧರ್ಮನಿರತನಾದ ಶಾಸ್ತ್ರಜ್ಞನ ಅನುಗ್ರಹದಿಂದಲೂ ಪರಿಹಾರವಾಗುವುವು ಎಂದು ಗುರುಗಳು ತ್ರಿವಿಕ್ರಮಯತಿಗಳಿಗೆ ಹೇಳಿದರು.

ಈ ಧರ್ಮಗಳನ್ನು ಕೇಳಿದ ವಿಪ್ರರಿಗೆ ಜ್ಞಾನ ಉಂಟಾಯಿತು. ಶ್ರೀ ಗುರುವು ಆ ಪತಿತನನ್ನು ಕುರಿತು ಎಲೈ, ನೀನು ಪೂರ್ವದಲ್ಲಿ ತಾಯಿ, ತಂದೆ, ಗುರುಗಳನ್ನು ನಿಂದಿಸಿದುದರಿಂದ ಈಗ ಚಾಂಡಾಲನಾದೆ ಎಂದು ತಿಳಿ. ಈ

ಸಂಗಮದಲ್ಲಿ ಒಂದು ತಿಂಗಳು ಸ್ನಾನಮಾಡು ಆಗ ನಿನ್ನ ಪಾಪಗಳು ಹೋಗುವುವು ಎಂದರು

ಆಗ ಪತಿತನು ಸ್ವಾಮಿಾ ! ತಮ್ಮ ದರ್ಶನವಾದುದರಿಂದ ಮಾನಸ ಸರಸ್ಸಿಗೆ ಹೋದ ಕಾಗೆಯು ಹಂಸವಾಗುವಂತೆ ನಾನೂ ನನ್ನ ಗೋತ್ರದವರೂ ಪವಿತ್ರರಾದೆವು ಶರಣಾಗತನಾದ ನನ್ನನು ರಕ್ಷಿಸಿರಿ ಸ್ಪರ್ಶಮಣಿಯು ತಗಲಲು ಲೋಹವು ಚಿನ್ನವಾಗುವಂತೆ ನಿಮ್ಮ ದರ್ಶನದಿಂದ ನನಗೆ ಜ್ಞಾನ ಉಂಟಾಯಿತು, ನನ್ನನ್ನು ಅಭಿಮಂತ್ರಿಸಿ ಬ್ರಾಹ್ಮಣರಲ್ಲಿ ಸೇರಿಸಿ ಕೊಳ್ಳಿರಿ ಎಂದನು

ಇದನ್ನು ಕೇಳಿ ಗುರುಗಳು ಎಲೈ, ನೀನು ಹೀನಜಾತಿಯ ದೇಹವುಳ್ಳವನಾಗಿದ್ದೀಯೆ. ನಿನ್ನನ್ನು ವಿಪ್ರನೆನ್ನುವರ್ಯಾರು ? ನೀನು ಪತಿತನ ಮನೆಯಲ್ಲಿ ಹುಟ್ಟಿ ಬೆಳೆದಿದ್ದೀಯೆ ಬ್ರಹ್ಮತ್ವವು ಹೇಗೆ ಬಂದೀತು ? ಬ್ರಾಹ್ಮಣರು ನಿಂದಿಸುವರು. ಪೂರ್ವದಲ್ಲಿ ಕ್ಷತ್ರಿಯನಾದ ಗಾಧಿರಾಜ ಪುತ್ರನಾದ ವಿಶ್ವಾಮಿತ್ರನು ತಪಸ್ಸಿನಿಂದ ಪವಿತ್ರನಾದನು ಬ್ರಹ್ಮನು ನೂರು ವರ್ಷಗಳ ಕಾಲ ತಪಸ್ಸು ಮಾಡಿ ಬ್ರಹ್ಮರ್ಷಿಯಾದೆನೆಂದು ಹೇಳಿರಿ ಎಂದು ಇಂದ್ರಾದಿ ದೇವತೆಗಳನ್ನು ಬೇಡಿಕೊಂಡನು ಆಗ ಅವರು ವಿಶ್ವಾಮಿತ್ರನೇ, ಬ್ರಹ್ಮರ್ಷಿಗಳಾದ ವಸಿಷ್ಠರು ನೀನು ಬ್ರಹ್ಮರ್ಷಿಯಾದೆಯೆಂದು ಹೇಳಿದರೆ ನಾವೂ ಒಪ್ಪುವೆವು ಎಂದು ದೇವೇಂದ್ರನು ಹೇಳಿದನು. ಆಗ ವಿಶ್ವಾಮಿತ್ರನು ವಸಿಷ್ಠರ ಹತ್ತಿರ ಹೋಗಿ ಸ್ವಾಮಿಾ, ನಾನು ಬ್ರಹ್ಮರ್ಷಿಯಾದೆನೆಂದು ಹೇಳಬೇಕು ಎಂದು ವಿಜ್ಞಾಪಿಸಿದನು ಆಗ ವಸಿಷ್ಠರು, ವಿಶ್ವಾಮಿತ್ರನೇ, ಕ್ಷತ್ರಿಯನು ತಪಸ್ಸಿಗೆ ಯೋಗ್ಯನಲ್ಲ ಈ ದೇಹವನ್ನು ಬಿಟ್ಟು ಬ್ರಾಹ್ಮಣ ಜನ್ಮದಲ್ಲಿ ಹುಟ್ಟಬೇಕು. ಆಗ ನಿನ್ನ ವ್ರತಬಂಧವಾಗಿ ಗಾಯತ್ರಿಯ ಉಪದೇಶವು (ಪ್ರಬೋಧವು) ಉಂಟಾದರೆ ಆಗ ನೀನು ಶುದ್ಧನಾಗಿ ಬ್ರಹ್ಮರ್ಷಿಯೆಂಬ ಹೆಸರನ್ನು ಪಡೆಯುವಿ ಎಂದರು. ಇದನ್ನು ಕೇಳಿ ಏನುಮಾಡಿದರೂ ಬ್ರಹ್ಮರ್ಷಿಯೆನ್ನಲಿಲ್ಲವೆಂದು ಸಿಟ್ಟಿನಿಂದ ವಸಿಷ್ಠರ ನೂರು ಮಂದಿ ಪುತ್ರರನ್ನೂ ಕೊಂದನು ಆದರೂ ಬ್ರಹ್ಮಜ್ಞಾನಿಯಾದ ವಸಿಷ್ಠರು ವಿಶ್ವಾಮಿತ್ರನನ್ನು ಬ್ರಹ್ಮರ್ಷಿಯೆನ್ನಲಿಲ್ಲ. ಹೀಗಿರಲು ವಿಶ್ವಾಮಿತ್ರನು ವಸಿಷ್ಠರನ್ನು ಕೊಲ್ಲುವೆನೆಂದು ಯೋಚಿಸಿದನು. ಇಂದ್ರಾದಿ

ದೇವತೆಗಳೂ ಋಷಿಗಳೂ ಇವರನ್ನು ಕುರಿತು ವಿಶ್ವಾಮಿತ್ರನು ಬ್ರಹ್ಮರ್ಷಿಯಾದನೆಂದು ಹೇಳಿರಿ ಎಂದರು. ಪರ್ವತದಿಂದ ಹೊಡೆದು ಕೊಲ್ಲುವೆನೆಂದು ವಿಶ್ವಾಮಿತ್ರನು ಯೋಚಿಸಿ ಕಡೆಗೆ ಅದು ದೋಷವೆಂದು ಬಿಟ್ಟನು. ಬಳಿಕ ಅಂತಃಕರಣದಲ್ಲಿ ಪಶ್ಚಾತ್ತಾಪವುಳ್ಳವನಾಗಿ ವಸಿಷ್ಠರನ್ನು ವಂದಿಸಿದನು. ಆಗ ವಸಿಷ್ಠರು ಎಲೈ ವಿಶ್ವಾಮಿತ್ರನೇ ನೀನು ಬ್ರಹ್ಮರ್ಷಿಯಾದೆ ಎಂದರು. ಆಗ ವಿಶ್ವಾಮಿತ್ರನು ಆನಂದದಿಂದ ಸ್ವಾಮಿ, ನನ್ನ ಮನೆಗೆ ಒಂದು ಭೋಜನಮಾಡಿರಿ ಎಂದನು. ಆಗ ವಸಿಷ್ಠರು ವಿಶ್ವಾಮಿತ್ರನೇ, ನಿನ್ನ ದೇಹವನ್ನು ಸೂರ್ಯಕಿರಣದಲ್ಲಿ ಸುಡಬೇಕು. ಆಗ ನಿನ್ನ ದೇಹವು ಪವಿತ್ರವಾಗುವುದು ಎಂದರು. ಇದರಂತೆಯೇ ವಿಶ್ವಾಮಿತ್ರನು ಸೂರ್ಯಕಿರಣಕ್ಕೆ ಮೈಯನ್ನೊಡ್ಡಿ ಆ ದೇಹವನ್ನು ಬಿಟ್ಟು ನವೀನದೇಹವನ್ನು ಧರಿಸಿದನು. ಆಗ ಈತನು ಬ್ರಹ್ಮರ್ಷಿಯಾಗಿ ಮಾನ್ಯನಾದನು. ಆಗ ಸಕಲಸುರರೂ ಋಷಿಗಳೂ "ವಿಶ್ವಾಮಿತ್ರನೇ, ಬ್ರಹ್ಮರ್ಷಿಯಾದೆ" ಎಂದರು ಎಂದು ಗುರುಗಳು ಪತಿತನಿಗೆ ಹೇಳಿದರು.

ಆಗ ಆ ಪತಿತನು ಮನದಲ್ಲಿ ಏನನ್ನೂ ಬಯಸದೇ ಬಡವನಿಗೆ ನಿಧಿಯು ಸಿಕ್ಕಿದಂತೆಯೂ, ಅಮೃತವು ಸಿಕ್ಕಲು ರೋಗಿಯು ನಿರೋಗಿಯಾದಂತೆಯೂ ಶಾಂತನಾಗಿ ತನ್ನ ಹಳ್ಳಿಮನೆಯಲ್ಲಿದ್ದು ಉಪವಾಸ ಮಾಡಬೇಕೆಂದು ಯೋಚಿಸಿದನು. ಮನೆಗೆ ಹೋಗಲು ಮನಸ್ಸಿಲ್ಲದೇ ಗುರುವನ್ನು ಧ್ಯಾನಿಸುತ್ತಾ ತಾನು ಬ್ರಾಹ್ಮಣನೆನ್ನುತ್ತಾ ಇದ್ದನು. ಹೀಗಿರಲು ಇವನ ಸತಿಸುತರು ಅಲ್ಲಿಗೆ ಓಡಿಬಂದರು. ಆಗ ಆತನು ಎಲೌ ಸ್ತ್ರೀಯಳೇ, ಪುತ್ರರೇ, ನನ್ನನ್ನು ಮುಟ್ಟದಿರಿ ಎನ್ನುತ್ತಾ ಅವರನ್ನು ಹೊಡೆಯಲು ಹೋದನು.

ಆಗ ಅವರು ಬಹಳವಾಗಿ ದುಃಖಿಸಿದರು. ಆಗ ಆಕೆಯು ದುಃಖಿಸಿ ಹಾ ಹಾ! ಪತಿಯು ನಮ್ಮನ್ನು ಬಿಟ್ಟುಹೋಗುವನು. ನನಗೆ ಬಹುಮಂದಿ ಹೆಣ್ಣುಮಕ್ಕಳೂ ಗಂಡುಮಕ್ಕಳೂ ಇರುವರು. ನಾನು ಏನುಮಾಡಲಿ? ಇವರನ್ನು ರಕ್ಷಿಸುವವರ್ಯಾರು? ನಮ್ಮನ್ನು ಪತಿಯು ಏಕೆ ಬಿಟ್ಟುಹೋಗುವನು? ಎಂದು ದುಃಖಿಸಿ ಗುರುಗಳನ್ನು ಕುರಿತು ಸ್ವಾಮಿ, ಪತಿಯು ನಮ್ಮನ್ನು ಬಿಡಲು ಕಾರಣವೇನು? ಹೇಳಿರಿ. ಇಲ್ಲದಿದ್ದರೆ ನಾವು

ಇಲ್ಲಿಯೇ ಪ್ರಾಣ ಬಿಡುವೆವು ನಮ್ಮನ್ನು ರಕ್ಷಿಸುವವರ್‍ಯಾರು ? ನಾವು ಅನಾಥರು ಎಂದಳು.

ಆಗ ಗುರುವು ನಕ್ಕು, ಆ ಪತಿತನನ್ನು ಕುರಿತು, ಎಲೈ ! ನೀನು ಮನೆಗೆ ಹೋಗು ನಿನ್ನ ಸತಿಸುತರನ್ನು ಕ್ಷೋಭಿಸಿದರೆ ದೋಷಬರುವುದು ಇದರಿಂದ ನಿನಗೆ ಗತಿಯಾಗದು ಈ ಸಂಸಾರದಲ್ಲಿ ಹುಟ್ಟಿದ ಮೇಲೆ ಇಂದ್ರಿಯಗಳನ್ನು ಸಂತೋಷಪಡಿಸಬೇಕು. ಬಳಿಕ ಧರ್ಮಕಾರ್ಯಗಳನ್ನು ಮಾಡಿ ಈ ಭವಾರ್ಣವವನ್ನು ದಾಟಬೇಕು ಲಗ್ನಮಾಡಿಕೊಳ್ಳಲೇ ಬಾರದು ಮಾಡಿಕೊಂಡಮೇಲೆ ಆ ಹೆಂಡತಿಯನ್ನು ಬಿಟ್ಟರೆ ಮಹಾ ದೋಷವುಂಟಾಗುವುದು. ಸೂರ್‍ಯ ಭೂಮಿಗಳ ಸಾಕ್ಷಿಯಾಗಿ ನೀನು ಲಗ್ನಮಾಡಿಕೊಂಡಿದ್ದೀಯೆ ಈಗ ಬಿಟ್ಟರೆ ಮಹಾದೋಷವು ಇದರಿಂದ ನಿನಗೆ ಗತಿಯಾಗದು ಎಂದರು

ಆಗ ಪತಿತನು ಕೈಗಳನ್ನು ಜೋಡಿಸಿ ಸ್ವಾಮಿ, ನಾನು ಯಾವಾಗ ಜಾತಿಹೀನನಾದೆನು ? ಎಂದನು

ಆಗ ಗುರುಗಳು ಮನಸ್ಸಿನಲ್ಲಿ ವಿಚಾರಮಾಡಿ ಇವನ ಮೈಯಲ್ಲಿರುವ ವಿಭೂತಿಯನ್ನು ವರ್ತಕತನದ ದ್ವಿಜನ ಕೈಯಿಂದ ತೊಳೆಯಿಸಿದರು ಇದರಿಂದ ಇವನಿಗೆ ಆಗ ಅಜ್ಞಾನವುಂಟಾಯಿತು ಆಗ ಅವನಿಗೆ ಸಂಸಾರದಲ್ಲಿ ಆಸಕ್ತಿಯುಂಟಾಯಿತು ಸತೀಸುತರನ್ನು ನೋಡಿ ಓಡುತ್ತಾ ಅವರ ಹತ್ತಿರ ಹೋಗಿ ಮಕ್ಕಳನ್ನು ತಬ್ಬಿಕೊಂಡು ಭ್ರಾಂತಿಯಿಂದ ನೀವು ಮನೆಯಿಂದ ಇಲ್ಲಿಗೇಕೆ ಬಂದಿರಿ ? ಎಂದು ವಿಚಾರಿಸಿದನು

ಆಗ ಎಲ್ಲರೂ ವಿಸ್ಮಿತರಾದರು ಆ ಗ್ರಾಮಸ್ಥರು ಈ ಕೌತುಕವನ್ನು ನೋಡಿ ಇದು ನೂತನ ಸಂಗತಿಯೆಂದು ಹೇಳಿ ವಿಸ್ಮಿತರಾದರು. ಆಗ ತ್ರಿವಿಕ್ರಮ ಭಾರತಿಗಳು ಸಂಶಯಯುಕ್ತರಾಗಿ, ಗುರುಗಳನ್ನು ಕುರಿತು ವಿಜ್ಞಾಪಿಸಿ ಸ್ವಾಮಿ, ಪತಿತನಿಗೆ ದಿವ್ಯಜ್ಞಾನವನ್ನು ಕೊಟ್ಟರಿ ಅವನ ದೇಹವನ್ನು ತೊಳೆಯಲು ಅವನ ಜ್ಞಾನವು ಹೋಯಿತು ಇದಕ್ಕೆ ಕಾರಣವೇನು ? ಎಂದು ಕೇಳಿ ವಂದಿಸಿದರು

ಆಗ ಗುರುಗಳು ತ್ರಿವಿಕ್ರಮನಿಗೆ ಹೇಳು— ಈ ಪತಿತನ ದೇಹದಲ್ಲಿರುವ ವಿಭೂತಿಯನ್ನು ತೊಳೆಯಲು ಅವನ ಜ್ಞಾನವು ಹೋಯಿತು

ವಿಭೂತಿಯ ಮಹಿಮೆಯು ಈರೀತಿಯಾಗಿ ಭಸ್ಮಧಾರಣೆಯಿಂದ ಬ್ರಹ್ಮ ಜ್ಞಾನ ಉಂಟಾಗುವುದೆಂದರು. ಆಗ ತ್ರಿವಿಕ್ರಮನು ಗುರುವಚನವನ್ನು ಕೇಳಿ, ಗುರುಶಿರೋಮಣಿಗಳೇ, ಭಸ್ಮ ಮಹಿಮೆಯನ್ನು ಹೇಳ ಬೇಕೆಂದು ಕೇಳಿದನು ಎಂದು ಸರಸ್ವತೀಗಂಗಾಧರನು ಹೇಳಿದನು ಎಂಬಲ್ಲಿಗೆ ಕರ್ಮವಿಪಾಕದ ಭಾವಾರ್ಥ ನಿರೂಪಣವೆಂಬ ೨೮ನೇ ಅಧ್ಯಾಯವು ಮುಗಿದುದು.

|| ಶ್ರೀಗುರವೇನಮಃ ||

## ೨೯ ನೆಯ ಅಧ್ಯಾಯ.

ಶ್ರೀಗಣೇಶಾಯನಮಃ ॥ ಶ್ರೀಗುರು[illegible]ವು ತ್ರಿ[illegible]ಕ್ರಮಭಾರತಿಗೆ ಭಸ್ಮಮಹಿಮೆಯನ್ನು ಹೇ[illegible]ದರು—

ಪೂರ್ವದ ಕೃತಯುಗದಲ್ಲಿ ವಾಮದೇವರೆಂಬ ಪ್ರಸಿದ್ಧ ಯೋಗೀಶ್ವರರು ಕಾಮಕ್ರೋಧಗಳಿಲ್ಲದೆ ಮನೋವಾಗಿಲುಗಳನ್ನು ಬಿಟ್ಟು ಭೂಮಿಯಲ್ಲಿ ತಿರುಗುತ್ತಿದ್ದರು. ಇವರು ಸರ್ವಾಂಗದಲ್ಲಿ ಭಸ್ಮವನ್ನು ಲೇಪಿಸಿಕೊಂಡು ಜಟಾಧಾರಿಗಳಾಗಿ ನಾನಾಕ್ಷೇತ್ರಗಳಲ್ಲಿ ಸಂಚರಿಸಿ ರಾಕ್ಷ[illegible]ನ ಕ್ರೌಂಚಾರಣ್ಯಕ್ಕೆ ಬಂದರು. ಅಲ್ಲಿ ಒಬ್ಬ ಬ್ರಹ್ಮರಾಕ್ಷಸನು ಜೀವಹಿಂಸೆ ಮಾಡುತ್ತಾ ಇದ್ದನು. ಈ ವಾಮದೇವರನ್ನು ನೋಡಿ ಇವರನ್ನು ತಿನ್ನಬೇಕೆಂದು ಹಿಡಿದು ತಬ್ಬಿಕೊಂಡನು. ಆಗ ಅವರ ಮೈಯಲ್ಲಿದ್ದ ಭಸ್ಮವು ಈ ಬ್ರಹ್ಮರಾಕ್ಷಸನಿಗೆ ತಗಲಿತು. ಇದರಿಂದ ಈತನಿಗೆ ಜ್ಞಾನೋದಯವಾಗಿ ಜನ್ಮಾಂತರದ ಜಾತಿಸ್ಮರಣೆಯುಂಟಾಯಿತು. ಇವನ ಪಾತಕವು ಹೋಯಿತು. ಬ್ರಹ್ಮಜ್ಞಾನಿಯಾದನು. ಚಿಂತಾಮಣಿಯ ಸ್ಪರ್ಶದಿಂದ ಲೋಹವು ಚಿನ್ನವಾಗುವಂತೆಯೂ ಮಾನಸ ಸರಸ್ಸಿಗೆ ಹೋದ ಕಾಗೆಯು ಹಂಸವಾಗುವಂತೆಯೂ ಅಮೃತಪಾಶನ ಮಾಡಿದ ಮನುಷ್ಯನು ದೇವತ್ವ ಹೊಂದುವಂತೆಯೂ ಆ ಪಾಪಿಯು ಈ ಯೋಗಿಯ ಅಂಗಸ್ಪರ್ಶದಿಂದ ಪುನೀತನಾದನು. ಸಜ್ಜನರ ದರ್ಶನದಿಂದ ಸಕಲೇಷ್ಟಗಳೂ ಉಂಟಾಗುವುವು. ಗುರುಚರ

ಣವು ಸ್ಪರ್ಶವಾಗಲು ಪಾಪವು ದೂರವಾಗುವುದು. ಕ್ರೂರನಾದ ಬ್ರಹ್ಮ ರಾಕ್ಷಸನು ಆನೆ, ಕುದುರೆ, ಮನುಷ್ಯರನ್ನು ಆಹಾರವಾಗಿ ಉಪಯೋಗಿಸು ತ್ತಿದ್ದನು ಆದರೂ ಇವನ ಹಸಿವೆಯು ಹಿಂಗುತ್ತಿರಲಿಲ್ಲ. ಸಮುದ್ರವನ್ನು ಕುಡಿದರೂ ಬಾಯಾರಿಕೆಯು ಅಡಗುತ್ತಿರಲಿಲ್ಲ . ಇಂಥವನು ಈ ಮುನಿ ಯ ಅಂಗಸ್ಪರ್ಶದಿಂದ ಹಸಿವೆದಾಹಗಳಡಗಿ ಜ್ಞಾನಿಯಾದನು ಬಳಿಕ ಈತನು ಋಷಿಚರಣಗಳಿಗೆರಗಿ ಗುರುಶಿರೋಮಣಿಗಳೇ, ನೀವು ಸಾಕ್ಷಾ ದೀಶ್ವರರಾಗಿದ್ದೀರಿ ನಾನು ಘೋರವಾದ ಸಂಸಾರ ಸಾಗರದಲ್ಲಿ ಮುಳುಗಿ ರುವೆನು. ನಿಮ್ಮ ದರ್ಶನದಿಂದ ನನ್ನ ಪಾಪರಾಶಿಯು ಸುಟ್ಟುಹೋಯಿತು. ಭಕ್ತನಾದ ನನ್ನನ್ನು ಪಾಲಿಸಿರಿ ಎಂದು ಬಿನ್ನವಿಸಿದನು

ಆಗ ವಾಮದೇವನು ಎಲೈ ನೀನು ಯಾರು ? ಯಾವ ವಂಶದಲ್ಲಿ ಹುಟ್ಟಿದೆ ? ಈ ಘೋರವನದಲ್ಲಿರುವುದೇಕೆ ? ಎಂದು ಕೇಳಿದರು.

ಆಗ ಬ್ರಹ್ಮರಾಕ್ಷಸನು ವಂದಿಸಿ ಸ್ವಾಮಿ, ನನಗೆ ಈಗ ಜಾತಿ ಸ್ಮರಣೆಯುಂಟಾಯಿತು ನನ್ನ ದೋಷವು ಹೆಚ್ಚಾದುದು ನನ್ನ ಇಪ್ಪ ತ್ತೈದನೇ ಪೂರ್ವಜನ್ಮದಲ್ಲಿ ಯವನದೇಶದಲ್ಲಿ ದುರ್ಜಯನೆಂಬ ಹೆಸರುಳ್ಳ ದುರಾಚಾರಿಯಾದ ರಾಜನಾಗಿದ್ದೆನು ನಾನು ಬಹುಜನರನ್ನು ಕೊಂದೆನು ಅನೇಕ ಸ್ತ್ರೀಯರನ್ನು ಲಗ್ನವಾದೆನು ಅನೇಕ ತರುಣಿಯರನ್ನು ಭೋಗಿ ಸಿದೆನು. ಈ ತರುಣಿಯರಲ್ಲಿ ಒಬ್ಬೊಬ್ಬಳನ್ನು ಒಂದೊಂದು ದಿನ ಭೋಗಿಸಿ ಬಳಿಕ ಅವರನ್ನು ಭೋಗಿಸದೇ ಇರುತ್ತಿದ್ದೆನು ಒಂದು ದಿನ ಭೋಗಿಸಿದ ಸ್ತ್ರೀಯನ್ನು ಬಿಟ್ಟು ಬಳಿಕ ಆಕೆಯನ್ನು ಕಣ್ಣೆತ್ತಿಯೂ ನೋಡುತ್ತಿರಲಿಲ್ಲ ಈರೀತಿಯಿಂದ ಅನೇಕ ತರುಣಿಯರನ್ನು ಅಂತರ್ಗೃಹ ದಲ್ಲಿಟ್ಟೆನು ಈ ಸ್ತ್ರೀಯರು ನನ್ನನ್ನು ಕುರಿತು ದರ್ಶನಕೊಡುವುದಿಲ್ಲ ವೆಂದು ಶಪಿಸುತ್ತಿದ್ದರು ಅನೇಕ ರಾಜರನ್ನು ಗೆದ್ದು ಅವರ ಸ್ತ್ರೀಯ ರನ್ನು ಹಿಡಿದು ತಂದು ಒಂದುದಿನ ಭೋಗಿಸಿ ಅಂತರ್ಗೃಹದಲ್ಲಿಡುತ್ತಿದ್ದೆನು ಎಲ್ಲಿ ಸುಂದರಿಯರಿರುವರೋ ಅಲ್ಲಿಂದವರನ್ನು ಬಲಾತ್ಕರಿಸುತ್ತಿದ್ದೆನು ಅಥವಾ ದ್ರವ್ಯವನ್ನು ಕೊಟ್ಟಾದರೂ ಕರೆತಂದು ಸುಖಿಸುತ್ತಿದ್ದೆನು ನನ್ನ ದೇಶದ ವಿಪ್ರಸ್ತ್ರೀಯರನ್ನೂ ಈ ರೀತಿಯಾಗಿ ಪತಿವ್ರತೆಯರಾದ ಸುವಾಸಿನಿ ಯರನ್ನೂ ವಿಧವೆಯರನ್ನೂ ರಜಸ್ವಲೆಯರನ್ನೂ ಮದುವೆಯಾಗದ ಕನ್ಯೆ

ಯರನ್ನೂ ಬಲಾತ್ಕಾರದಿಂದ ಭೋಗಿಸಿದೆನು. ಈರೀತಿಯಾಗಿ ಮದಾಂಧನಾಗಿ ಸರ್ವದೇಶಗಳಲ್ಲಿಯೂ ಬಾಧಿಸುತ್ತಿದ್ದೆನು ಮುನ್ನೂರು ವಿಪ್ರ ಸ್ತ್ರೀಯರನ್ನೂ ನಾನೂರು ಕ್ಷತ್ರಿಯ ಸ್ತ್ರೀಯರನ್ನೂ ಆರುನೂರು ವೈಶ್ಯ ಸ್ತ್ರೀಯರನ್ನೂ ಸಾವಿರ ಶೂದ್ರ ಸ್ತ್ರೀಯರನ್ನೂ ನೂರುಮಂದಿ ಚಾಂಡಾಲ ಸ್ತ್ರೀಯರನ್ನೂ ಸಾವಿರ ಬೇಡಿತಿಯರನ್ನೂ ಐನೂರು ಡೊಂಬಿತಿಯರನ್ನೂ ನಾನೂರು ಅಗಸಗಿತ್ತಿಯರನ್ನೂ ಲೆಕ್ಕವಿಲ್ಲದಷ್ಟು ಸೂಳೆಯರನ್ನೂ ಭೋಗಿಸಿದೆನು ಆದರೂ ನನ್ನ ಚಿತ್ತಕ್ಕೆ ತೃಪ್ತಿಯಾಗಲಿಲ್ಲ ವಿಷಯಾಸಕ್ತಿಯಿಂದ ಮದ್ಯಪಾನ ಮಾಡುತ್ತಾ ಉನ್ಮತ್ತನಾಗಿದ್ದೆನು ಹೀಗಿರಲು ನಾನು ರಾಜ ಯಕ್ಷ್ಮಾದಿರೋಗವುಳ್ಳವನಾದೆನು ಆಗ ಪರರಾಜರು ಬಂದು ನನ್ನ ರಾಜ್ಯವನ್ನಪಹರಿಸಿದರು ನನಗೆ ಮರಣವುಂಟಾಯಿತು ಯಮಕಿಂಕರರು ನನ್ನನ್ನೊಯ್ದು ನರಕದಲ್ಲಿ ಹಾಕಿದರು. ಅಲ್ಲಿ ದೇವಮಾನದ ಸಾವಿರ ವರ್ಷಗಳು ನನ್ನ ಪಿತೃಗಳೊಡನೆ ನರಕದ ದುಃಖವನ್ನು ಅನುಭವಿಸಿದೆನು ಬಳಿಕ ಪ್ರೇತವಂಶದಲ್ಲಿ ಹುಟ್ಟಿ ವಿರೂಪದೇಹವುಳ್ಳವನಾಗಿ ಶರೀರದಲ್ಲಿ ಸಾವಿರ ಛಿದ್ರಗಳುಳ್ಳವನಾಗಿ ದಿವ್ಯವಾದ ನೂರು ವರ್ಷಗಳ ಕಾಲ ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ ಪುನಃ ಯಮಪುರಿಯನ್ನು ಹೊಂದಿದೆನು ಬಳಿಕ ಮುಂದಿನ ಜನ್ಮದಲ್ಲಿ ಹುಲಿಯಾಗಿ ಜೀವಹಿಂಸೆ ಮಾಡಿದೆನು ಬಳಿಕ ಹೆಬ್ಬಾವು ಆದೆನು ೪ನೇ ಜನ್ಮದಲ್ಲಿ ತೋಳನಾದೆನು ೫ನೇ ಜನ್ಮದಲ್ಲಿ ಊರುಹಂದಿಯಾದೆನು ೬ನೇ ಜನ್ಮದಲ್ಲಿ ಓತಿಕೇತನಾದೆನು ೭ನೇ ಜನ್ಮದಲ್ಲಿ ನಾಯಿಯಾದೆ ೮ನೇ ಜನ್ಮದಲ್ಲಿ ನರಿಯಾದೆ ೯ನೇ ಜನ್ಮದಲ್ಲಿ ಜಿಂಕೆಯಾದೆ ೧೦ ರಲ್ಲಿ ಮೊಲವಾದೆ ೧೧ ನೇ ಕಪಿಯಾದೆ ೧೨ ನೇ ಕಡವೆಯಾದೆ. ೧೩ನೇ ಮುಂಗುಸಿಯಾದೆ ೧೪ನೇ ಕಾಗೆಯಾದೆ. ೧೫ ನೇ ಕರಡಿಯಾದೆ. ೧೬ ನೇ ಕಾಡುಕೋಳಿಯಾದೆ. ೧೭ ನೇ ಕಣ್ಣಿಲ್ಲದ ಕತ್ತೆಯಾದೆ. ೧೮ ನೇ ಬೆಕ್ಕಾದೆ. ೧೯ ನೇ ಕಪ್ಪೆಯಾದೆ. ೨೦ ನೇ ನೀರಾವೆಯಾದೆ. ೨೧ ನೇ ಮೀನಾದೆ ೨೨ ನೇ ಕಪ್ಪ ಇಲಿಯಾದೆನು. ೨೩ ನೇ ಜನ್ಮದಲ್ಲಿ ದಿವಾಂಧನಾಗಿಯೂ ಕಿವುಡು ಗೂಬೆಯಾದೆನು. ೨೪ನೇ ಮದ್ದಾನೆಯಾದೆ. ೨೫ ನೇ ಜನ್ಮದಲ್ಲಿ ಬ್ರಹ್ಮರಾಕ್ಷಸನಾದೆನು ದಿವಾನಿಶಿಯಲ್ಲಿಯೂ ಹಸಿವೆಯಿಂದ ನಿರಾಹಾರಿಯಾಗಿ ಕಷ್ಟಪಡುತ್ತಾ ಕಾಡಿನಲ್ಲಿದ್ದೆನು. ನಿಮ್ಮನ್ನು ನೋಡಿ ತಿನ್ನುವೆನೆಂದು ಪಾಪಿಯಾದ ನಾನು ಓಡಿಬಂದೆನು. ನಿಮ್ಮ ಅಂಗ

ಸ್ಪರ್ಶವಾಗಲು ಈಗ ನನಗೆ ಜಾತಿಸ್ಮರಣೆಯುಂಟಾಯಿತು. ಸಾವಿರ ಜನ್ಮ
ಗಳ ಪಾಪಗಳು ನನಗೆ ಕಾಣಿಸುತ್ತವೆ. ಇನ್ನು ನನಗೆ ಜನ್ಮವು ಸಾಕು
ನಿಮ್ಮ ಅನುಗ್ರಹದಿಂದ ಘೋರ ಸಂಸಾರವನ್ನು ದಾಟಿದೆನು ನೀವು ಎಲ್ಲ
ತಾರಕರಾಗಿದ್ದೀರಿ. ನಿಮ್ಮ ಚರಣಮಹಿಮೆಯು ಅಗಾಧವಾದುದು. ನಿಮ್ಮ
ಪಾದಸ್ಪರ್ಶದಿಂದ ನನಗೆ ಜ್ಞಾನ ಉಂಟಾಯಿತು ನೀವು ಸಾಧಾರಣ
ಯತಿಗಳಲ್ಲ. ನಿಮ್ಮ ಮಹಿಮೆ ಪ್ರಸಿದ್ಧವಾದುದು. ಮಹಾಪಾಪಿಯೂ
ದುರಾಚಾರಿಯೂ ಆದ ನನಗೆ ನಿಮ್ಮ ಅಂಗಸ್ಪರ್ಶದಿಂದ ಜ್ಞಾನವುಂಟಾ
ಯಿತು. ನೀವು ಈಶ್ವರಸದೃಶರಾಗಿದ್ದೀರಿ. ನನ್ನನ್ನು ರಕ್ಷಿಸಲು ಬಂದಿ
ರುವಿರಿ ಎಂದನು.

ಆಗ ವಾಮದೇವನು ಎಲೈ ಬ್ರಹ್ಮರಾಕ್ಷಸನೇ, ಭಸ್ಮಮಹಿಮೆಯು
ಅಗಾಧವಾದುದು. ನನ್ನ ಸರ್ವಾಂಗದಲ್ಲಿರುವ ಭಸ್ಮವು ಸ್ವಲ್ಪ ತಗಲಲು
ನಿನಗೆ ಜನ್ಮಾಂತರಗಳ ಜ್ಞಾನವುಂಟಾಯಿತು. ಭಸ್ಮ ಮಹಿಮೆಯು
ಬ್ರಹ್ಮಾದಿಗಳಿಗೂ ಅಗೋಚರವು. ಇದನ್ನು ಶಂಕರನು ಸದಾ ಸರ್ವಾಂ
ಗದಲ್ಲಿಯೂ ಧರಿಸಿರುವನು ಮತ್ತು ಇದನ್ನು ವಂದಿಸುವನು. ಇದನ್ನು
ವರ್ಣಿಸಲು ಅಶಕ್ಯವು. ಇದರ ಮಹಿಮೆಯನ್ನು ವ್ಯೋಮಕೇಶನೇ
ಬಲ್ಲನು. ಇದಕ್ಕೊಂದು ದೃಷ್ಟಾಂತವನ್ನು ಕೇಳು—ದ್ರಾವಿಡದೇಶದಲ್ಲಿ
ಆಚಾರಹೀನನಾದ ಶೂದ್ರಸ್ತ್ರೀರತನಾದ ಕರ್ಮಭ್ರಷ್ಟನಾದ ವಿಪ್ರನಿದ್ದನು.
ವಿಪ್ರರೆಲ್ಲರೂ ಸೇರಿ ಇವನಿಗೆ ಬಹಿಷ್ಕಾರಹಾಕಿದರು. ಇವನ ತಾಯಿ
ತಂದೆಗಳೂ ಬಂಧುಗಳೂ ಇವನನ್ನು ಬಿಟ್ಟರು. ಈತನು ಆಚಾರಹೀನ
ನಾಗಿ ಕಳ್ಳತನದಿಂದ ಹೊಟ್ಟೆಯನ್ನು ಹೊರೆಯುತ್ತಿದ್ದನು ; ಮತ್ತು ಮತ್ತ
ನಾಗಿ ಬೇರೆ ಸ್ತ್ರೀಯರಲ್ಲಿ ವ್ಯಭಿಚರಿಸುತ್ತಿದ್ದನು. ಹೀಗಿರಲೊಂದು ದಿನ
ಕಳ್ಳತನಕ್ಕಾಗಿ ಹೋಗಿ ರಾತ್ರಿಯಲ್ಲಿ ಒಬ್ಬ ಶೂದ್ರನಿಂದ ಸಂಹೃತನಾದನು.
ಬಳಿಕ ಅವನ ಹೆಣವನ್ನು ಆ ಗ್ರಾಮದ ಹೊರಗೆ ಹಾಕಿದರು. ಆಗ
ಒಂದು ನಾಯಿಯು ಬೂದಿಯ ಗುಪ್ಪೆಯಮೇಲೆ ಬಿದ್ದು ಎದ್ದು ಬಂದು ಹಸಿ
ವೆಯಿಂದ ಪೀಡಿತವಾಗಿ ತಿರುಗುತ್ತಾ ಬಂದು ಈ ಹೆಣದ ಹತ್ತಿರ ಬಂದು
ಸಂತೋಷದಿಂದ ಆ ಹೆಣವನ್ನು ತಿನ್ನುತ್ತಿತ್ತು. ಆ ನಾಯಿಯ ಹೊಟ್ಟೆ
ಯಲ್ಲಿದ್ದ ಭಸ್ಮವು ಆ ಹೆಣದ ಹಣೆಗೂ ಎದೆಗೂ ತಗಲಿತು. ಆ ವಿಪ್ರನನ್ನು
ಯಮಕಿಂಕರರು ನಾನಾಪರಿಯಿಂದ ಹಿಂಸಿಸುತ್ತಾ ಕರೆದೊಯ್ಯುತ್ತಿದ್ದರು.

ಆಗ ಕೈಲಾಸದಿಂದ ಶಿವದೂತರು ಬಂದು ಈ ಹೆಣವನ್ನು ನೋಡಿ ಭಸ್ಮಲೇಪಿತನಾದೀತನು ಶಿವಲೋಕಕ್ಕೆ ಯೋಗ್ಯನು ಎಂದು ಓಡಿಬಂದು ಯಮನಾಳುಗಳನ್ನು ಹೊಡದಟ್ಟಿದರು.

ಶಿವದೂತರು ಬರಲು ಯಮದೂತರು ಓಡಿಹೋಗಿ ಯಮನನ್ನು ಕುರಿತು ಸ್ವಾಮಿ, ನಾವು ಭೂಮಿಗೆ ಹೋಗಿ ಪಾಪಿಯಾದ ವಿಪ್ರನ ಪ್ರಾಣವನ್ನು ತೆಗೆದುಕೊಂಡು ಬರುತ್ತಿರುವಾಗ ಶಿವದೂತರು ಆ ಪ್ರೇತ ವನ್ನು ತೆಗೆದುಕೊಂಡುಹೋದರು. ಇನ್ನು ನಮ್ಮ ಗತಿಯೇನು ? ಇನ್ನು ನಾವು ಭೂಮಿಗೆ ಹೋಗುವುದೆಂತು ? ಶಿವದೂತರು ನಮ್ಮನ್ನು ಹೊಡೆಯು ವರು ಎಂದು ಬಿನ್ನವಿಸಿದರು.

ಈ ವಾಕ್ಯವನ್ನು ಕೇಳಿ ಯಮನು ಸಿಟ್ಟಿನಿಂದ ಥಟ್ಟನೆ ಧೂರ್ಜಟಿಯ ಭೃತ್ಯರ ಹತ್ತಿರ ಬಂದು ಶಿವದೂತರಿರಾ, ನನ್ನ ಕಿಂಕರರನ್ನು ಏಕೆ ಹೊಡೆ ದೋಡಿಸಿದಿರಿ ? ಆ ಪಾಪಿ ವಿಪ್ರನನ್ನು ತೆಗೆದುಕೊಂಡುಹೋದುದೇಕೆ ? ನದಿಯಲ್ಲಿರುವ ಮರಳುಕಣಗಳನ್ನು ಎಣಿಸಲು ಹೇಗೆ ಅಶಕ್ಯವೋ ಹಾಗೆ ಈತನು ಅನೇಕ ಪಾಪಗಳನ್ನು ಮಾಡಿರುವನು. ಈತನು ಶಿವಪುರಕ್ಕೆ ಅರ್ಹನಲ್ಲ. ನೀವು ಮೂಢತನದಿಂದ ಈತನನ್ನು ವಿಮಾನದಲ್ಲಿ ಕುಳ್ಳಿರಿಸಿ ಏಕೆ ಒಯ್ಯುವಿರಿ ? ಎಂದು ಕೇಳಿದನು.

ಇದನ್ನು ಕೇಳಿ ಶಿವದೂತರು ಯಮಧರ್ಮನೇ, ಈ ಪ್ರೇತದ ಹಣೆ ಯಲ್ಲಿಯೂ, ಎದೆಯಲ್ಲಿಯೂ, ಬಾಹುಮೂಲದಲ್ಲಿಯೂ, ಕರಕಂಕಣದ ಲ್ಲಿಯೂ ಭಸ್ಮವು ತಗಲಿದೆ. ಈತನನ್ನು ನಿನ್ನ ದೂತರು ಹೇಗೆ ಒಯ್ಯು ವರು ? ಯಾರ ದೇಹದಲ್ಲಿ ಭಸ್ಮವು ಲೇಪಿಸಲ್ಪಟ್ಟಿರುವುದೋ ಅವರಿಗೆ ಸ್ಥಿರವಾದ ಕೈಲಾಸಪದವಿಯುಂಟಾಗುವುದು. ಇದು ಶಿವಾಜ್ಞೆಯಾಗಿದೆ. ಲಲಾಟದಲ್ಲಿ ಭಸ್ಮ ಲೇಪನೆಯುಳ್ಳ ಇವನನ್ನು ನಿನ್ನ ದೂತರು ಅಧರ್ಮದಿಂದ ಹಿಂಸಿಸುತಿದ್ದರು. ಇನ್ನುಮುಂದಾದರೂ ನಿನ್ನ ದೂತರಿಗೆ ಬುದ್ಧಿಯನ್ನು ಹೇಳು. ಭಸ್ಮಲೇಪಿತನಾದವನಿಗೆ ದೋಷ ಉಂಟಾಗದು. ಆತನು ಸ್ವರ್ಗಕ್ಕೆ ಯೋಗ್ಯನು ಎಂದರು.

ಈ ಮಾತನ್ನು ಕೇಳಿ ಯಮನು ಹಿಂದಿರುಗಿ ಹೋಗಿ ತನ್ನ ಕಿಂಕರ ರನ್ನು ಸಂತೈಸಿ ದೂತರಿರಾ, ಇನ್ನುಮುಂದೆ ಭಸ್ಮಲೇಪಿತರಾದವರನ್ನು

ನೀವು ತರಬೇಡಿರಿ. ಅನೇಕ ಗೋಪಗಳಿದ್ದರೂ ತ್ರಿಪುಂಡ್ರಧಾರಿಯಾದವನನ್ನು ನನ್ನ ನಗರಕ್ಕೆ ಕರತರಬೇಡಿರಿ ಯಾರ ಕಂಠದಲ್ಲಿ ರುದ್ರಾಕ್ಷ ಮಾಲೆಯು ಲಕ್ಷಣವಾಗಿರುವುದೋ, ಯಾರು ತ್ರಿಪುಂಡ್ರವನ್ನು ಧರಿಸಿರುವರೋ ಅಂಥವರನ್ನು ಕರೆತರದಿರಿ ಇದು ಶ್ರೀ ಶಿವಾಜ್ಞೆಯು ಎಂದು ವಾಮದೇವನು ಆ ಬ್ರಹ್ಮರಾಕ್ಷಸನನ್ನು ಕುರಿತು ಎಲೈ, ಭಸ್ಮದ ಮಹಿಮೆಯು ಈ ರೀತಿಯಾಗಿರುವುದು ನಾವು ಭಕ್ತಿಯಿಂದ ವಿಭೂತಿಯನ್ನು ಲೇಪಿಸುವೆವು ಇದು ದೇವಾದಿಗಳಿಗೂ ದುರ್ಲಭವು ಸದಾ ಭಸ್ಮವನ್ನು ಲೇಪಿಸಿದರೆ ಈಶ್ವರನು ಅವರನ್ನು ಪ್ರೀತಿಯಿಂದ ನೋಡುವನು ಶಂಕರನು ಈ ಭಸ್ಮವನ್ನು ವಂದಿಸುವನು ಇದನ್ನು ವರ್ಣಿಸಲು ಯಾರು ಶಕ್ತರು ? ಎಂದನು

ಈ ಮಾತನ್ನು ಕೇಳಿ ಬ್ರಹ್ಮರಾಕ್ಷಸನು ವಂದಿಸಿ ಮಹಾಸ್ವಾಮಿ, ನನ್ನನ್ನು ರಕ್ಷಿಸಿರಿ ನಿಮ್ಮ ಪಾದಗಳನ್ನು ನೋಡಿದುದರಿಂದ ನನಗೆ ಸಾವಿರಜನ್ಮದ ಜ್ಞಾನವುಂಟಾಯಿತು ನಾನು ಮಾಡಿದ ಅಲ್ಪವಾದ ಪುಣ್ಯ ಶೇಷದಿಂದ ತಮ್ಮ ಸಂದರ್ಶನವಾಯಿತು ನಾನು ಪೂರ್ವದಲ್ಲಿ ರಾಜ್ಯವಾಳುತ್ತಿರುವಾಗ ಕಾಡಿನಲ್ಲಿ ಕೆರೆಯನ್ನು ಕಟ್ಟಿಸಿದೆನು ಬ್ರಾಹ್ಮಣರಿಗೆ ವೃತ್ತಿಯನ್ನಿತ್ತೆನು, ಮತ್ತು ಬಲವಾದ ಪಾಪರಾಶಿಗಳನ್ನು ಸಂಪಾದಿಸಿದೆನು ನಾನು ಯಮಪುರಿಗೆ ಹೋಗಲು ಯಮಧರ್ಮನು ಚಿತ್ರಗುಪ್ತರನ್ನು ಕರೆದು ನನ್ನ ಪುಣ್ಯಪಾಪಗಳನ್ನು ಎಷ್ಟೆಂದು ಕೇಳಿದನು ಆಗ ಚಿತ್ರಗುಪ್ತರು ಯಮನಿಗೆ ನನ್ನ ವಿಷಯವನ್ನು ಹೇಳಿದರು ನನ್ನ ಅಲ್ಪಪುಣ್ಯದಿಂದ ನಿಮ್ಮ ಪಾದದರ್ಶನವಾಯಿತು ನನ್ನನ್ನು ರಕ್ಷಿಸಿರಿ ಭಸ್ಮಲೇಪನ ವಿಧಿಯೇನು ? ಮಂತ್ರ ಯಾವುದು ? ವಿಸ್ತಾರವಾಗಿ ನಿರೂಪಿಸಿರೆಂದನು.

ಆಗ ವಾಮದೇವನು ಹೇಳತೊಡಗಿದನು—ಪೂರ್ವದಲ್ಲಿ ಮಂದರ ಗಿರಿಯಲ್ಲಿ ಶಂಕರನು ತನ್ನ ಕಿಂಕರರಾದ ಕೋಟಿ ರುದ್ರಗಣಗಳಿಂದ ಕೂಡಿದವನಾಗಿ ಸಭೆಯನ್ನು ಮಾಡಿ ಕುಳಿತಿದ್ದನು. ಮೂವತ್ತುಮೂರು ಕೋಟಿ ದೇವತೆಗಳೊಡನೆ ದೇವೇಂದ್ರನು ದರ್ಶನಕ್ಕೆ ಬಂದನು. ವಾಯು, ಅಗ್ನಿ, ವರುಣ, ಕುಬೇರರೂ ಬಂದರು. ಗಂಧರ್ವ ಯಕ್ಷ ಚಿತ್ರಸೇನರೂ ಖೇಚರರೂ ಪನ್ನಗಳೂ ವಿದ್ಯಾಧರ ಕಿಂಪುರುಷ ಸಿದ್ಧ ಸಾಧ್ಯರೂ ಗುಹ

ಕರೂ ಬೃಹಸ್ಪತಿಯೂ ವಸಿಷ್ಠ ನಾರದರೂ ಆರ್ಯಮಾದಿ ಪಿತೃಗಣಗಳೂ ಈಶ್ವರ ಸಭೆಗೆ ಬಂದರು ದಕ್ಷಬ್ರಹ್ಮನೂ ಸರ್ವಋಷಿಗಳೂ ಊರ್ವಶಿ ಮೊದಲಾದ ಅಪ್ಸರಸ್ತ್ರೀಯರೂ ಚಂಡಿಕಾದಿ ಶಕ್ತಿದೇವತೆಗಳೂ ದ್ವಾದಶಾದಿತ್ಯರೂ ಅಷ್ಟವಸುಗಳೂ ಅಲ್ಲಿ ಬಂದರು ಅಶ್ವಿನೀ ದೇವತೆಗಳೂ ವಿಶ್ವೇದೇವತೆಗಳೂ ಬಂದರು ಭೂತಪತಿಯಾದ ಮಹಾ ಕಾಳನೂ ನಂದಿಕೇಶ್ವರನೂ ದಂಡಪಾಣಿಗಳಾಗಿ ನಿಂತಿದ್ದರು ವೀರಭದ್ರ, ಸಂಕರ್ಣ, ಮಣಿಭದ್ರ, ಷಟ್ಕರ್ಣ, ವೃಕೋದರ, ದೇವಮಾನ್ಯ, ಕುಂಡೋದರ, ಕುಂಭೋದರ, ಮಂಡೋದರ, ವಿಕಟಕರ್ಣ, ಕರ್ಣಧಾರ ಧಾರಕೇತವೆಂಬ ಮಹಾ ವೀರರೂ, ಭೂತನಾಥನಾದ ಭೃಂಗಿರಿಟಿಯೂ, ನಾನಾ ರೂಪಿಗಳಾದ ಗಣಗಳೂ, ನಾನಾ ಅವಯವಗಳುಳ್ಳ ಶಿವದೂತರೂ ಬಂದರು ರುದ್ರಗಣಗಳ ರೂಪಗಳನ್ನು ವಿಸ್ತಾರವಾಗಿ ಹೇಳುವೆನು ಕೇಳು—ಕೆಲವರು ಕೃಷ್ಣವರ್ಣದವರಾಗಿಯೂ, ಕೆಲವರು ಬಿಳುಪಾಗಿಯೂ, ಕೆಲವರು ಹಳದಿಬಣ್ಣದವರಾಗಿಯೂ ಕೆಲವರು ಧೂಮ್ರವರ್ಣದವರಾಗಿಯೂ ಕೆಲವರು ಹಸುರಾಗಿಯೂ ತಾಮ್ರವರ್ಣದವರಾಗಿಯೂ, ಕೆಲವರು ಚಿನ್ನದಂತೆ ವರ್ಣವುಳ್ಳವರಾಗಿಯೂ ಕೆಲವರು ಲೋಹಿತ ಬಣ್ಣವುಳ್ಳವರಾಗಿಯೂ, ಕೆಲವರು ಚಿತ್ರವಿಚಿತ್ರ ಬಣ್ಣವುಳ್ಳವರಾಗಿಯೂ, ಕೆಲವರು ಕಪ್ಪೆಯಂತೆ ಮುಖವುಳ್ಳವರಾಗಿಯೂ, ನಾನಾ ಆಯುಧಗಳನ್ನೂ ಶಸ್ತ್ರಗಳನ್ನೂ ಧರಿಸಿದವರಾಗಿಯೂ, ನಾನಾ ವಾಹನಗಳಲ್ಲಿ ಕುಳಿತು ನಾನಾ ಅಲಂಕಾರವುಳ್ಳವರಾಗಿಯೂ ಕೆಲವರು ಹುಲಿಯ ಮುಖದವರಾಗಿಯೂ, ಕೆಲವರು ಹಂದಿಯ ಮುಖದವರಾಗಿಯೂ, ಕೆಲವರು ಆನೆಯ ಮುಖದವರಾಗಿಯೂ, ಕೆಲವರು ವಕ್ರಮುಖಿಗಳಾಗಿಯೂ, ಕೆಲವರು ನಾಯಿ, ನರಿ, ಒಂಟೆ, ಶರಭ, ಭೇರುಂಡ, ಬಕ ಸಿಂಹಗಳ ಮುಖಗಳುಳ್ಳವರೂ, ಕೆಲವರು ಒಂದು, ಎರಡು, ನಾಲ್ಕು ಮುಖಗಳುಳ್ಳವರಾಗಿಯೂ, ಅನೇಕ ಭುಜಗಳುಳ್ಳವರಾಗಿಯೂ ಕೆಲವರು ಹೀನಮುಖರಾಗಿಯೂ, ಕೆಲವರು ೧-೨-೪ ಹಸ್ತಗಳುಳ್ಳವರಾಗಿಯೂ, ಕೆಲವರು ಪಾದವಿಲ್ಲದವರಾಗಿಯೂ, ಕೆಲವರು ಬಹುಪಾದಗಳುಳ್ಳವರಾಗಿಯೂ ಕೆಲವರು ಕಿವಿಯಿಲ್ಲದವರಾಗಿಯೂ, ಕೆಲವರು ಬಹಳ ಕಿವಿಗಳುಳ್ಳವರಾಗಿಯೂ, ಒಂದು ನಾಲ್ಕು ಕಣ್ಣುಗಳುಳ್ಳವರಾಗಿಯೂ, ಕೆಲವರು ಸ್ಥೂಲರಾಗಿಯೂ, ಕೆಲವರು ಕುಬ್ಜ

ರಾಗಿಯೂ ಇರುವ ಶಿವಗಣಗಳು ಬಂದರು. ಈ ರೀತಿಯಿಂದ ಪರಶಿವನು ಸಭೆಯನ್ನಲಂಕರಿಸಿದನು.

ಶಂಕರನು ಕುಳಿತಿದ್ದ ಸಿಂಹಾಸನವು ರತ್ನಖಚಿತವಾದ ಏಳು ಪ್ರಭಾವಳಿಗಳುಳ್ಳದಾಗಿ ಇತ್ತು. ಒಂದನೆಯ ಪ್ರಭಾವಳಿಯು ರಕ್ತವರ್ಣವಾಗಿಯೂ ರತ್ನರಂಜಿತವಾಗಿಯೂ ಅಸದೃಶವಾಗಿಯೂ ಇತ್ತು. ೨ ನೇದು ಚಿನ್ನದ ಬಣ್ಣವುಳ್ಳದ್ದಾಗಿಯೂ ರತ್ನಖಚಿತವಾಗಿಯೂ ಇತ್ತು. ೩ ನೇದು ಪ್ರಭಾವಳಿಯು ನೀಲವರ್ಣವಾಗಿಯೂ ರತ್ನಖಚಿತವಾಗಿಯೂ ಅನೇಕ ವಜ್ರಗಳುಳ್ಳದ್ದಾಗಿಯೂ ಇತ್ತು. ೪ ನೇದು ರತ್ನರಂಜಿತ ಕಮಲಗಳುಳ್ಳದ್ದಾಗಿಯೂ ಕೆಂಪಾಗಿಯೂ ಮುಕ್ತಾಹಾರಗಳಿಂದ ಪ್ರಕಾಶಿಸುತ್ತಿತ್ತು. ೫ ನೇದು ವೈಡೂರ್ಯದಿಂದ ಕೆತ್ತಲ್ಪಟ್ಟಿತ್ತು. ೬ ನೇದು ಪುಷ್ಯರಾಗದಿಂದ ಕೆತ್ತಲ್ಪಟ್ಟಿತ್ತು. ೭ ನೇದು ನಾನಾ ಮಣಿಗಳಿಂದ ನಿರ್ಮಿತವಾಗಿ ತ್ರಿಭುವನದಲ್ಲಿ ಅಪೂರ್ವವಾಗಿತ್ತು. ಇಂಥಾ ಸಿಂಹಾಸನದಲ್ಲಿ ತ್ರಿಪುರಾರಿಯು ಕೋಟಿಸೂರ್ಯನಂತೆ ಹೊಳೆಯುತ್ತಿದ್ದನು. ಮಹಾ ಪ್ರಳಯಕಾಲದಲ್ಲಿ ಸಪ್ತಸಮುದ್ರಗಳೂ ಸೇರುವಂತೆ ಈಶ್ವರನು ಹಣೆಗಣ್ಣಿನಲ್ಲಿ ಜ್ವಾಲಾಮಾಲೆಯುಳ್ಳವನಾಗಿಯೂ ಸಿಂಗರಿಸಲ್ಪಟ್ಟಿತಿರುವ ಜಟಾ ಮಂಡಲಗಳುಳ್ಳವನಾಗಿಯೂ ಚಂದ್ರನಂತೆ ಷೋಡಶಕಲಾಯುಕ್ತನಾಗಿಯೂ ಕಿವಿಗಳಲ್ಲಿ ತಕ್ಷಕ ವಾಸುಕಿಗಳನ್ನು ಧರಿಸಿದವನಾಗಿಯೂ ರತ್ನದಂತಿರುವ ತೇಜಸುಳ್ಳ ನೇತ್ರಗಳುಳ್ಳವನಾಗಿಯೂ ನೀಲಕಂಠನಾಗಿಯೂ ನಾಗಹಾರವನ್ನು ಧರಿಸಿದವನಾಗಿಯೂ ಸರ್ಪದ ಕಂಕಣ ಮುದ್ರಿಕೆಗಳನ್ನು ಧರಿಸಿದವನಾಗಿಯೂ, ಸರ್ಪದ ಡಾಬುಳ್ಳವನಾಗಿಯೂ ವ್ಯಾಘ್ರಚರ್ಮಧಾರಿಯಾಗಿಯೂ, ಕನ್ನಡಿಯಂತೆ ಹೊಳೆಯುವ ದೇಹವುಳ್ಳವನಾಗಿಯೂ, ಕಾರ್ಕೋಟಕ ಪದ್ಮಗಳೆಂಬ ಸರ್ಪಗಳ ಕಾಲ್ಕಡಗಗಳುಳ್ಳವನಾಗಿಯೂ ಹುಣ್ಣಿಮೆಯ ಚಂದ್ರನಂತೆ ಹೊಳೆಯುತ್ತಿದ್ದನು. ಕರ್ಪೂರಗೌರನಾದ ಪಶುಪತಿಯು ತಲೆಯಲ್ಲಿ ರತ್ನಖಚಿತವಾದ ಕಿರೀಟಗಳುಳ್ಳವನಾಗಿಯೂ ನಾಗೇಂದ್ರನ ಬಾಹುಪುರಿ (ಬಾಜೂಬಂದು) ಉಳ್ಳವನಾಗಿಯೂ, ಪ್ರಕಾಶವಾದ ಕುಂಡಲಗಳುಳ್ಳವನಾಗಿಯೂ ಕಂಠದಲ್ಲಿ ಸರ್ಪಹಾರವುಳ್ಳವನಾಗಿಯೂ, ಸರ್ವಾಂಗದಲ್ಲಿ ಸರ್ಪಾಲಂಕಾರವುಳ್ಳವನಾಗಿಯೂ ಇದ್ದನು. ಶುಭ್ರವಾದ ಕಮಲ

ನಾಗಿಯೂ ಇದ್ದನು. ಪಂಚವಕ್ತ್ರನಾದ ಪರಮೇಶ್ವರನ ಮುಖಗಳೂ ಅಲಂಕೃತವಾಗಿದ್ದುವು. ಕಲಂಕವಿಲ್ಲದ ಚಂದ್ರನಂತೆಯೂ ಹಾಲು ನೊರೆಯಂತೆಯೂ ಇರುವ ಭಸ್ಮದಿಂದ ಭೂಷಿತನಾಗಿಯೂ, ಸೂರ್ಯಚಂದ್ರಾಗ್ನಿ ಸದೃಶವಾದ ನೇತ್ರಗಳುಳ್ಳವನಾಗಿಯೂ ಸರ್ಪವೇ ಉಡಿದಾರವುಳ್ಳವನಾಗಿಯೂ ಇರುವ ಸರ್ವೇಶ್ವರನು ಕಪಾಲದಲ್ಲಿ ಶುಭ್ರವಾದ ತಿಲಕವನ್ನು ಧರಿಸಿ ಹಾಸ್ಯವದನನಾಗಿಯೂ ಇದ್ದನು ಎರಡನೆಯ ಮುಖವು ಉತ್ತರ ದಿಕ್ಕಿಗೆ ಎದುರಾಗಿ ಶೋಭಿಸುತ್ತಿದ್ದುದು. ದಾಳಿಂಬೇ ಹೂವಿನಂತೆಯೂ, ಪ್ರಾತಃಕಾಲದ ರವಿಮಂಡಲದಂತೆಯೂ ಮುಖಕಮಲವು ಶೋಭಿಸುತಿತ್ತು. ಮೂರನೇ ಮುಖವು ಪೂರ್ವಕ್ಕೆ ಎದುರಾಗಿತ್ತು ತಲೆಯಲ್ಲಿ ಗಂಗೆಯನ್ನೂ ಅರ್ಧ ಚಂದ್ರನನ್ನೂ ಧರಿಸಿ ಜಟೆಯನ್ನು ಧರಿಸಿದ್ದನು ನಾಲ್ಕನೇ ಮುಖವು ದಕ್ಷಿಣಾಭಿಮುಖವಾಗಿತ್ತು ನೀಲವರ್ಣವಾದ ಭಯಂಕರ ದಾಡೆಯುಳ್ಳದ್ದಾಗಿತ್ತು ಮುಖದಿಂದ ಜ್ವಾಲೆಯು ಹೊರಡುತ್ತಿತ್ತು ರುಂಡ ಮಾಲೆಯನ್ನು ಧರಿಸಿ ಶಂಕರನು ಸರ್ಪವೇಷ್ಟಿತನಾಗಿದ್ದನು. ಐದನೇ ಮುಖವು ವ್ಯಕ್ತಾವ್ಯಕ್ತವಾಗಿ ಕಾಣುತ್ತಿತ್ತು ಇದು ಸಾಕಾರ ನಿರಾಕಾರವಾಗಿಯೂ, ಸಗುಣ ನಿರ್ಗುಣವಾಗಿಯೂ, ಸಲಕ್ಷಣವಾಗಿಯೂ, ನಿರ್ಲಕ್ಷಣವಾಗಿಯೂ ಶೋಭಿಸುತ್ತಿತ್ತು ಶಂಕರನು ಪಂಚ ಮುಖಗಳುಳ್ಳವನಾಗಿಯೂ ನೀಲವಾದ ಸರ್ಪಮಾಲೆಯನ್ನು ಧರಿಸಿದವನಾಗಿಯೂ, ಸರಸಿಜದಂತಿರುವ ಚರಣಗಳುಳ್ಳವನಾಗಿಯೂ ಹೊಳೆಯುತ್ತಿದ್ದನು ಚಂದ್ರನಂತೆ ಉಗುರುಗಳುಳ್ಳವನಾಗಿಯೂ ಸರ್ಪಗಳ ಪಾದುಕೆಗಳುಳ್ಳವನಾಗಿಯೂ, ಹುಲಿದೊಗಲನ್ನು ಧರಿಸಿದವನಾಗಿಯೂ ಸರ್ವಾಂಗದಲ್ಲಿಯೂ ಸರ್ಪಗಳನ್ನು ಧರಿಸಿದವನಾಗಿಯೂ, ನಾಗಬಂಧವುಳ್ಳವನಾಗಿಯೂ, ಹೊಕ್ಕುಳಲ್ಲಿ ಚಂದ್ರಾವಳಿಗಳುಳ್ಳವನಾಗಿಯೂ, ಹೃದಯದಲ್ಲಿ ರೋಮಗಳದ್ದವನಾಗಿಯೂ, ಭಕ್ತಜನಮನೋಹರನಾಗಿಯೂ, ಸಂಕಟಹರನಾಗಿಯೂ ಇರುವ ಶಂಕರನು ಶಂಕರಿಯೊಡನೆ ಕಿಂಕರವಂದಿತನಾಗಿ ಸಿಂಹಪೀಠದಲ್ಲಿ ವಿರಾಜಿಸುತ್ತಿದ್ದನು ಸರ್ವೇಶ್ವರಿಯಾದ ಪಾರ್ವತಿಯು ಮನೋಹರವಾದ ನಾನಾವಿಧಾಲಂಕಾರಯುಕ್ತಳಾಗಿದ್ದಳು ಚಿನ್ನದ ಸಂಪಿಗೆಯನ್ನೂ ಗೋರಂಟಿಯ ಹೂವನ್ನೂ, ಮುತ್ತಿನ ಸರಗಳನ್ನೂ ಧರಿಸಿ ರತ್ನಖಚಿತವಾದ ಕಿರೀಟವನ್ನು ಧರಿಸಿ, ನಾನಾ ವಿಧ ಕುಸುಮಗಳಿಂದ ಅಲಂ

ಕೃತಳಾಗಿದ್ದಳು. ಈಕೆಯು ತಲೆಯಲ್ಲಿರುವ ಹೂವುಗಳ ವಾಸನೆಗೆ ಭ್ರಮರಗಳು ಮುತ್ತುತ್ತಿದ್ದುವು ಮುತ್ತಿನ ಸರಗಳು ಕಿರೀಟದ ಹತ್ತಿರ ರತ್ನಖಚಿತವಾಗಿ ಹೊಳೆಯುತ್ತಿದ್ದುವು. ಪಾರ್ವತಿಯ ಮೂಗು ಸಂಪಿಗೆಯಂತಿತ್ತು. ಮುತ್ತುರತ್ನಗಳಿಂದ ಕೂಡಿದ ಮೂಗುತಿಯನ್ನು ಧರಿಸಿದ್ದಳು. ತುಟಿಗಳು ಹವಳದಂತೆಯೂ ಹಲ್ಲುಗಳು ರತ್ನಗಳಂತೆಯೂ ಹೊಳೆಯುತ್ತಾ ಮಹಾಮಾಯೆಯು ಶೋಭಿಸುತ್ತಿದ್ದಳು ಕಿವಿಯಲ್ಲಿ ಓಲೆಯನ್ನೂ ಕುಚತಟದಲ್ಲಿ ಪೀತವರ್ಣದ ಕುಪ್ಪುಸವನ್ನೂ, ಅನೇಕ ರತ್ನಹಾರಗಳನ್ನೂ ಧರಿಸಿದ್ದಳು. ಕೃಷ್ಣಸರ್ಪವು ಮನೋಹರವಾದ ಸ್ತನ್ಯವನ್ನು ಪಾನಮಾಡುತ್ತಿತ್ತು. ಈ ಸರ್ಪವು ಎಷ್ಟು ಭಾಗ್ಯಶಾಲಿಯಾದುದು ದಾಳಿಂಬೆಯ ಹೂವಿನಂತಿರುವ ಕೆಂಪುಸೀರೆಯನ್ನುಟ್ಟು ಕುಂಕುಮವನ್ನು ಬಿಂಕದಿಂದಿಟ್ಟು ಮಾತೆಯಾದ ಗಿರಿಜೆಯು ಪರಿರಂಜಿಸುತ್ತಿದ್ದಳು ಬಾಹುದಂಡವು ಮನೋಹರವಾಗಿತ್ತು ಕೈಗಳಲ್ಲಿ ಕಂಕಣಗಳನ್ನೂ, ಬೆರಳುಗಳಲ್ಲಿ ಮುದ್ರಿಕೆಗಳನ್ನೂ ಮುತ್ತಿನ ಕಂಚುಕವನ್ನೂ ಕಾಲುಕಡಗಗಳನ್ನೂ ಧರಿಸಿದ್ದಳು ಈರೀತಿಯಿಂದಲಂಕೃತಳಾದ ಗಿರಿಜೆಯ ರೂಪವನ್ನು ಎಲ್ಲರೂ ಧ್ಯಾನಿಸಬೇಕೆಂದು ದೇವತೆಗಳು ಹೇಳುವರು. ಹಣೆಯಲ್ಲಿರುವ ತಿಲಕವೂ ತ್ರಿಪುಂಡ್ರವೂ ಅಷ್ಟಮಿಯ ಚಂದಿರನಂತೆಯೂ ಮುತ್ತಿನಂತೆಯೂ ಅಂದವಾಗಿತ್ತು ಜಗನ್ಮಾತೆಯ ನಾನಾಲಂಕಾರಗಳನ್ನು ವರ್ಣಿಸಲಳವಲ್ಲ ಶಂಭುವು ತೆತ್ತೀಸಕೋಟಿ ದೇವತೆಗಳೊಡಗೂಡಿಬಂದ ದೇವೇಂದ್ರನನ್ನು ಕಂಡನು. ಆ ಸಭೆಗೆ ದೇವರ್ಷಿಗಳೂ ಸನಕಸನಂದನಾದಿಗಳೂ ಬಂದರು

ಸನಕಾದಿಗಳು ಶಂಕರನ ಚರಣಸರಸಿಜಗಳಗಳಲ್ಲಿ ವಂದಿಸಿದರು ಜಯಮುರಾರಿಯೇ! ಜಯವಿಶ್ವಕರ್ತನೇ, ತ್ರಿಭುವನಗಳಿಗೂ ಪುರುಷಾರ್ಥಗಳನ್ನು ಕೊಡತಕ್ಕವನೇ! ನಮಗೆ ಸರ್ವಧರ್ಮಗಳನ್ನೂ ನಿರೂಪಿಸಿದಿರಿ ಇದರಿಂದ ಸಂಸಾರವನ್ನು ದಾಟುವೆವು ಪಾಪಗಳು ಪರಿಹರಿಸುವುವು ಚತುರ್ವಿಧ ಪುರುಷಾರ್ಥಗಳು ಆಶ್ರಮಗಳಿಗೆ ವ್ಯವುಗಳಾಗಿವೆ ಆದುದರಿಂದ ನಮಗೆ ಮುಕ್ತಿಯನ್ನು ಕೊಡುವವನಾಗು ಪುಣ್ಯಸಂಪಾದನೆಯು ಎಲ್ಲರಿಗೂ ಅಸಾಧ್ಯವು ಆದುದರಿಂದ ಸರ್ವರಿಗೂ ಸಾಧಾರಣವಾದ ಧರ್ಮವನ್ನು ನಿರೂಪಿಸಿರಿ ಎಂದು ಬೇಡಿಕೊಂಡರು.

ಆಗ ಈಶ್ವರನು ಸನತ್ಕುಮಾರನಿಗೆ ತಾತ್ಕಾಲಿಕ ಧರ್ಮವನ್ನು ಹೇಳ ತೊಡಗಿದನು ಎಲ್ಲರೂ ಕೇಳಿರಿ ವೇದಶಾಸ್ತ್ರಸಮ್ಮತವಾದ, ಅನಂತ ಪುಣ್ಯಕರವಾದ, ಭಸ್ಮತ್ರಿಪುಂಡ್ರವಿಧಿಯನ್ನು ಹೇಳುವೆನು ಎಂದನು

ಆಗ ಸನತ್ಕುಮಾರನು ಸ್ವಾಮಿಾ ! ಇದರ ವಿಧಿಯೇನು ? ಮನುಷ್ಯನು ಭಸ್ಮವನ್ನು ಎಲ್ಲಿ ಲೇಪಿಸಬೇಕು ಇದಕ್ಕೆ ದೇವತೆ ಯಾರು ? ಕರ್ತೃಗಳ್ಯಾರು ? ಪ್ರಮಾಣವೇನು ? ಮಂತ್ರವು ಯಾವುದು ? ಇದನ್ನು ವಿಸ್ತಾರವಾಗಿ ಹೇಳಬೇಕೆಂದು ವಂದಿಸಿದನು

ಆಗ ಶಂಕರನು ಹೇಳುವನು ಸನತ್ಕುಮಾರನೇ ಕೇಳು— ಗೋಮಯದಿಂದ ದೇವಾಗ್ನಿಯಲ್ಲಿ ಭಸ್ಮವನ್ನು ಮಾಡಬೇಕು ಪೂರ್ವದಲ್ಲಿ ಯಜ್ಞಮಾಡಿದ ಸ್ಥಳದಲ್ಲಿಮಾಡಿದ ಭಸ್ಮವನ್ನು ಲೇಪಿಸಿದರೆ ಬಹುಪುಣ್ಯವುಂಟು ಸದ್ಯೋಜಾತಾದಿ ಮಂತ್ರಗಳನ್ನು ಹೇಳುತ್ತಾ ಭಸ್ಮವನ್ನು ಕೈಯಲ್ಲಿ ತೆಗೆದುಕೊಂಡು ಅಭಿಮಂತ್ರಿಸಬೇಕು ಅಗ್ನಿರಿತಿಭಸ್ಮ ಎಂದು ಮಂತ್ರಿಸಬೇಕು ಮಾನಸ್ತೋಕ ಮಂತ್ರದಿಂದ ಅಂಗುಷ್ಟದಿಂದ ಮಂತ್ರಿಸಿ ತಲೆಯಲ್ಲಿ ಧರಿಸಬೇಕು ತ್ರ್ಯಾಯುಷಮಂತ್ರದಿಂದ ಲಲಾಟ ಭುಜಗಳಲ್ಲಿ ಲೇಪಿಸಬೇಕು ಮಧ್ಯಮ ಅನಾಮಿಕಾಂಗುಲಿಗಳಿಂದ ಲಲಾಟದಲ್ಲಿ ಪ್ರಥಮರೇಖೆಯನ್ನು ಲೇಪಿಸಬೇಕು ಅಂಗುಷ್ಠದಿಂದ ಪ್ರತಿಲೋಮವಾಗಿ ಮಧ್ಯರೇಖೆಯನ್ನು ಎಳೆಯಬೇಕು. ತ್ರಿಪುಂಡ್ರವನ್ನು ಈ ರೀತಿಯಿಂದ ಮೂರುರೇಖೆಗಳನ್ನು ಎಳೆಯಬೇಕು ಕಣ್ಣುಹುಬ್ಬಿಗೆ ಸರಿಯಾಗಿ ರೇಖೆಯನ್ನೆಳೆಯಬೇಕು ಒಂದೊಂದು ರೇಖೆಗೆ ನವದೇವತೆಗಳು ಪ್ರಸಿದ್ಧರಾಗಿರುವರು ೧ನೇ ರೇಖೆಯು ಗಾರ್ಹಪತ್ಯವು. ಇದಕ್ಕೆ ಭೂಃ ಆತ್ಮನು. ರಜೋಗುಣವು. ಋಗ್ವೇದಸ್ವರೂಪವು. ಕ್ರಿಯಾಶಕ್ತಿಯು. ಪ್ರಾತಃಸವನವು. ಮಹಾದೇವನೇ ದೇವತೆಯು. ಇದು ಪ್ರಥಮರೇಖೆಯ ಲಕ್ಷಣವು. ೨ನೇ ರೇಖೆಗೆ ಉಕಾರವು ದಕ್ಷಿಣಾಗ್ನಿಸ್ವರೂಪವು. ನಭಃಸತ್ವವು. ಯಜುರ್ವೇದವು. ಮಾಧ್ಯಂದಿನಸವನವು. ಇಚ್ಛಾಶಕ್ತಿಯು. ಅಂತರಾತ್ಮನಾದ ಮಹೇಶ್ವರನೇ ದೇವತೆಯು. ಇದು ೨ನೇ ರೇಖೆಯ ಲಕ್ಷಣವು ೩ನೇ ರೇಖೆಗೆ ಮಕಾರವು. ಆಹವನೀಯಾಗ್ನಿಸ್ವರೂಪವು. ಪರಮಾತ್ಮ ಪ್ರಕೃತಿಯು ಜ್ಞಾನಶಕ್ತಿಯು. ತೃತೀ

ಯಸವನವು. ಇಂದ್ರನೇ ದೇವತೆಯು ಶಿವಶಕ್ತಿಯು ಹೀಗೆಂದು ತಿಳಿದು ವಂದಿಸಿ ತ್ರಿಪುಂಡ್ರವನ್ನು ಧರಿಸಬೇಕು. ಇದು ಮಹೇಶ್ವರನಿಗೆ ಪ್ರೀತಿಯು ಎಂದು ವೇದಶಾಸ್ತ್ರಗಳು ಹೇಳುವುವು ಬ್ರಹ್ಮಚಾರಿಯು ಗೃಹಸ್ಥನೂ ವಾನಪ್ರಸ್ಥನೂ ಯತಿಯೂ ಎಲ್ಲರೂ ಭಸ್ಮ ತ್ರಿಪುಂಡ್ರವನ್ನು ಧರಿಸಬೇಕು. ಮುಕ್ತಿಯನ್ನು ಬಯಸುವವನಿಗೆ ಜನ್ಮ ಉಂಟಾಗುವುದಿಲ್ಲ. ಬಯಸಿದ ಇಷ್ಟಾರ್ಥಗಳು ಸಿದ್ಧಿಸುವುವು ಕ್ಷತ್ರಿಯ ವೈಶ್ಯ, ಶೂದ್ರರೂ ಕೂಡ ಭಸ್ಮವನ್ನು ಲೇಪಿಸಿದರೆ ಗೋಹತ್ಯ, ವೀರಹತ್ಯ, ಆತ್ಮಹತ್ಯಾದಿ ಪಾಪಗಳು ಪರಿಹಾರವಾಗಿ ಶುದ್ಧನಾಗುವನು ಮಹಾಪಾತಕಿಯೂ ಉಪ ಪಾತಕಿಯೂ ಭಸ್ಮವನ್ನು ಲೇಪಿಸಿದರೆ ಪುಣ್ಯವಂತನಾಗುವನು ವಿಧಿ ಪೂರ್ವಕ ಮಂತ್ರದಿಂದಲೂ ಭಕ್ತಿಯಿಂದಲೂ ಭಸ್ಮವನ್ನು ಲೇಪಿಸಿದವನು ದೇವಲೋಕದಲ್ಲಿಯೂ ವಂದ್ಯನಾಗುವನು ಭಸ್ಮಮಹಿಮೆಯು ಅಪಾರ ವಾದುದು ಪರದ್ರವ್ಯಾಪಹಾರ, ಪರಸ್ತ್ರೀಗಮನ ಪಾಪಸಂಚಯಗಳನ್ನು ಮಾಡಿದ ವನು ಭಸ್ಮವನ್ನು ಧರಿಸಿದರೆ ಪಾವನನಾಗುವನು ಪರಕ್ಷೇತ್ರವನ್ನು ಅಪಹರಿಸಿದವನೂ, ಪರಪೀಡಕನೂ, ಉದ್ಯಾನವನ್ನು ಮುರಿದವನೂ ಭಸ್ಮಲೇಪನೆಯಿಂದ ಪುನೀತನಾಗುವನು ಮನೆಯನ್ನು ಸುಟ್ಟವನೂ, ಅಸತ್ಯವಾದಿಯೂ, ಚಾಡಿಕಾರನೂ, ವೇದ ವಿಕ್ರಯಕನೂ, ಕೂಟ ಸಾಕ್ಷಿ ಹೇಳಿದವನೂ, ತನ್ನ ವೃತ್ತಿಯನ್ನು ಬಿಟ್ಟವನೂ, ಕಪಟಿಯೂ, ಸದಾ ಭೋಗಿಯೂ ಭಸ್ಮವನ್ನು ಧರಿಸಿದರೆ ಪುನೀತನಾಗುವನು ಗೋವು, ಭೂಮಿ, ಚಿನ್ನ, ಎಮ್ಮೆ, ಎಳ್ಳು, ಕಂಬಳಿವಸ್ತ್ರ, ಅನ್ನ ಇವುಗಳ ದಾನವನ್ನು ಗ್ರಹಿಸಿದರೆ ಭಸ್ಮಧಾರಣೆಯಿಂದ ಪುನೀತನಾಗುವನು ನೀಚ ನಿಂದ ಧಾನ್ಯ, ಜಲ, ದಾನಗಳನ್ನು ಸ್ವೀಕರಿಸಿದರೆ ಭಸ್ಮಲೇಪನೆಯಿಂದ ಪುನೀತನಾಗುವನು. ಕನ್ಯಾ, ವಿಧವೆ ಅನ್ಯಸ್ತ್ರೀಯರ ಸಂಗ ಮಾಡಿದರೂ, ಅನುತಪ್ತನಾಗಿ ಭಸ್ಮವನ್ನು ಲೇಪಿಸಿದರೆ ಪುನೀತನಾಗುವನು ದಾಸಿ, ಸೂಳೆ, ರಜಸ್ವಲೆ, ಲಗ್ನದ ಮೊದಲೇ ರಜಸ್ವಲೆಯಾದವಳು ಇವರ ಸಂಗಮಾಡಿದರೂ ಭಸ್ಮಲೇಪನೆಯಿಂದ ಪುನೀತನಾಗುವನು. ರಸ, ಮಾಂಸ, ಉಪ್ಪುಗಳನ್ನು ವಿಕ್ರಯಿಸಿದವನೂ ತ್ರಿಪುಂಡ್ರಧಾರಣೆಯಿಂದ ಪುನೀತನಾಗುವನು. ತಿಳಿದಾಗಲೀ, ತಿಳಿಯದೇ ಆಗಲೀ ಪಾಪಗಳನ್ನು ಮಾಡಿದವನು ಭಸ್ಮಲೇಪನೆಯಿಂದ ಧನ್ಯನಾಗುವನು. ಭಸ್ಮಲೇಪನೆಯಿಂದ

ಪಾಪಗಳೆಲ್ಲವೂ ಪರಿಹಾರವಾಗುತ್ತವು ಶಿವನಿಂದಕನು ನರಕ ದುಃಖ ವನ್ನನುಭವಿಸುವನು ಶಿವಗುರ್ವಾಜ್ಞಾಪರಿಹಾರಮಾಡಿದವನೂ ಭಕ್ತರನ್ನು ನಿಂದಿಸಿದವನೂ ಇವರಿಗೆ ಪ್ರಾಯಶ್ಚಿತ್ತವಿಲ್ಲ ಯಾರ ಕಂಠದಲ್ಲಿ ರುದ್ರಾಕ್ಷ ಮಾಲೆಯೂ ಹಣೆಯಲ್ಲಿ ತ್ರಿಪುಂಡ್ರವೂ ಇರುವುದೋ ಅವನು ಯಾವ ಜಾತಿಯವನಾದರೂ ಕೇವಲ ಧನ್ಯನಾಗುವನು ಭಸ್ಮಲೇಪನೆಯಿಂದ ಸರ್ವ ತೀರ್ಥಗಳಲ್ಲಿಯೂ ಸ್ನಾನಮಾಡಿದ ಪುಣ್ಯವು ಬರುವುದು ಭಸ್ಮ ಲೇಪನೆಯಿಂದ ಕೋಟಿ ಪಂಚಾಕ್ಷರೀಜಪವನ್ನು ಮಾಡಿದ ಪುಣ್ಯವುಂಟಾ ಗುವುದು ಭಸ್ಮಲೇಪನೆಯಿಂದ ಇಹದಲ್ಲಿ ಸಕಲ ಸುಖಗಳನ್ನೂ ಹೊಂದಿ ಶತಾಯುಷಿಯಾಗಿಯೂ ನಿರೋಗಿಯಾಗಿಯೂ, ಸುಖವಾಗಿರುವನು ಪೂರ್ವದ ಸಾವಿರ ಜನ್ಮಗಳ ಪಾಪಗಳೂ ಇಪ್ಪತ್ತೊಂದು ತಲೆಗಳಲ್ಲಿ ಮಾಡಿ ದ ಪಾಪಗಳೂ ಹೋಗುವುವು ಭಸ್ಮಲೇಪನದಿಂದ ಅಷ್ಟೈಶ್ವರ್ಯವೂ ದಿವ್ಯ ಶರೀರವೂ, ಜ್ಞಾನವೂ ಕಡೆಯಲ್ಲಿ ಮುಕ್ತಿಯೂ ಉಂಟಾಗುವುದು. ದಿವ್ಯವಿಮಾನದಲ್ಲಿ ಇವನನ್ನು ಕುಳ್ಳಿರಿಸಿ ದಿವ್ಯಸ್ತ್ರೀಯರು ಸೇವಿಸುತ್ತಿ ರಲು ಭಸ್ಮಲೇಪಿತನನ್ನು ಸ್ವರ್ಗಕ್ಕೆ ಕರೆದೊಯ್ಯುವರು ವಿದ್ಯಾಧರರೂ ಸಿದ್ಧರೂ ಗಂಧರ್ವರೂ ಮುಂತಾದ ದೇವಗಣಗಳೂ ಇಂದ್ರಾದಿ ಲೋಕ ಪಾಲರೂ ವಂದಿಸುವರು ಈತನು ಬಹುಕಾಲ ಸಂತೋಷದಿಂದ ಸ್ವರ್ಗ ದಲ್ಲಿದ್ದು ವೈಕುಂಠಕ್ಕೆ ಹೋಗಿ ವಿಷ್ಣುಲೋಕದಲ್ಲಿ ಮೂರು ಬ್ರಹ್ಮಕಲ್ಪ ಗಳಿದ್ದು ಬಳಿಕ ಕೈಲಾಸಕ್ಕೆ ಹೋಗಿ ಬಹುಕಾಲ ಸುಖವಾಗಿರುವನು. ಈತನಿಗೆ ಶಿವಸಾಯುಜ್ಯವುಂಟಾಗುವುದು ಇದರಲ್ಲಿ ಸಂಶಯವಿಲ್ಲ. ಭಸ್ಮ ಲೇಪನೆಯಿಂದ ಪುರುಷಾರ್ಥಗಳೂ ಸಿದ್ಧಿಸುವುವು ಇದು ಶಾಸ್ತ್ರಸಿದ್ಧವು ಎಂದು ಶಂಕರನು ಸನತ್ಕುಮಾರಾದಿಗಳಿಗೆ ನಿರೂಪಿಸಿ ಕೈಲಾಸಕ್ಕೆ ಹೋದನು. ಸನತ್ಕುಮಾರನು ಬ್ರಹ್ಮಲೋಕಕ್ಕೆ ಹೋದನು ಎಂದು ವಾಮದೇವನು ಬ್ರಹ್ಮರಾಕ್ಷಸನಿಗೆ ಹೇಳಿದನು. ಆಗ ಆತನು ವಾಮದೇವ ರನ್ನು ವಂದಿಸಿದನು.

ವಾಮದೇವನು ಬ್ರಹ್ಮರಾಕ್ಷಸನೇ ಕೇಳು—ಭಸ್ಮ ಮಹಿಮೆಯು ಈರೀತಿಯಾಗಿರುವುದು ನನ್ನ ದೇಹದಲ್ಲಿದ್ದ ಭಸ್ಮವು ನಿನಗೆ ತಗಲಿದುದ ರಿಂದ ನಿನಗೆ ಜ್ಞಾನವುಂಟಾಯಿತು ಎಂದು ಭಸ್ಮವನ್ನು ಮಂತ್ರಿಸಿ ಆತನಿಗೆ

ಕೊಟ್ಟನು. ಆತನು ಅದನ್ನು ಧರಿಸಲು ದಿವ್ಯದೇಹಿಯಾಗಿ ಆನಂದವುಳ್ಳವ ನಾದನು ಆಗ ಆತನು ವಾಸುದೇವರನ್ನು ವಂದಿಸಿ ಭಕ್ತಿಯಿಂದ ಪ್ರದ ಕ್ಷಿಣ ನಮಸ್ಕಾರ ಮಾಡಿದನು ಬಳಿಕ ದಿವ್ಯವಾದ ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆಹೋದನು ಈ ರೀತಿಯಿಂದ ವಾಮದೇವನು ಅವನಿಗೆ ಪರ ಮಲೋಕವನ್ನು ಕೊಟ್ಟನು. ವಾಮದೇವನು ಮಹಾದೇವನಸ್ವರೂಪನಾಗಿ ಭಕ್ತರಕ್ಷಣೆಗಾಗಿ ಸಂಚರಿಸುತಿರುವನು ಭಸ್ಮಮಹಿಮೆಯು ಬಲು ದೊಡ್ಡದು ಗುರುಹಸ್ತದ ಭಸ್ಮವು ಲೇಪಿಸಲ್ಪಡಲು ಬ್ರಹ್ಮರಾಕ್ಷಸನು ಧನ್ಯನಾದನು ಮಂತ್ರಗಳೆಲ್ಲವೂ ಗುರುವಿಲ್ಲದೆ ಸಾಧ್ಯವಾಗದು ಗುರುವನ್ನು ಬಿಟ್ಟು ಪರತತ್ವವಿಲ್ಲ ಎಂದು ವೇದಶಾಸ್ತ್ರಗಳು ಹೇಳುವುವು ಸೂತರು ಋಷೀಶ್ವರರಿಗೆ ಭಸ್ಮಮಹಿಮೆಯನ್ನು ಹೇಳಿದರೆಂದು ತ್ರಿವಿಕ್ರಮನಿಗೆ ಶ್ರೀಗುರುವು ವಿಸ್ತಾರವಾಗಿ ಹೇಳಿದರು

ಆಗ ತ್ರಿವಿಕ್ರಮನು ಸಂತುಷ್ಟನಾಗಿ ಗುರುಚರಣಗಳಲ್ಲಿ ವಂದಿಸಿ ಸ್ನಾನಕ್ಕೆಹೋದನು ನಾಮಧಾರಕನೇ, ಇದನ್ನು ಭಕ್ತಿಯಿಂದ ಕೇಳು ಎಂದರು, ಎಂದು ಸರಸ್ವತೀಗಂಗಾಧರನು ನಿರೂಪಿಸಿದನೆಂಬಲ್ಲಿಗೆ ಭಸ್ಮ ಮಹಿಮೆಯೂ ಬ್ರಹ್ಮರಾಕ್ಷಸನ ರಕ್ಷಣೆಯೂ ಎಂಬ ೧೯ ನೇ ಅಧ್ಯಾಯವು ಮುಗಿದುದು.

---

## ೨೦ ನೆಯ ಅಧ್ಯಾಯ.

---

ಶ್ರೀಗಣೇಶಾಯನಮಃ || ನಾಮಧಾರಕನು ಸಿದ್ಧರ ಚರಣಂಗಳಿಗೆ ವಂದಿಸಿ ಅಂಜಲಿ ಬದ್ಧನಾಗಿ ಭಕ್ತಿಯಿಂದ ಜಯಸಿದ್ಧಮುನಿಯೇ ! ಭವ ತಾರಕನೇ ಅಜ್ಞಾನಾಂಧಕಾರಕ್ಕೆ ಜ್ಯೋತಿಸ್ವರೂಪನಾದವನೇ, ನಾನು ಅವಿದ್ಯಾಮಾಯೆಯೆಂಬ ಸಾಗರದಲ್ಲಿ ಮುಳುಗಿದ್ದೆನು. ನಿಮ್ಮ ದಯೆ ಯಿಂದ ಉದ್ಧೃತನಾದೆನು. ವಿಶ್ವಪಾಲಕನಾದ ಗುರುನಾಥನೇ ! ನನಗೆ ಸನ್ಮಾರ್ಗವನ್ನು ತೋರಿಸಿರಿ. ಗುರುಚರಿತ್ರೆ ಎಂಬ ಸುಧಾರಸವನ್ನು ನನಗೆ ಪಾನಮಾಡಿಸಿದಿರಿ. ನನ್ನ ಮನಸ್ಸು ಇನ್ನೂ ತೃಪ್ತಿಯಾಗಲಿಲ್ಲ. ನನ್ನ ತೃಷೆಯು ಅಧಿಕವಾಗಿದೆ. ಹಿಂದಿನ ಕಥೆಯಲ್ಲಿ ಪತಿತನಿಗಾಗಿ ಗುರು

ಗಳು ಹೇಳಿದ ಚತುರ್ವೇದದ ಲಕ್ಷಣಗಳನ್ನು ನೀವು ಹೇಳಿದಿರಿ. ತ್ರಿವಿಕ್ರಮಮುನಿಗೆ ಜ್ಞಾನಪ್ರಕಾಶವಾಯಿತು. ಮುಂಗಥೆಯನ್ನು ನಿರೂಪಿಸಿರಿ ಎಂದು ಚಂದದಿಂದ ವಂದಿಸಿದನು.

ಬಳಿಕ ಸಿದ್ಧರು ಬಹ್ವಾದರದಿಂದ ಎಲೈ ಶಿಷ್ಯನೇ, ನೀನು ಧನ್ಯನು ಎಂದು ತಬ್ಬಿಕೊಂಡು ಸಮಾಧಾನ ಮಾಡಿ ಇನ್ನು ನಿನ್ನ ಇಷ್ಟಗಳೆಲ್ಲವೂ ಸಿದ್ಧಿಸಿದುವು. ನಿನಗೆ ಗುರುಕೃಪೆಯುಂಟಾಯಿತು ನಿನ್ನ ವಚನವು ಧನ್ಯವು ನೀನು ಭವಾರ್ಣವವನ್ನು ದಾಟಿದೆ ನಿನ್ನ ಮನಸ್ಸು ಗುರು ಚರಣದಲ್ಲಿ ರತವಾಗಿದೆ ಗುರುಮಹಿಮೆಯು ಪ್ರಸಿದ್ಧವಾಗಿರುವುದು ಒಂದೊಂದು ಮಹಿಮೆಯನ್ನೂ ವಿಸ್ತಾರವಾಗಿ ಹೇಳಲು ಸಾಧ್ಯವಿಲ್ಲ. ಸಂಕ್ಷೇಪದಿಂದ ಹೇಳುವೆನು ಕೇಳು—

ಶ್ರೀಗುರುವು ಗಾಣಗಾಪುರದಲ್ಲಿರಲು ಇವರ ಮಹಿಮೆಯು ನಾಲ್ಕು ರಾಷ್ಟ್ರಗಳಲ್ಲಿಯೂ ಹರಡಿತು ಅನೇಕರು ಗುರುದರ್ಶನಕ್ಕೆ ಬರುತ್ತಿದ್ದರು ಗುರುಮಹಿಮೆಯನ್ನು ವರ್ಣಿಸಲು ಯಾರು ಶಕ್ತರು ? ಇವರು ನರದೇಹವನ್ನು ಧರಿಸಿ ಭೂಮಿಯಲ್ಲಿ ಚಾರಿತ್ರ್ಯವನ್ನು ಹರಡಿದರು ಅನೇಕ ಭಕ್ತರು ಭಕ್ತಿಯಿಂದ ಗುರುದರ್ಶನಕ್ಕೆ ಬರುತ್ತಿದ್ದರು ದರ್ಶನ ಮಾತ್ರದಿಂದ ಸಕಲೇಷ್ಟಗಳನ್ನೂ ಹೊಂದುತ್ತಿದ್ದರು ನಿರ್ಧನನು ಧನಿಕನಾಗುತ್ತಿದ್ದನು ವಂಧ್ಯೆಯು ಪುತ್ರರನ್ನು ಪಡೆಯುತ್ತಿದ್ದಳು ಕುಷ್ಠರೋಗಿಯು ಚಿನ್ನದಂತೆ ದೇಹವುಳ್ಳವನಾಗುವನು ಕುರುಡನು ಕಣ್ಣುಳ್ಳವನಾದನು ಕಿವುಡನ ಕಿವಿಯು ಕೇಳಿಸುವುದು ಗುರುದರ್ಶನದಿಂದ ಅಪಸ್ಮಾರಾದಿ ರೋಗಗಳು ನಾಶವಾಗುತ್ತಿದ್ದುವು ಗುರುಕೃಪೆಯಿಂದ ಸಕಲೇಷ್ಟಗಳೂ ಉಂಟಾಗುವುವು ಮಾಹುರವೆಂಬ ನಗರದಲ್ಲಿ ಗೋಪೀನಾಥನೆಂಬ ಧನಿಕನಾದ ವಿಪ್ರನಿದ್ದನು ಇವನಿಗೆ ಎಷ್ಟು ಮಕ್ಕಳಾದರೂ ದಕ್ಕದೇ ಪಕ್ಕನೆ ಸಾಯುತ್ತಿದ್ದುವು ಈತನು ಸತಿಯೊಡನೆ ದತ್ತಾತ್ರೇಯರನ್ನು ಆರಾಧಿಸುತ್ತಿದ್ದನು ಮುಂದೆ ಅಂದವಾದ ಮಗುವು ಹುಟ್ಟಿತು. ದಂಪತಿಗಳು ಪುತ್ರನನ್ನು ಪ್ರೀತಿಯಿಂದ ಸಲಹುತ್ತಿದ್ದರು ಈತನಿಗೆ ೫ನೇ ವರ್ಷದಲ್ಲಿ ಉಪನಯನ ಮಾಡಿ ಹನ್ನೆರಡನೇ ವರ್ಷದಲ್ಲಿ ಸುಂದರಿಯಾದ ಕನ್ಯೆಯನ್ನು ತಂದು ಮದುವೆ ಮಾಡಿದರು ಈ ವಧೂವರರು ಒಂದೇ

ವಯಸ್ಸಿನವರಾಗಿ ರತಿಮನ್ಮಥರಂತಿದ್ದರು. ಇವರನ್ನು ನೋಡಿ ತಾಯಿ ತಂದೆಗಳು ಪ್ರೀತಿಸುತ್ತಿದ್ದರು. ಈ ಬಾಲಕನಿಗೆ ಹದಿನಾರನೇ ವರ್ಷದಲ್ಲಿ ಒಂದು ವ್ಯಾಧಿಯು ಬಂದು ಎಷ್ಟು ಔಷಧಿಗಳನ್ನು ಮಾಡಿಸಿದರೂ ಆರೋಗ್ಯವಾಗಲಿಲ್ಲ. ಈತನಿಗೆ ಅನ್ನವು ರುಚಿಸದು. ಉಪವಾಸವಾಗಿದ್ದನು. ಇವನ ಸತಿಯೂ ಇದನ್ನು ನೋಡಿ ತಾನು ಉಪವಾಸವಾಗಿದ್ದಳು. ಈಕೆಯು ಪ್ರೀತಿಯಿಂದ ಗಂಡನಿಗೆ ಔಷಧಿಯನ್ನು ಕೊಡುತ್ತಿದ್ದಳು. ಮೂರು ವರ್ಷಗಳಾದ ಮೇಲೆ ಆ ರೋಗವು ಕ್ಷಯರೋಗಕ್ಕೆ ತಿರುಗಿತು. ಗಂಡನ ದೇಹವು ಕ್ಷೀಣವಾಗಲು ಈಕೆಯು ಗಂಡನ ಪಾದ ತೀರ್ಥವನ್ನುಮಾತ್ರ ಸೇವಿಸುತ್ತಿದ್ದಳು. ಅವನ ದೇಹವು ದುರ್ಗಂಧವಾಯಿತು. ವೈದ್ಯನು ಇವನ ಹತ್ತಿರಕ್ಕೂ ಬರುತ್ತಿರಲಿಲ್ಲ. ಈಕೆಯು ಪತಿ ಸೇವೆಯನ್ನು ಅತಿ ಪ್ರೀತಿಯಿಂದ ಮಾಡುತ್ತಿದ್ದಳು. ಗಂಡನು ಉಂಡಷ್ಟು ಅನ್ನವನ್ನು ತಾನೂ ಉಣ್ಣುತ್ತಿದ್ದಳು. ತಾಯಿ ತಂದೆಗಳೂ ಜ್ಞಾತಿಗಳೂ ಇದನ್ನು ನಿವಾರಿಸುತ್ತಿದ್ದರು. ದಿವ್ಯವಸ್ತ್ರಗಳನ್ನೂ ಒಡವೆಗಳನ್ನೂ ಧರಿಸುತ್ತಿರಲಿಲ್ಲ. ಪತಿಯೇ ಪ್ರಾಣವೆಂದು ತಿಳಿದು ಸೇವಿಸುತ್ತಿದ್ದಳು. ಈ ದಂಪತಿಗಳ ತಾಯಿ ತಂದೆಗಳಿಬ್ಬರೂ ಧನಿಕರಾಗಿದ್ದರು. ಇವರು ಅತಿಯಾಗಿ ದುಃಖಿಸುತ್ತಿದ್ದರು. ಅನೇಕ ಜಪಗಳನ್ನೂ ಮಹಾ ಹವನಹೋಮಗಳನ್ನೂ ಮಾಡಿಸಿ ಅನೇಕ ಬ್ರಾಹ್ಮಣರಿಗೆ ಸಮಾರಾಧನೆ ಮಾಡಿಸಿದರು. ಅನೇಕ ವೈದ್ಯರು ನಾನಾವಿಧದ ರಸದ ಔಷಧಗಳನ್ನು ಕೊಟ್ಟರು ಆದರೂ ವ್ಯಾಧಿಯು ಶಮನವಾಗಲಿಲ್ಲ. ಜೋಯಿಸರನ್ನು ಕೇಳಿ ಕುಲದೇವತೆಯನ್ನು ಪೂಜಿಸಿದರು. ಆರೋಗ್ಯವಾಗಲಿಲ್ಲ. ವೈದ್ಯರು, ನಮ್ಮ ಯತ್ನವಿಲ್ಲ, ಚಂದ್ರಮೌಳಿಯೇ ಪಾಲಿಸಬೇಕು ಎಂದರು. ಈ ಮಾತನ್ನು ಕೇಳಿ ತಾಯಿ ತಂದೆಗಳು ದುಃಖಿಸಿ, ಜಯಜಗನ್ನಾಥನೇ ! ನಿನ್ನನ್ನು ಪೂಜಿಸಿ ಈ ಮಗನನ್ನು ಪಡೆದೆವು. ನಮ್ಮ ಪಾಪವೆಂದಿಗೆ ಪರಿಹರಿಸುವುದು. ನಮ್ಮ ವಂಶಕ್ಕೊಬ್ಬನೇ ಮಗನಾಗಿದ್ದಾನೆ. ಇವನನ್ನು ರಕ್ಷಿಸದಿದ್ದರೆ ಅವನಿಗಾಗಿ ಪ್ರಾಣಬಿಡುವೆವು ಎಂದು ದುಃಖಿಸುತ್ತಿದ್ದರು. ಆ ಮಗನು ದುಃಖಿಸದಿರಿ ಎಂದು ತಡೆಯುತ್ತಿದ್ದನು. ಆಗ ತಾಯಿ ತಂದೆಗಳು ನಿನ್ನ ಸುಖವು ಮುಗಿಯಿತು. ಋಣವು ತೀರುತ್ತಾ ಬಂತು ಎಂದು ಮಗನ ಮೇಲೆ ಬಿದ್ದು ಉರುಳಾಡಿ ಮೂರ್ಛಾಗತರಾದರು. ಬಳಿಕ ಎಚ್ಚರ

ಹೊಂದಿ ಪುತ್ರನೇ, ಮುಪ್ಪಿನಲ್ಲಿ ನಮ್ಮನ್ನು ರಕ್ಷಿಸುವಿ ಎಂದಿದ್ದೆವು. ಆದರೆ ನೀನು ನಮ್ಮ ಆಶೆಯನ್ನು ವ್ಯರ್ಥವಮಾಡಿ ನಮ್ಮನ್ನು ಬಿಟ್ಟು ಹೋಗಲು ನೋಡುವಿ. ನಿನಗಿದು ಧರ್ಮವೇ ? ಎಂದು ದುಃಖಿಸಿದರು.

ಇದನ್ನು ಕೇಳಿ ಆತನು ತಾಯಿ ತಂದೆಗಳನ್ನು ಕುರಿತು ಇನ್ನು ನಮ್ಮ ಯತ್ನವೇನಿದೆ ? ಎಲ್ಲವೂ ಈಶ್ವರಾಧೀನವು. ಮನುಷ್ಯ ಯತ್ನವು ನಡೆಯಲಾರದು. ತಾಯಿ ತಂದೆಗಳ ಋಣವು ತೀರಲಾರದು. ಒಂದು ಘಳಿಗೆಯ ಹೊತ್ತು ಸ್ತನ್ಯಪಾನವಮಾಡಿದ ಋಣವನ್ನು ಏನು ಮಾಡಿದರೂ ತೀರಿಸಲಾರೆನು. ನಾನು ಈ ಜನ್ಮದಲ್ಲಿ ನಿಮ್ಮುದರದಲ್ಲಿ ಬಂದು ಸುಖಿಯಾಗದೇ ಕಷ್ಟಪಟ್ಟೆನು. ನಾನು ಮಹಾಪಾಪಿಯು. ನೀವು ಈಗ ದುಃಖಿಸದಿರಿ. ಪರಮಾರ್ಥದಲ್ಲಿ ದೃಷ್ಟಿಯನ್ನಿಡಿ. ಭವಿತವ್ಯವು ಬ್ರಹ್ಮಾದಿಗಳಿಗೂ ಎಂದೂ ತಪ್ಪದು ಎಂದು ಸಮಾಧಾನವಮಾಡಿದನು.

ಬಳಿಕ ಹೆಂಡತಿಯನ್ನು ಕುರಿತು, ಹೇಳುವವನಾದನು. ಪ್ರಾಣನಾಯಕಿಯೇ, ನನ್ನ ಜೀವನವು ಮುಗಿಯುತ್ತಾ ಬಂತು. ನನಗಾಗಿ ನೀನು ಬಹು ಕಷ್ಟಪಟ್ಟೆ. ವ್ಯರ್ಥವಾಯಿತು. ನಾನು ನಿನಗೆ ವೈರಿಯಾದೆನು ನನಗೆ ನಿನ್ನ ಋಣವು ತೀರುತ್ತಾ ಬಂತು. ಇದು ಜನ್ಮಾಂತರದ ಕರ್ಮಫಲವು. ನೀನು ಮುಂದೆ ನಮ್ಮ ಮನೆಯಲ್ಲಿದ್ದರೆ ನನ್ನ ತಾಯಿ ತಂದೆಗಳು ನಿನ್ನನ್ನು ಪೋಷಿಸುವರು. ನಿನಗೆ ಬಹುಕಷ್ಟವಾದೀತು. ಆದುದರಿಂದ ತವರುಮನೆಗೆ ಹೋಗು. ಸುಂದರಿಯಾದ ನಿನ್ನನ್ನು ಹೊಂದಿ ಚಂದದಿಂದ ಸುಖಿಸಲು ಅದೃಷ್ಟ ಹೀನನಾದೆನು. ನನ್ನಂಗವನ್ನು ಮುಟ್ಟಲು ನೀನು ಅಸಹ್ಯಪಡಲಿಲ್ಲ ಎಂದನು.

ಇದನ್ನು ಕೇಳಿ ಆಕೆಯು ಮೂರ್ಛೆಸಿ ಪತಿಪಾದಗಳಲ್ಲಿ ತಲೆಯನ್ನಿಟ್ಟು ದುಃಖಿಸಿದಳು. ಪ್ರಾಣರತ್ನನೇ ! ನನ್ನನ್ನು ಏಕೆ ತಾತ್ಸಾರ ಮಾಡುತ್ತೀಯೆ ? ನನಗೆ ನಿಮ್ಮ ಹೊರತು ಗತಿಯಾರು ? ನಿಮ್ಮ ದೇಹವಿರುವವರೆಗೂ ನೋಡುತ್ತಿದ್ದು ಬಳಿಕ ನೀಯೋ ಕಡುಜವದಿಂದ ಸಹಗಮನ ಮಾಡುವೆನು. ಸಂದೇಹವಿಲ್ಲವೆಂದಳು. ಈ ಬಾಲದಂಪತಿಗಳ ಮಾತನ್ನು ಕೇಳಿ ತಾಯಿತಂದೆಗಳು ಭೂಮಿಯಲ್ಲಿ ಬಿದ್ದು ಅಳುತ್ತಾ ಇದ್ದರು.

ಆಗ ಆಕೆಯು ಅತ್ತೆಮಾವಂದಿರನ್ನು ಸಮಾಧಾನಮಾಡಿ ನನ್ನ ಪತಿಯು ಬದುಕ್ಯಾನು? ಗಾಣಗಾಪುರಿಯಲ್ಲಿ ನೃಸಿಂಹ ಸರಸ್ವತಿಗಳಿರುವರೆಂದೂ ಅವರು ಮಹಾ ಮಹಿಮರು ಎಂದೂ ಜನರು ಹೇಳುವರು. ಅವರ ದರ್ಶನಕ್ಕೆ ನಾವು ಹೋಗೋಣ, ಅವರ ದರ್ಶನ ಮಾತ್ರದಿಂದಲೆ ಪತಿಗೆ ಆರೋಗ್ಯವಾಗುವುದು. ನನ್ನನ್ನಲ್ಲಿಗೆ ಕಳುಹಿಸಿರಿ ಎಂದು ಬಿನ್ನವಿಸಿ ಅತ್ತೆಮಾವಂದಿರ ಪಾದಗಳಿಗೆ ವಂದಿಸಿದಳು. ಎಲ್ಲರೂ ಇದಕ್ಕೊಪ್ಪಿದರು. ಆಕೆಯು ತಾಯಿತಂದೆಗಳನ್ನೂ ಅತ್ತೆಮಾವಂದಿರನ್ನೂ ವಂದಿಸಿದಳು. ಇವರ ಅನುಮತಿಹೊಂದಿ ಹೊರಡಲು ಸಿದ್ಧವಾದಳು. ಅವರನ್ನು ಕುರಿತು ನೀವು ಸ್ಥಿರವಾಗಿರಿ. ಪತಿಯೇ, ನನ್ನ ಪ್ರಾಣವು ನಮ್ಮ ಕುಲದೇವತೆಯು ನಮ್ಮನ್ನು ರಕ್ಷಿಸುವುದು ಎಂದು ವಂದಿಸಿದಳು. ಅವರು ಸಂತೋಷದಿಂದ ಆಶೀರ್ವದಿಸಿದರು. ಆಕೆಯು ಪತಿಯೊಡನೆ ಹೊರಟು ಗಾಣಗಾಪುರಕ್ಕೆ ಬಂದಳು. ಆ ಗ್ರಾಮದ ಹೊರಭಾಗಕ್ಕೆ ಬರಲು ರೋಗಿಗೆ ಸಂಕಟವು ಬಲವಾಯಿತು. ಆಗ ಶ್ರೀ ಗುರುವು ಸಂಗಮಕ್ಕೆ ಹೋಗಿದ್ದರು. ಅವರ ದರ್ಶನಕ್ಕೆ ಹೋಗಲು ಯೋಚಿಸುತ್ತಿರುವಲ್ಲಿ ಪತಿಯ ಪ್ರಾಣವು ಹೋಯಿತು. ಆಗ ಆಕೆಯು ಭೂಮಿಯಲ್ಲಿ ಬಿದ್ದು ಹೊರಳಿ ದುಃಖಿಸುತ್ತಿದ್ದಳು. ಆಗ ಆಕೆಯು ಕತ್ತಿಯಿಂದ ಕಡಿದುಕೊಳ್ಳಲು ಯತ್ನಿಸುತ್ತಿದ್ದಳು. ಆಗ ಜನರು ಆಕೆಯನ್ನು ತಡೆದರು. ತನ್ನ ತಲೆಯನ್ನು ಭೂಮಿಯಲ್ಲಿ ಅಪ್ಪಳಿಸಿದಳು. ಎದೆಯನ್ನು ಕಲ್ಲಿನಿಂದ ಹೊಡೆದುಕೊಂಡಳು. ಕೂದಲನ್ನು ಇಳೀ ಬಿಟ್ಟು ಕೂಗಿ ಅಳುತ್ತಿದ್ದಳು. ಅಯ್ಯೋ, ದೇವರೇ, ಇದೇನು? ಗುರುಗಳನ್ನು ಕಂಡರೆ ರಕ್ಷಿಸುವರೆಂದು ತಿಳಿದು ಬಂದೆನು. ಪೂಜೆಗೆಂದು ಹೋದರೆ ದೇವಾಲಯವು ತಲೆಯಮೇಲೆ ಬಿದ್ದಂತಾಯಿತು. ಬಿಸಿಲಿಗೆ ಹೆದರಿ ದಾರಿಗನು ಮರದ ನೆರಳಿಗೆ ಹೋದರೆ ಮರವು ಅವನ ಮೇಲೆ ಬಿದ್ದಂತಾಯಿತು. ದಾಹ ಹೊಂದಿದವನು ಗಂಗೆಗೆ ಹೋಗಲು ಮೊಸಳೆಯು ಹಿಡಿದು ತಿಂದಂತಾಯಿತು. ಹುಲಿಯ ಭಯದಿಂದ ಹೆದರಿದ ಹಸುವು ಕಟುಕನ ಮನೆಯನ್ನು ಹೊಕ್ಕಂತಾಯಿತು. ಪಾಪಿಯೂ ಮಂದಭಾಗ್ಯಳೂ ಆದ ನಾನು ತಾಯಿತಂದೆಗಳನ್ನು ಬಿಟ್ಟು ಪತಿಯೊಡನೆ ಈ ಪರದೇಶಕ್ಕೆ ಬಂದೆನು. ಪತಿಯ ಪ್ರಾಣವನ್ನು ತೆಗೆದವು ಎಂದು ದುಃಖಿಸುತ್ತಿರಲು, ಆ ಗ್ರಾಮಸ್ಥರನೇಕರು ಬಂದು ಅಮ್ಮಾ, ದುಃಖಿಸದಿರು; ಮನಸ್ಸ

ನಲ್ಲಿ ವಿಚಾರಿಸಿ ನೋಡು. ಯಾರಿಗೂ ಆಗುವುದು ತಪ್ಪುವುದಿಲ್ಲ ಎಂದು ಹೇಳಿದರು.

ಈಕೆಯು ಅತಿಯಾಗಿ ದುಃಖಿಸಿದಳು. ಅಯ್ಯೊ ಕೇಳಿರಿ— ಪತಿಯನ್ನು ಬದುಕಿಸುವೆನೆಂದು ಇಲ್ಲಿಗೆ ಕರೆತಂದೆನು. ಈಗ ಯಾರನ್ನು ಮರೆಹೋಗಲಿ? ಯಾರು ರಕ್ಷಿಸುವರು? ಪತಿಯು ನನ್ನನ್ನು ಬಿಟ್ಟು ಹೋದನು. ನಾನೆಂತು ಜೀವಿಸಲಿ? ಬಾಲ್ಯದಲ್ಲಿ ನಾನು ಗೌರೀ ಶಂಕರರನ್ನು ಪೂಜಿಸಿದೆನು. ಕಂಕಣ ಶೋಭನಗಳಿಗಾಗಿ ಮಂಗಳ ಗೌರಿಯ ವ್ರತವನ್ನು ಮಾಡಿದೆನು. ತಾಯಿಯು ಹೇಳಿದ ವ್ರತಗಳನ್ನು ಮಾಡಿದೆನು. ಇವೆಲ್ಲವೂ ವ್ಯರ್ಥವಾದುವು. ಈಗ ಅರಿಶಿನ ಕುಂಕುಮವೂ ಮಂಗಳ ಸೂತ್ರವೂ ಬಿದ್ದು ಹೋಯಿತು. ಕಂಕಣವೂ ಕಂಚುಕವೂ ಬೆಂಕಿಯಲ್ಲಿ ಬಿತ್ತು. ನನ್ನ ಪ್ರಾಣವೆಲ್ಲಿಗೆ ಹೋಯಿತು. ಗೌರೀಶನನ್ನು ವ್ಯರ್ಥವಾಗಿ ಪೂಜಿಸಿದೆನು. ದೇವರು ನನ್ನನ್ನು ನಿರ್ಭಾಗ್ಯಳನ್ನಾಗಿ ಮಾಡಿದನು. ಸಹೋದರಿಯರೇ, ಈಗ ನಾನೆಲ್ಲಿರಲಿ? ನನ್ನ ಪತಿಯು ಲೋಕದ ಜನರಂತಲ್ಲ. ನನ್ನ ಪ್ರಾಣಪದಕವಾಗಿದ್ದನು ಎಂದಾ ಸತಿಯು ಪತಿಯಾನನವಂ ನೋಡಿ ದುಃಖಿಸುತ್ತಿದ್ದಳು. ಪ್ರೇತವನ್ನು ತಬ್ಬಿಕೊಂಡಳು. ಪೂರ್ವದ ಸ್ನೇಹವು ಆಕೆಗೆ ನೆನೆಪಾಯಿತು. ಪ್ರಾಣೇಶ್ವರಾ! ನೀವು ಬೇಸರಿಸಿದಿರಾ? ನನ್ನನ್ನುಪೇಕ್ಷಿಸಿ ಬಿಟ್ಟಿರಾ? ನಾನು ಅದೃಷ್ಟಹೀನಳು. ಗಡಿಗೆಯ ಮಣ್ಣುತಟ್ಟೆಯೂ ತಗಲಿದರೆ ಒಡೆದುಹೋಗುವಂತೆ ನಿನ್ನ ಆಯುಸ್ಸು ಕಮ್ಮಿಯಾಯಿತು. ತಾಯಿತಂದೆಗಳನ್ನು ಬಿಡಿಸಿ ನಿನ್ನನ್ನು ಈ ಪರದೇಶಕ್ಕೆ ತಂದೆನು. ದಶರಥನು ವೈಶ್ಯಪುತ್ರನನ್ನು ವಧಿಸಿದಂತೆ ಪತಿಯನ್ನು ಕೊಂದೆನು. ಅದರಂತೆಯೇ ತಾಯಿತಂದೆಗಳನ್ನು ಬಿಡಿಸಿತಂದೆನು. ನಿಮ್ಮ ಮರಣವಾರ್ತೆಯನ್ನು ಕೇಳಿ ನಿಮ್ಮ ತಾಯಿತಂದೆಗಳು ಪ್ರಾಣವನ್ನು ಬಿಟ್ಟಾರು. ಪಾಪಿಯಾದ ನನಗೆ ಮೂವರನ್ನು ಕೊಂದ ಪಾಪವು ಬಂದಿತು. ನಿಮಗೆ ವೈರಿಯಾದೆನು. ಪತಿಘಾತಿನಿಯಾದೆನು. ಜನರು ನನ್ನನ್ನು ಪಾಪಿಯಾದ ಚಾಂಡಾಲಿನಿ ಎಂದೂ ಪತಿಘಾತಿನಿ ಎಂದೂ ನಿಂದಿಸುವರು. ನಾನು ಪತ್ನಿಯಲ್ಲ, ವೈರಿಯು. ಚರಿತವಾದ ಶಸ್ತ್ರವು ದೇಹವನ್ನು ಕತ್ತರಿಸುವಂತೆ ಪತಿಯ ಸುವನ್ನು ತೆಗೆದೆನು. ಪತಿಯೇ ನಿನ್ನ ಪಿತೃಗಳೂ ಬಂಧುಗಳೂ ನಿನ್ನ ಹತ್ತಿರ ಇದ್ದರೆ ಅಂತ್ಯದಲ್ಲಿ ನಿನ್ನ ಮುಖವನ್ನು ನೋಡುತ್ತಿ

ದ್ದರು. ಇದಕ್ಕೆ ನಾನು ವಿಘ್ನವಾಡಿದೆನು ಮುದುಕರಾದ ಅತ್ತೆಮಾವಂ ದಿರು ಮುಪ್ಪಿನಲ್ಲಿ ನೀನು ರಕ್ಷಿಸುವಿ ಎಂದು ತಿಳಿದಿದ್ದರು ಅವರ ಆಶೆಯು ಪೂರ್ಣವಾಗಲಿಲ್ಲ ಅವರನ್ನು ಬಿಟ್ಟೆಲ್ಲಿಗೆ ಹೋದಿ ? ಅವರಿಗೆ ನೀನೊಬ್ಬನೇ ಮಗನಲ್ಲವೇ ? ಅವರಿಗೆ ಮಹಾಗ್ಲಾನಿಯನ್ನುಂಟುಮಾಡಿದೆ ನಮ್ಮನ್ನು ಎಲ್ಲಿಟ್ಟು ಹೋಗುವಿ ! ಈಗ ನಾವೆಲ್ಲಿಗೆ ಹೋಗಬೇಕು ನಮ್ಮ ನ್ನು ಯಾರು ರಕ್ಷಿಸುವರು ? ನಮಗೆ ಹೇಳದೇ ಹೋದೆಯಲ್ಲಾ ? ನಿನ್ನ ಮಹತ್ವವನ್ನು ಹೇಗೆ ಮರೆಯಲಿ ? ನೀನು ಲೋಕದ ಜನರಂತಲ್ಲ ಇದುವ ರೆಗೆ ಪ್ರೀತಿಯಿಂದ ಸಲಹಿದೆ ಎಡಗೈಯನ್ನೇ ತಲೆದಿಂಬನ್ನಾಗಿ ಮಾಡಿ ಬೇರೆಯಾಗಿ ಮಲಗಿರುವುದನ್ನು ನೋಡಿ ನನ್ನಂತಃಕರಣವು ಒಡೆಯು ತ್ತಿದೆ ನಾನು ಹೇಗೆ ಬದುಕಲಿ ? ನಿನ್ನ ಗುಣವನ್ನೆಂತುಮರೆಯಲಿ' ನೀನೇ ನನ್ನ ಪ್ರಾಣವು ನನ್ನನ್ನು ಬಿಟ್ಟು ಹೇಗೆ ಹೋಗುವಿ ? ಯಾರಮನೆಗೆ ಹೋಗಲಿ ? ಯಾರು ನನ್ನನ್ನು ಸಲಹುವರು ? ಬಾಲವಿಧವೆಯೆಂದು ಜನರು ಕರೆಯುವರು. ನನಗೆ ಬುದ್ಧಿಯನ್ನು ಹೇಳದೇ ಪ್ರಾಣ ಬಿಟ್ಟೆ ಯಲ್ಲಾ ! ಕೇಶ ವಪನಮಾಡಿಸಿಕೊಂಡು ನಾನೆಲ್ಲಿಗೆ ಹೋಗಲಿ ? ನಿನ್ನ ಪ್ರೇಮಭರದಿಂದ ನನ್ನ ಜನನೀ ಜನಕರನ್ನು ಮರೆತಿದ್ದೆನು ಅವರು ನಿತ್ಯವೂ ಕರೆದರೂ ನಾನು ಅಲ್ಲಿಗೆ ಹೋಗಲಿಲ್ಲ ಈಗ ನನ್ನನ್ನು ಉಪೇ ಕ್ಷಿಸಿದೆಯಲ್ಲಾ ? ಅವರ ಮನೆಗೆ ದೈನ್ಯದಿಂದೆಂತು ಹೋಗಲಿ? ನೀನಿರುವವ ರೆಗೆ ನಾನು ಪವಿತ್ರಳಾಗಿದ್ದೆನು ಈಗ ನಿನ್ನ ಇಷ್ಟಮಿತ್ರರೆಲ್ಲರೂ ನನ್ನನ್ನು ನಿಂದಿಸುವರು. ಅತ್ತೆ ಮಾವಂದಿರು ನನ್ನಮುಖ ನೋಡಿದರೆ ಮೃತರಾಗು ವರು. ಮನೆಯು ವನದಂತಾಗುವುದು ಆರೋಗ್ಯವಾಗಲೆಂದು ನಿನ್ನ ನ್ನಿಲ್ಲಿಗೆ ಕರೆತಂದೆನು. ಇಲ್ಲಿ ನಿನ್ನನ್ನು ಬಿಟ್ಟು ಪಾಪಿಯೂ ರಾಕ್ಷಸಿಯೂ ಆದ ನಾನು ಮನೆಗೆ ಹೇಗೆ ಹೋಗಲಿ ? ಎಂದು ದುಃಖಿಸುತ್ತಿದ್ದಳು.

ಆಗ ಒಬ್ಬ ಸಿದ್ಧನು ಭಸ್ಮಲೇಪಿತನಾಗಿಯೂ, ಜಟಾಧಾರಿಯಾಗಿಯೂ, ರುದ್ರಾಕ್ಷಿಯನ್ನು ಧರಿಸಿದವನಾಗಿಯೂ ಹತ್ತಿರ ಬಂದು ನಿಂತನು. ಎಲೌ ಸ್ತ್ರೀಯಳೇ. ಏಕಳುವಿ ? ಹಣೆಯಲ್ಲಿ ಬರೆದಂತಾಗುವುದು. ಪೂರ್ವ ಜನ್ಮದ ಕರ್ಮಾನುಸಾರವಾಗಿ ಫಲವುಂಟಾಗುವುದು. ಈಗ ದುಃಖಿಸದಿರು. ಎಂಟುದಿನಗಳಕ್ಕಿಂತ ಹೆಣಕ್ಕೆ ಜೀವವು ಬಾರದು. ಹಣೆಯಲ್ಲಿ ಬರೆ

ಗಂತಾಯಿತು ಮೂಢತನದಿಂದ ದುಃಖಿಸುತ್ತೀಯೆ ಎಲ್ಲರೂ ಸಾಯು ವವರೆಂದು ತಿಳಿದಿದ್ದೀಯೆ ಭೂಮಿಯಲ್ಲಿ ಯಾರು ಉಳಿಯುತ್ತಾರೆ ? ಈತನು ಪ್ರಾಣೇಶ್ವರನೆನ್ನುತ್ತೀಯೆ ಈತನೆಲ್ಲಿ ಹುಟ್ಟಿದನು ? ನೀನು ಹುಟ್ಟಿದ ಮನೆಲಿ " ನಿನ್ನ ತಾಯಿ ತಂದೆ ಎಲ್ಲಿ " ಗಂಗಾನದಿಯಲ್ಲಿ ಪ್ರವಾಹ ಬಂದಾಗ ನಾನಾವಿಧಗಳಾದ ಕಟ್ಟಿಗಗಳು ತೇಲಿಬರುತ್ತವೆ ಆಗ ಬಂದು ಕಡೆ ಸೇರುತ್ತವೆ ಬಳಿಕ ನಾನಾ ಕಡೆಗಳಿಗೆ ಹರಿದು ಹೋಗುತ್ತವೆ. ಒಂದು ಮರದಲ್ಲಿ ಅನೇಕ ಹಕ್ಕಿಗಳು ಸೇರುತ್ತವೆ ಬಳಿಕ ಆಹಾರಕ್ಕಾಗಿ ನಾಲ್ಕುಕಡೆಗಳಿಗೂ ಹಾರಿ ಹೋಗುವುವು. ಇವುಗಳಂತೆಯೇ ನರರ ಸಂಸಾರಕ್ರಮವಾಗಿದೆ ಯಾರು ಮುಟ್ಟಿ ಸ್ಥಿರವಾಗಿರುವರು ? ಮಾಯೆ ಯಿಂದ ನನ್ನ ಹೆಂಡತಿ, ನನ್ನ ಗಂಡ, ನನ್ನ ಮಕ್ಕಳು ಎನ್ನುವೆವು ನೀರಿ ನಲ್ಲಿರುವ ನೊರೆಯಂತೆ ಈ ದೇಹವು ಸ್ಥಿರವಲ್ಲ ವ್ಯರ್ಥವಾಗಿ ದುಃಖಿಸ ದಿರು ಪಂಚಭೂತಾತ್ಮಕವಾದ ದೇಹವು ತನ್ನ ಕರ್ಮಾನುಸಾರವಾಗಿ ಹುಟ್ಟುವುದು ಗುಣಾನುಸಾರವಾಗಿ ಕರ್ಮಗಳಾಗುವುವು ಕರ್ಮದಂತೆ ಫಲವುಂಟಾಗುವುದು ತ್ರಿಗುಣಗಳೂ ಮಾಯೆಯಿಂದ ಆಗಿವೆ ಈ ಸಂಸಾರದಲ್ಲಿ ಪ್ರಾಣಿಯು ಕರ್ಮಾಧೀನವಾದ ಸುಖದುಃಖಫಲಗಳನ್ನು ಅನುಭವಿಸುವುದು ಕೋಟಿ ಕಲ್ಪಗಳವರೆಗೂ ದೇವತೆಗಳಿಗೆ ಆಯುಷ್ಯ ವಿದ್ದರೂ ಇವರಿಗೂ ಕಾಲವು ತಪ್ಪದು ನರರ ಪಾಡೇನು ? ಎಲ್ಲರಿಗೂ ಕಾಲವೇ ಕಾರಣವು, ದೇಹವು ಕರ್ಮಾಧೀನವು ಪಂಚಭೂತಾತ್ಮಕವಾದ ದೇಹವು ಸ್ಥಿರವಿಲ್ಲ. ಕಾಲಕರ್ಮಾಧೀನವಾದ ಪುತ್ರ ಮಿತ್ರ ಕಳತ್ರಾದಿಗಳ ಸುಖ ದುಃಖ ಸಂತೋಷಗಳು ಉಂಟಾಗುವುವು. ಬ್ರಹ್ಮನು ಹಣೆಯಲ್ಲಿ ಬರೆದಂತೆ ಆಯುಸ್ಸು ಸುಖದುಃಖಗಳೂ ಪಾಪ ಪುಣ್ಯಾನುಸಾರವಾಗಿ ಆಗು ವುವು. ದೇವದಾನವನರರಿಗೂ ಕರ್ಮಾನುಸಾರವಾಗಿ ಸುಖದುಃಖಗಳಾ ಗುವುವು. ಸಂಸಾರವು ಸ್ವಪ್ನದಂತೆಯೂ ಇಂದ್ರಜಾಲದಂತೆಯೂ ಮಿಥ್ಯೆ ಯಲ್ಲವೇ ? ಇದಕ್ಕೆ ದುಃಖಿಸಬಾರದು ಸ್ತ್ರೀಯಳೇ ಕೋಟಿ ಜನ್ಮಗ ಳಲ್ಲಿ ಯಾರ್ಯಾರ ಹೆಂಡತಿಯಾಗಿದ್ದೆ ? ಏಕೆ ದುಃಖಿಸುವೆ ! ಪಂಚಭೂತಾ ತ್ಮಕವಾದ ಈ ದೇಹದಲ್ಲಿ ಚರ್ಮ, ತಲೆ, ಮಾಂಸ, ರಕ್ತ, ಮೆದುಳು, ನರ, ಎಲುಬು, ಮಲ, ಮೂತ್ರ ಶ್ಲೇಷ್ಮಗಳೂ ತುಂಬಿವೆ. ಇಂಥಾ ಘೋರ ದೇಹ ದಲ್ಲಿ ಸ್ವಾರ್ಥವೇನಿದೆ ? ಇದಕ್ಕೆ ದುಃಖಿಸುವುದೇಕೆ ? ಮುಂದೆ ಸಂಸಾರ

ವನ್ನು ದಾಟುವದಾರಿಯು ಯಾವುದೆಂದು ವಿಚಾರಮಾಡು, ಎಂದು ಬೋಧಿಸಲು ಆಗ ಆಕೆಗೆ ಜ್ಞಾನೋದಯವಾಯಿತು ಆಗ ದುಃಖವನ್ನು ಬಿಟ್ಟಳು ಅಂಜಲಿ ಬದ್ಧಳಾಗಿ ಸ್ವಾಮಿ ರಕ್ಷಿಸಿರಿ ಎಂದಳು ನನಗೆ ದಾರಿಯಾವುದು ? ನೀವೇ ನನಗೆ ತಾಯಿತಂದೆಗಳು ಸಂಸಾರವನ್ನು ದಾಟಿಸಿರಿ ನಾನು ಈ ಭವಾರ್ಣವವನ್ನು ಹ್ಯಾಗೆ ದಾಟಲಿ ? ನೀವು ನಿರೂಪಿಸಿದಂತೆ ಮಾಡುವೆನು ಎಂದಳು

ಈ ನುಡಿಯನ್ನು ಕೇಳಿ ಅತನು ಪ್ರಸನ್ನನಾಗಿ ಸ್ತ್ರೀಯರ ಆಚಾರಗಳನ್ನು ಹೇಳುವನು ಎಂದು ಸರಸ್ವತೀ ಗಂಗಾಧರನು ಹೇಳಿದನು. ಇದನ್ನು ಕೇಳಲು ಪಾಪದೂರವಾಗುವುದು ಸಕಲೇಷ್ಟಗಳು ಉಂಟಾಗುವುವು. ಎಂದನು ಎಂಬಲ್ಲಿಗೆ ಮೂವತ್ತನೇ ಅಧ್ಯಾಯವು ಮುಗಿದುದು.

|| ಶ್ರೀ ದತ್ತಾತ್ರೇಯಾರ್ಪಣಮಸ್ತು. ||

## ೩೧ ನೆಯ ಅಧ್ಯಾಯ.

|| ಶ್ರೀಗಣೇಶಾಯನಮಃ || ನಾಮಧಾರಕನೇ, ಕೇಳು. ಮುಂದೆ ಅಪೂರ್ವ ಸಂಗತಿಗಳಾದುವು ಕಾರುಣಿಕನಾದ ಆ ಯೋಗಿಯು ಸ್ತ್ರೀಧರ್ಮಗಳನ್ನು ಹೇಳುವನು ಕೇಳು ಈ ಧರ್ಮವು ಸ್ಕಂದಪುರಾಣದ ಕಾಶೀಖಂಡದಲ್ಲಿ ಹೇಳಿದೆ.

ಅಗಸ್ತ್ಯರು ಕಾಶೀಕ್ಷೇತ್ರದಲ್ಲಿರಲು ಇವರ ಪತ್ನಿಯಾದ ಲೋಪಾಮುದ್ರೆಯು ಜ್ಞಾನಿಯಾಗಿಯೂ ಪ್ರತಿವ್ರತಾಶಿರೋಮಣಿಯಾಗಿಯೂ ಇದ್ದಳು. ಅಗಸ್ತ್ಯ ಶಿಷ್ಯನಾದ ವಿಂಧ್ಯನು ಗಿರಿರೂಪನಾಗಿ ಭೂಮಿಯಲ್ಲಿ ಕಾಣುತ್ತಿದ್ದನು ಈ ಗಿರಿಶಿಖರದಲ್ಲಿ ರಮ್ಯವಾದ ವನವಿತ್ತು ಬ್ರಹ್ಮರ್ಷಿಯಾದ ನಾರದನು ಈ ವಿಂಧ್ಯನಂ ಕಂಡನು. ಆಗ ವಿಂಧ್ಯನು ವಂದಿಸಿದನು. ಆಗ ನಾರದನು ವಿಂಧ್ಯನೇ ನೀನು ಎಲ್ಲರಲ್ಲಿಯೂ ಶ್ರೇಷ್ಠನು. ನಿನ್ನ ಸ್ಥಾನವು ರಮ್ಯವಾಗಿದೆ. ನಿನ್ನಲ್ಲನೇಕವೃಕ್ಷಗಳಿವೆ ಆದರೂ ನಿನ್ನಲ್ಲಿ

ಬಂದು ಕುಂದಿರುವುದು. ಏನೆಂದರೆ:—ನೀನು ಮೇರುವಿಗೆ ಸಮನಲ್ಲ. ಆದುದರಿಂದ ಶ್ರೇಷ್ಠತ್ವವಿಲ್ಲ ಎಂದನು.

ಆ ವಾಕ್ಯವನ್ನು ಕೇಳಿ ವಿಂಧ್ಯನು ಮೇರುಸಮನಾಗುವೆನೆಂದು ಬೆಳೆಯುತ್ತಿದ್ದನು. ಸೂರ್ಯಮಂಡಲದವರೆಗೂ ಬೆಳೆದನು. ಈ ವಿಂಧ್ಯದ ದಕ್ಷಿಣಭಾಗದ ದೇಶಗಳಲ್ಲಿ ಹಗಲು ರಾತ್ರಿಗಳಲ್ಲಿಯೂ ಕತ್ತಲೆಯಾಗಿ ಸೂರ್ಯರಶ್ಮಿಯು ಕಾಣುತ್ತಿರಲಿಲ್ಲ. ಯಾಗಾದಿ ಕರ್ಮಗಳೂ ನಿಂತವು. ಮುನಿಗಳೆಲ್ಲರೂ ಸೇರಿ ಇಂದ್ರನಲ್ಲಿಗೆ ಹೋಗಿ ಈ ವಿಂಧ್ಯನ ಬೆಳೆಯುವಿಕೆಯನ್ನು ವಿಜ್ಞಾಪಿಸಿದರು.

ಆಗ ಇಂದ್ರನು ಸುರರೊಡನೆ ಬ್ರಹ್ಮಲೋಕಕ್ಕೆ ಹೋಗಿ ವಿಂಧ್ಯನ ಸಂಗತಿಯನ್ನು ಬಿನ್ನವಿಸಿದನು.

ಆಗ ಬ್ರಹ್ಮನು. ಇಂದ್ರನೇ ಇದರ ಕಾರಣವನ್ನು ಕೇಳು. ಕಾಶಿಯಲ್ಲಿರುವ ಅಗಸ್ತ್ಯರನ್ನು ದಕ್ಷಿಣ ದೇಶಕ್ಕೆ ತಕ್ಷಣವೇ ಕಳುಹಿಸಬೇಕು. ದಕ್ಷಿಣದಲ್ಲಿ ಕತ್ತಲೆಯಾಗಿರುವುದು. ಅಗಸ್ತ್ಯರು ದಕ್ಷಿಣಕ್ಕೆ ಬರಲು ಅವರ ಶಿಷ್ಯನಾದ ವಿಂಧ್ಯನು ದಂಡವತ್ತಾಗಿ ಸಮಸ್ಕರಿಸುವನು, ಆಗ ಅಗಸ್ತ್ಯರು ವಿಂಧ್ಯನೇ, ನೀನು ಬೆಳೆಯಬೇಡ ಎಂದು ಹೇಳಿ ಆ ಶಿಖರವನ್ನು ಭೂಮಿಗೆ ಸಮವಾಗಿ ಮಾಡುವರು. ಆದುದರಿಂದ ನೀವು ಈಗ ಕಾಶಿಗೆ ಹೋಗಿ ಅಗಸ್ತ್ಯರನ್ನು ವಂದಿಸಿ ದಕ್ಷಿಣಕ್ಕೆ ಕಳುಹಿಸಿರಿ ಎಂದು ಬ್ರಹ್ಮನು ಇಂದ್ರನಿಗೆ ಆಜ್ಞಾಪಿಸಿದನು.

ಇದರಂತೆಯೇ ಇಂದ್ರನು ಬೃಹಸ್ಪತಿಯೂ ಸಕಲ ಋಷಿಗಳೊಡನೆ ಹೊರಟು ಕಾಶಿಗೆ ಬಂದು ಅಗಸ್ತ್ಯರನ್ನು ವಂದಿಸಿ ಅರ್ಘ್ಯಾದಿಗಳಿಂದ ಪೂಜೆಸಿದರು. ಇಂದ್ರನು ಗುರುವಿನೊಡನೆ ಅಗಸ್ತ್ಯರನ್ನು ಸ್ತುತಿಸುತ್ತಿದ್ದನು. ಆಗ ದೇವಗುರುವು ಇಂದ್ರನೇ ಕೇಳು. ಈ ಲೋಪಾಮುದ್ರೆಯು ಮಹಾ ಪತಿವ್ರತೆಯು. ಅರುಂಧತಿ, ಸಾವಿತ್ರಿ, ಸತೀ, ಅನಸೂಯಾ, ಶಾಂಡಿಲ್ಯೆಯು ಇವರೆಲ್ಲರೂ ಪತಿವ್ರತೆಯಾಗಿದ್ದರು. ಲಕ್ಷ್ಮೀ, ಪಾರ್ವತಿ, ಶಾಂತರೂಪಿ, ಸರಸ್ವತಿ, ಮೇನಕೆ, ಧ್ರುವಮಾತೆಯಾದ ಸುನೀತೆಯು ಸೂರ್ಯಪತ್ನಿಯಾದ ಸಂಜ್ಞಾದೇವಿ, ಅಗ್ನಿಪತ್ನಿಯಾದ ಸ್ವಾಹಾದೇವಿ

ಇವರು ಪ್ರಸಿದ್ಧರಾಗಿದ್ದರು. ಇವರೆಲ್ಲರಿಗಿಂತಲೂ ಲೋಪಾಮುದ್ರೆಯು ಮಹಾ ಪತಿವ್ರತೆಯಾಗಿದ್ದಾಳೆ. ದೇವತೆಗಳಿರಾ ಪತಿವ್ರತೆಯರ ಧರ್ಮಗಳನ್ನು ಹೇಳುವೆನು ಕೇಳಿರಿ. ಪತಿಯುಂಡ ಎಂಜಲನ್ನು ಮಹಾ ಪ್ರಸಾದವೆಂದು ಸತಿಯು ಭುಜಿಸಬೇಕು. ಪತಿಯನ್ನು ನೋಡಿದೊಡನೆಯೇ ಎದ್ದು ನಿಲ್ಲಬೇಕು. ಅವನಾಜ್ಞೆಯಿಲ್ಲದೆ ಕೂತುಕೊಳ್ಳಬಾರದು. ಪತಿಯನ್ನು ತಿರಸ್ಕರಿಸಬಾರದು. ಸದಾ ಪತಿಯನ್ನು ಸೇವಿಸಬೇಕು. ಅತಿಥಿಯನ್ನು ಪೂಜಿಸಬೇಕು. ಪತಿಯಪ್ಪಣೆಯಿಲ್ಲದೆ ದಾನ ಧರ್ಮ ಮಾಡಬಾರದು. ಪತಿಯನ್ನು ಹರಿಯೆಂದು ತಿಳಿದು ಸದಾ ಭಕ್ತಿಯಿಂದ ಸೇವಿಸಬೇಕು. ಪತಿಯು ನಿದ್ರಿತನಾದಮೇಲೆ ತಾನು ಮಲಗಬೇಕು. ಕಂಚುಕವನ್ನೂ ಸ್ತನ್ಯ ಪಾನಮಾಡುವ ಶಿಶುವನ್ನೂ ದೂರದಲ್ಲಿರಿಸಬೇಕು. ಇವನ್ನು ಪತಿದೇಹಕ್ಕೆ ತಗಲಿಸಬಾರದು.

ಕುಪ್ಪುಸವು ಪತಿಗೆ ತಗಲಿದರೆ ಆತನ ಆಯುಸ್ಸು ಹಾನಿಯಾಗುವುದು. ಪತಿಯು ಎಚ್ಚತ್ತಿಲ್ಲದಿದ್ದರೂ ತಾನು ಮೊದಲೇ ಏಳಬೇಕು. ಮನೆಯ ನೆಲವನ್ನು ಸಾರಿಸಬೇಕು. ಗುಡಿಸಬೇಕು. ನಿರ್ಮಲವಾಗಿ ಮಾಡಬೇಕು. ಬೇಗ ಸ್ನಾನಮಾಡಿ ಪತಿಯನ್ನು ಪೂಜಿಸಿ ಪಾದಗಳಲ್ಲಿ ವಂದಿಸಿ ಶಿವಸಮನೆಂದು ಭಾವಿಸಿ ಪತಿಯ ಚರಣ ತೀರ್ಥವನ್ನು ತೆಗೆದುಕೊಳ್ಳಬೇಕು. ಪತಿಯ ಚರಣಗಳಲ್ಲಿ ತಲೆಯನ್ನಿಟ್ಟು ಶಿವಸಮನೆಂದು ತಿಳಿದು ವಂದಿಸಬೇಕು. ತನ್ನ ಪತಿಯು ಊರಲ್ಲಿರಲು ತಾನು ಸರ್ವ ಶೃಂಗಾರವನ್ನೂ ಮಾಡಿಕೊಳ್ಳಬೇಕು. ಗ್ರಾಮದಿಂದ ಹೊರಗೆ ಹೋದಾಗ ತಾನು ಅಲಂಕರಿಸಿಕೊಳ್ಳಬಾರದು. ಪತಿಯು ನಿಷ್ಠುರ ವಾಕ್ಯವನ್ನಾಡಿದರೂ ಸಿಟ್ಟಾಗದೆ ತಟ್ಟನೆ ಪಾದಗಳನ್ನು ಹಿಡಿದು ಮನ್ನಿಸಿರಿ ಎಂದು ಹೇಳಬೇಕು. ಪತಿಯು ಹೊರಗಿನಿಂದ ಬರಲು ಎಲ್ಲಾ ಕೆಲಸಗಳನ್ನು ಬಿಟ್ಟು ತಟ್ಟನೆ ಎದುರಿಗೆ ಹೋಗಿ ವಂದಿಸಿ ಅವನ ನಿರೂಪವನ್ನು ನಿರೀಕ್ಷಿಸಿ ಅವನ ಮನಸ್ಸಿನಂತೆ ನಡೆಯಬೇಕು. ನಾರಿಯು ಮನೆಯ ಹೊರಗೆ ಹೋಗುವ ನರನಾರಿಯರನ್ನು ನೋಡುತ್ತಿರಬಾರದು. ಮನೆಯೊಳಗೇ ಇರಬೇಕು. ಬೀದಿಯಲ್ಲಿ ಹೋಗುವವರನ್ನು ನೋಡಿದರೆ ಹಾನಿಯಾಗುವದು. ಲೋಪಾಮುದ್ರೆಯು ಹೀಗೆ ಹೊರಗೆ ನೋಡಿದವಳಲ್ಲ. ಪ್ರಾತಃಕಾಲ ಎದ್ದು ಮನೆಯನ್ನು ಗುಡಿಸಿ ಸಾರಿಸಿ ದೇವರ ಉಪಕರಣಗಳನ್ನು ಬೆಳಗಿ ಹೂವು

ಗಳನ್ನು ತಂದು ರಂಗೋಲಿಯನ್ನು ಹಾಕಿ ಗಂಧಾಕ್ಷತಾದಿಗಳನ್ನು ಮಾಡಿ ಪತಿಯ ಅನುಷ್ಠಾನಕ್ಕೆ ಸಿದ್ಧಪಡಿಸಿ ಪತಿಯು ಮನಸ್ಸಿನಂತೆ ನಡೆಯು ವಳು. ಪತಿಯ ಎಂಜಲನ್ನು ಉಣ್ಣುತ್ತಾ ಪತಿಯು ಊರಲ್ಲಿಲ್ಲದಿರಲು ಅತಿಥಿಗಳನ್ನೂ ಹಸುಗಳನ್ನೂ ಸೇವಿಸಿ ಪ್ರಸಾದವನ್ನು ಭುಜಿಸಬೇಕು. ಅತಿಥಿಗೆ ಅನ್ನವನ್ನು ಹಾಕಬೇಕು ಅಥವಾ ಹಸುವನ್ನು ಪೂಜಿಸಿ ಬಳಿಕ ಊಟಮಾಡಬೇಕು. ಮನೆಯನ್ನು ನಿರ್ಮಲವಾಗಿಡಬೇಕು. ಅಧ ರ್ಮವನ್ನು ಮಾಡಬಾರದು. ತಮ್ಮ ಊರಿನಲ್ಲಿ ಉತ್ಸವವಾಗುತ್ತಿರಲು ಬೇರೆ ಯಾವತೀರ್ಥಯಾತ್ರೆಗೂ ಹೋಗಬಾರದು. ಪತಿಯು ಸಂತೋಷದಿಂದಿರಲು ತಾನು ದುಃಖಿಸಬಾರದು. ಪತಿಯು ದುಃಖಿಸುವಾಗ ತಾನು ಸಂತೋಷಿಸ ಬಾರದು. ರಜಸ್ವಲೆಯಾದಾಗ ಮೌನವಾಗಿರಬೇಕು. ವೇದಗಳನ್ನು ಕೇಳಬಾರದು. ಪತಿಗೆ ಮುಖವನ್ನು ತೋರಿಸಬಾರದು. ಈ ರೀತಿಯಿಂದ ೪ ದಿನಗಳಾಚರಿಸಿ ಸ್ನಾನಮಾಡಿ ಬಳಿಕ ಪತಿಗೆ ಮುಖವನ್ನು ತೋರಿಸ ಬೇಕು ಪತಿಯು ಮನೆಯಲ್ಲಿಲ್ಲದಿರಲು ಮನದಲ್ಲಿ ಪತಿಯ ರೂಪವನ್ನು ಧ್ಯಾನಿಸಿ ಸೂರ್ಯಮಂಡಲವನ್ನು ನೋಡಬೇಕು ಪತಿಯ ಆಯುಷ್ಯಾಭಿ ವೃದ್ಧಿಗಾಗಿ ಅರಿಶಿನ, ಕುಂಕುಮ, ಚಂದ್ರ ಕಾಡಿಗೆ, ಕಂಠಸೂತ್ರ, ಹಣಿಗೆ ಗಳನ್ನು ಧರಿಸಬೇಕು. ಸುವಾಸಿನಿಯರು ತಾಂಬೂಲ ಹಾಕಿಕೊಳ್ಳಬೇಕು. ಕೈ ಕಡಗಗಳನ್ನೂ ಕಾಲು ಕಡಗಗಳನ್ನೂ ಧರಿಸಬೇಕು. ಹೆರಳು ಹಾಕಿ ಕೊಳ್ಳಬೇಕು. ಅಗಸಗಿತ್ತಿ, ಕುಂಟಣಿ, ಜೈನಸ್ತ್ರೀ, ದ್ರವ್ಯಹೀನೆ, ಪತಿನಿಂದ ಕಳಾದ ಸ್ತ್ರೀ ಇವರ ಗೆಳತನ ಮಾಡಿದರೆ ಹಾನಿಯುಂಟಾಗುವುದು. ಇವ ರೊಡನೆ ಮಾತಾಡಬಾರದು ಇದೇ ಪತಿವ್ರತೆಯ ಲಕ್ಷಣವು ಅತ್ತೆ ಮಾವಂದಿರು, ನಾದಿನಿ ಸಹೋದರಿಯರನ್ನು ಬಿಟ್ಟು ಬೇರೆ ಇದ್ದರೆ ನಾಯಿಯ ಜನ್ಮವು ಬರುವುದು. ಬೆತ್ತಲೆಯಾಗಿದ್ದು ಮೈಯುಜ್ಜಿಕೊಳ್ಳ ಬಾರದು. ಬರಳು, ಬನಕೆಗಳಮೇಲೆ ಕುಳಿತುಕೊಳ್ಳಬಾರದು ಯೋಗ್ಯ ಕಾರ್ಯಗಳಿಗಲ್ಲದೆ ತಿರುಗಬಾರದು ಹೊಸ್ತಿಲಲ್ಲಿಯೂ ಹಿರಿಯರೆದುರಿನಲ್ಲಿ ಯೂ ಕುಳ್ಳಿರಬಾರದು ಪತಿಯೊಡನೆ ವಾದಿಸಿ ದುಃಖವನ್ನುಂಟುಮಾಡ ಬಾರದು. ಪತಿಯು ನಪುಂಸಕನಾದರೂ, ರೋಗಿಯಾಗಿದ್ದರೂ, ಅವಿವೇಕಿ ಯಾಗಿದ್ದರೂ ಅವನನ್ನು ದೇವಸಮಾನನೆಂದು ತಿಳಿಯಬೇಕು. ಅವ

ಪನ್ನೇ ಹರಿಯೆಂದು ತಿಳಿಯಬೇಕು. ಅವನ ಮಾತಿನಂತೆ ನಡೆದರೆ ಈಶ್ವರ ಪ್ರೀತಿಯಾಗುವುದು. ಪತಿಯೊಪ್ಪಿದ ಸೀರೆ, ಕುಪ್ಪಸಗಳನ್ನು ಧರಿಸಬೇಕು. ಪತಿಯ ಮನಸ್ಸು ಕೆಟ್ಟಿರುವಾಗ ಶೃಂಗರಿಸಿಕೊಳ್ಳಬಾರದು. ಮನೆಯಲ್ಲಿ ಇಂಥಾ ಸಾಮಾನುಗಳಿಲ್ಲವೆಂದು ಹೇಳಬಾರದು ಮಕ್ಕಳ ಮುಖದಿಂದ ಹೇಳಿಸಬೇಕು. ಮನೆಯಲ್ಲಿ ಯಾರೂ ಇಲ್ಲದಿರಲು ಇಲ್ಲದ ವಸ್ತುವನ್ನು ಗುರ್ತಿಸಬೇಕು. ಇಂಥಾವಸ್ತುವೇ ಬೇಕೆಂದು ನಿರ್ಧರಿಸಿ ಹೇಳಬಾರದು. ಪತಿಗೆ ದೊರಕಿದುದರಲ್ಲಿಯೇ ತೃಪ್ತಳಾಗಬೇಕು. ಪುಷ್ಟರಾದವರನ್ನು ನೋಡಿ ಪತಿಯನ್ನು ನಿಂದಿಸಬಾರದು. ತೀರ್ಥಯಾತ್ರೆಯ ಯೋಚನೆಯನ್ನು ಬಿಟ್ಟು ಪತಿಯ ಪಾದೋದಕವನ್ನು ತೀರ್ಥವೆಂದು ತಿಳಿಯಬೇಕು. ಈ ತೀರ್ಥವು ಭಾಗೀರಥಿಗೆ ಸಮವು ಎಂದು ತಿಳಿದು ಸೇವಿಸಬೇಕು. ಇದರಿಂದ ತ್ರಿಮೂರ್ತಿಗಳೂ ತುಷ್ಟರಾಗುವರು. ಪತಿಯನುಜ್ಞೆ ಹೊಂದಿ ವ್ರತಗಳನ್ನು ಮಾಡಬೇಕು ತನ್ನ ಬುದ್ಧಿಯಿಂದ ವ್ರತಗಳನ್ನು ಮಾಡಿದರೆ ಪತಿಯ ಆಯುಸ್ಸು ಕಮ್ಮಿಯಾದೀತು. ಇಂಥವಳು ಪತಿಯೊಡನೆ ನರಕಕ್ಕೆ ಹೋಗುವಳು ಎಂದು ವೇದವಾಕ್ಯವಿರುವುದು ಎಂದು ದೇವಗುರುವು ಹೇಳಿದನು ಪತಿಗೆ ತಟ್ಟನೆ ಸಿಟ್ಟಿನಿಂದ ಕಟ್ಟುತ್ತರವನ್ನು ಕೊಡಲು ನಾಯಿಯೂ ನರಿಯೂ ಆಗುವಳು. ನಾರಿಯು ಪತಿಯ ಎಂಜಲನ್ನು ತಿನ್ನುತ್ತಾ ಪತಿ ಪಾದತೀರ್ಥವನ್ನು ಸೇವಿಸಬೇಕು ಪತಿಯೇ ರತಿಪತಿ ಪಿತನೆಂದೂ, ಶಿತಿಕಂಠನೆಂದೂ ತಿಳಿಯಬೇಕು ವನಭೋಜನಕ್ಕೂ ನೆರೆಹೊರೆಯವರಾದ ಇಷ್ಟರಾದವರಮನೆಗೆ ಸದಾ ಹೋಗಬಾರದು. ಪತಿಯು ದುರ್ಬಲನಾಗಲೀ ಬಲಿಷ್ಠನಾಗಲೀ ನಿಂದಿಸಬಾರದು ಪತಿಯು ಹೇಗಿದ್ದರೂ ರತಿಪತಿ ಪಿತನೆಂದು ತಿಳಿದು ಅವನನ್ನು ಸೇವಿಸಬೇಕು. ಅತ್ತೆಮಾವ ಪತಿಗಳ ಎದುರಾಗಿನಿಂತು ಮಾತಾಡಬಾರದು. ಹಾಸ್ಯಮಾಡಬಾರದು. ಇದರಿಂದ ಪತಿಯ ಆಯುಸ್ಸು ವ್ಯಯವಾಗುವುದು ಅತ್ತೆ ಮಾವಂದಿರನ್ನು ಬೇರೆ ಇಟ್ಟು ಪತಿಯೊಡನೆ ಹಿತವಾದ ಬೇರೆ ಸಂಸಾರ ಮಾಡಿದರೆ ಕರಡಿಯಾಗಿಹುಟ್ಟಿ ಕಾಡಿನಲ್ಲಿ ತಿರುಗಬೇಕಾಗುವುದು ಪತಿಯು ಸಿಟ್ಟಿನಿಂದ ತಟ್ಟನೆ ಪೆಟ್ಟುಕೊಟ್ಟರೂ ತನ್ನನ್ನು ಹೊಡೆದನೆಂದು ಕಡು ಯೋಚನೆಗೈದರೆ ಹೆಣ್ಣುಹುಲಿಯಾಗಿ ಹುಟ್ಟಿ ಕಾಡಿನಲ್ಲಿ ಸಂಚರಿಸುವಳು ಪರಪುರುಷನನ್ನು ಪರಿಪರಿಯಾಗಿ ನಿರುಕಿಸಿದರೆ ಮೇಲುಗಣ್ಣುಳ್ಳವಳಾಗಿ

ಹುಟ್ಟುವಳು. ಪತಿಗೆ ವಂಚಿಸಿ ತಿಂದರೆ ಊರುಹಂದಿಯಾಗುವಳು. ಬಳಿಕ ಭೂತಭೇತಾಳಗಳಾಗಿ ಹುಟ್ಟಿ ತನ್ನ ಮಲವನ್ನು ತಾನೇ ತಿನ್ನುತ್ತಾ ಮರದಲ್ಲಿ ನೇತಾಡಬೇಕಾಗುವುದು. ಪತಿಯೆದುರಿನಲ್ಲಿ ತಟ್ಟನೆ ಸಿಟ್ಟಾಗಿ ನಿಷ್ಟುರವನ್ನು ನುಡಿದರೆ ಮೂಕಿಯಾಗಿ ಏಳು ಜನ್ಮಗಳಲ್ಲಿಯೂ ಕಷ್ಟಬಡವೆಯಾಗುವಳು. ಪತಿಯು ತನ್ನೆದುರಿನಲ್ಲಿ ಎರಡನೇ ಹೆಂಡತಿಯನ್ನು ಮದುವೆಯಾದರೆ ಆ ಸ್ತ್ರೀಯಲ್ಲಿ ವೈರವನ್ನು ಹಿಡಿದರೆ ಏಳುಜನ್ಮಗಳಲ್ಲಿ ದುರ್ಭಾಗ್ಯಳಾಗುವಳು. ಅನ್ಯಪುರುಷನಲ್ಲಿ ದೃಷ್ಟಿಯನ್ನಿಟ್ಟು ರಮಿಸಲು ಚಾಂಡಾಲಜನ್ಮದಲ್ಲಿ ಹುಟ್ಟಿ ಸದಾ ದುಃಖವನ್ನೂ ಬಡತನವನ್ನೂ ಹೊಂದುವಳು. ಪತಿಯು ಹೊರಗಿನಿಂದ ಬರಲು ತಾನು ಎದುರಾಗಿಬಂದು ಪಾದಗಳನ್ನು ತೊಳೆದು ಬೀಸಣಿಗೆಯಿಂದ ಬೀಸಿ ಬಳಲಿಕೆಯನ್ನು ಪರಿಹರಿಸಬೇಕು. ಮೆಲ್ಲುಡಿಯಿಂದ ಪಾದಗಳನ್ನೊತ್ತಬೇಕು. ಪತಿಯು ಸಂತುಷ್ಟನಾದರೆ ತ್ರಿಮೂರ್ತಿಗಳೂ ತುಷ್ಟರಾಗುವರು. ತಾಯಿತಂದೆಗಳೂ ನೆಂಟರೂ ಅಣ್ಣತಮ್ಮಂದಿರೂ ಏನು ಕೊಟ್ಟಾರು ? ದೇವಸಮನಾದ ಪತಿಯು ಇಹಪರಸುಖಗಳನ್ನು ಕೊಡುವನು. ದೇವ ಗುರು ತೀರ್ಥಗಳಗಿಂತಲೂ ಪತಿತೀರ್ಥವೇ ಶ್ರೇಷ್ಠವೆಂದು ತಿಳಿಯುವವಳೇ ಪತಿವ್ರತೆಯು. ಜೀವವಿರಲು ದೇಹವು ಪವಿತ್ರವು. ಜೀವವು ಹೋದಬಳಿಕ ಆ ಹೆಣವು ತಿರಸ್ಕೃತವಾಗುವುದು. ಸ್ತ್ರೀಯಳಿಗೆ ಪತಿಯೇ ಪ್ರಾಣವು. ಪತಿಯಿಲ್ಲದಿರಲು ಆಕೆಯು ಅಶುಚಿಯಾಗುವಳು. ಪತಿಯೇ ಪ್ರಾಣವೆಂದು ತಿಳಿಯಬೇಕು. ಪತಿಯಿಲ್ಲದವಳಿಗೆ ಎಲ್ಲವೂ ಅಮಂಗಳವು. ವಿಧವೆಯು ಹೆಣಕ್ಕೆ ಸಮವು. ಸುತರಿಲ್ಲದಿರಲು ಇನ್ನೂ ಅಧಮವು. ಪಯಣ ಹೊರಡುವಾಗ ವಿಧವೆಯು ಎದುರಾಗಿ ಬರಲು ದಾರಿಗನಿಗೆ ಮರಣವುಂಟಾದೀತು ! ಇದು ಸತ್ಯವು. ಪುತ್ರವಂತೆಯಾದರೆ ಅಶುಭವಲ್ಲ. ತಾಯಿಯು ವಿಧವೆಯಾದರೂ ಸುತರಿಗೆ ಶುಭಶಕುನವು. ಸುತರಿಲ್ಲದ ವಿಧವೆಯರನ್ನು ವಂದಿಸಬಾರದು. ಆಕೆಯ ಆಶೀರ್ವಾದದಿಂದ ನಮಗೆ ಅಮಂಗಲವಾಗುವುದು ಸತ್ಯವು. ಆಕೆಯ ಶಾಪವು ಮರಣಕರವು. ಅವರೊಡನೆ ಮಾತಾಡಬಾರದು. ಪತಿಯೊಡನೆ ಪಯಣಗೈದರೆ ಸರ್ವವೈಭವ ಉಂಟಾಗುವುದು. ಚಂದ್ರನಿಂದ ನಕ್ಷತ್ರಗಳೂ ಮೇಘದಿಂದ ಮಿಂಚೂ ಹೊಳೆಯುತ್ತಿವೆ. ಚಂದ್ರನು ಅಸ್ತನಾದ ಬಳಿಕ ಕಾಂತಿಹೀನವಾಗುವುವು. ಹೀಗೆ ಪತಿಯೊಡನೆ ಎಲ್ಲವೂ ಹೋಗು

ವುದು. ಪತಿಯೊಡನೆ ಸಹಗಮನ ಮಾಡುವುದು ಮುಖ್ಯವೆಂದು ಶ್ರುತಿ ಗಳು ಹೇಳುವುವು. ಪತಿವ್ರತಾ ಧರ್ಮದಿಂದ ನಾಲ್ವತ್ತೆರಡು ತಲೆಯುವರು ಉದ್ಧೃತರಾಗುವರು.ಪತಿವ್ರತದೊಡನೆ ಸಹಗಮನಮಾಡಲು ಒಂದೊಂದು ಅಡಿಯನ್ನಿಡಲು ಅಡಿಗಡಿಗೆ ಅಶ್ವಮೇಧಫಲ ಉಂಟಾಗುವುದು. ಪತಿಯು ಪಾಪಿಯಾದರೆ ಯಮದೂತರು ಅವನನ್ನು ಕಟ್ಟಿ ಒಯ್ಯುವರು. ಆದರೆ ಅವನ ಸತಿಯು ಪತಿವ್ರತೆಯಾಗಿ ಹಿತದಿಂದ ಸಹಗಮನ ಮಾಡಿ ದರೆ ಹಾವನ್ನು ಹದ್ದು ಸದ್ದಿಲ್ಲದೊಯ್ಯುವಂತೆ ಪತಿಯನ್ನು ಜತನದಿಂದ ಸ್ವರ್ಗಕ್ಕೊಯ್ಯುವಳು. ಸತಿಯು ಸಹಗಮನಮಾಡಲು ನೋಡಿ ಯಮ ದೂತರು ಓಡಿಹೋಗುವರು. ಕಾಲನ ಕಾರ್ಯವು ಎಂದಿಗೂ ನಡೆಯದು. ಯಮದೂತರು ಪತಿವ್ರತೆಯ ಚಿತಿಯನ್ನುನೋಡಿ ಹೆದರುವರು. ಸೂರ್ಯ ನೂ ಹೆದರಿ ಮಂದತೇಜನಾಗುವನು. ನಕ್ಷತ್ರಗಳೂ ಆ ಕ್ಷಣವೇ ಈಕೆಯು ತನ್ನ ಸ್ಥಳವನ್ನು ಹೊಂದುವಳೆಂದು ಹೆದರುವುವು. ಸ್ತ್ರೀಯು ಪತಿಯೊಡನೆ ಸಂತೋಷದಿಂದ ಸ್ವರ್ಗದಲ್ಲಿ ಸುಖಿಸುವಳು. ಸತಿಯು ಅತಿಹಿತದಿಂದ ದೇಹವನ್ನು ಅಗ್ನಿಯಲ್ಲಿ ಬಿಟ್ಟರೆ ಆಕೆಯ ದೇಹವಲ್ಲಿರುವ ಮೂರುಕೋಟಿ ರೋಮಗಳಷ್ಟು ಸಂಖ್ಯಾಪರಿಮಿತ ವರ್ಷಗಳು ಪತಿ ಯೊಡನೆ ಸ್ವರ್ಗದಲ್ಲಿ ಆನಂದದಿಂದಿರುವಳು.

तिस्रकोट्यर्धकोटीचयानिरोमाणिमानवे ॥
तावत्कालंवसेत्स्वर्गेभर्तारंसानुगच्छति ॥ १ ॥

ತಿಸ್ರಃಕೋಟ್ಯರ್ಧಕೋಟೀಚಯಾನಿರೋಮಾಣಿಮಾನವೇ ।
ತಾವತ್ಕಾಲಂವಸೇತ್ ಸ್ವರ್ಗೇಭರ್ತಾರಂ ಸಾನುಗಚ್ಛತಿ ॥

(ಪರಾಶರಸ್ಮೃತಿ)

(ಸಹಗಮನ ಮಾಡಿದ ಸ್ತ್ರೀಯು ನರದೇಹದಲ್ಲೆಷ್ಟು ರೋಮಗಳಿ ರುವುವೋ ಅಷ್ಟು ವರ್ಷಗಳು ಎಂದರೆ ಮೂರೂವರೆಕೋಟಿ ವರ್ಷಗಳು ಪತಿಯೊಡನೆ ಸುಖವಾಗಿರುವಳು.)

ब्रह्मघ्नोवाकृतघ्नोवामित्रघ्नोवापिमानव ॥
तंपुनातितदानारीत्यांगिरसभाषितम ॥ २ ॥

ಬ್ರಹ್ಮಘ್ನೋವಾಕೃತಘ್ನೋವಾಮಿತ್ರಘ್ನೋವಾಪಿಮಾನವಃ|
ತಂಪುನಾತಿತದಾನಾರೀ ಇತ್ಯಾಂಗೀರಸಭಾಷಿತಂ ||

ಬ್ರಹ್ಮಘ್ನನಾಗಲೀ ಕೃತಘ್ನನಾಗಲೀ ಮಿತ್ರಘ್ನನಾಗಲೀ ಇವನ ಸತಿಯು ಈರೀತಿ ಸಹಗಮನವಮಾಡಿದರೆ ತನ್ನ ನಾಲ್ವತ್ತೆರಡು ಕುಲದವರನ್ನೂ ಸ್ವರ್ಗಕ್ಕೆ ಕರೆದೊಯ್ಯುವಳು ಎಂದು ಅಂಗೀರಸರು ಹೇಳಿರುವರು ಈಕೆಯ ತಾಯಿ ತಂದೆಗಳು ಧನ್ಯರು. ಇಪ್ಪತ್ತೊಂದು ಕುಲದವರು ಉದ್ಧೃತರಾಗುವರು. ಪತಿವ್ರತೆಯು ಸಹಗಮನದಿಂದ ಇಂಥಾ ಪುಣ್ಯವಿದೆ ಸತಿಯು ದುರಾಚಾರಿಣಿಯಾಗಿಯೂ ಜಾರಿಣಿಯಾಗಿಯೂ ಇದ್ದರೆ ಈಕೆಯ ಉಭಯಕುಲದಲ್ಲಿ ನಾಲ್ವತ್ತೆರಡು ಕುಲದವರನ್ನೂ ನರಕಕ್ಕೆ ಒಯ್ಯುವಳು. ಇವರೊಡನೆ ಈಕೆಯು ಮೂರೂವರೆಕೋಟಿ ವರ್ಷಗಳು ನರಕದಲ್ಲಿರುವಳು ಪತಿವ್ರತೆಯು ಭೂಮಿಯಲ್ಲಿ ನಡೆದರೆ ಭೂದೇವಿಯು ಪುನೀತಳಾಗುವೆನೆನ್ನುವಳು. ಸೂರ್ಯ ಚಂದ್ರರೂ ಪತಿವ್ರತಯ ಮೈಯಲ್ಲಿ ತಮ್ಮ ಕಿರಣಗಳು ಬೀಳಲು ತಾವು ಪಾವನರಾಗುವೆವೆನ್ನುವರು. ವಾಯುವೂ ವರುಣನೂ ಹೀಗೆಯೇ ಹೇಳುವರು. ಪ್ರತಿಮನೆಯಲ್ಲಿಯೂ ಸುಂದರಿಯರಾಗಿಯೂ ಧನಿಕರಾಗಿಯೂ ಇರುವ ಸ್ತ್ರೀಯರಿರುವರು ಆದರೇನು ? ಇಂಥಾ ಪತಿವ್ರತೆಯು ಇದ್ದರೆ ಈಕೆಯಿಂದ ವಂಶೋದ್ಧಾರವಾಗುವುದು. ನೂರುಜನ್ಮಗಳ ಸುಕೃತದಿಂದ ಇಂಥಾ ಪತಿವ್ರತೆಯು ಲಭಿಸುವಳು ಪತಿವ್ರತೆಯಿಂದ ಚತುರ್ವಿಧ ಪುರುಷಾರ್ಥಗಳು ಸಿದ್ಧಿಸುವುವು. ಸತಿಯು ಪತಿವ್ರತೆಯಾಗಿದ್ದರೆ ಆಕೆಯ ಪುಣ್ಯಾನುಸಾರವಾಗಿ ಫಲವುಂಟಾದೀತು. ಯಾರ ಮಂದಿರದಲ್ಲಿ ಇಂಥಾ ಪತಿವ್ರತೆಯಿಲ್ಲವೋ ಅವರಿಗೆ ಯಾವ ಇಷ್ಟಾರ್ಥವೂ ಉಂಟಾಗುವುದಿಲ್ಲ. ಯಾಗಾದಿ ಕರ್ಮಗಳೂ ಆಗಲಾರವು. ಪತಿವ್ರತೆಯಲ್ಲದ ಸತಿಯಿರಲು ಕಾಡು ದೂರದಲ್ಲಿಲ್ಲ. ವ್ಯರ್ಥವಾಗಿ ಹುಟ್ಟಿ ಕರ್ಮಭ್ರಷ್ಟನಾಗುವನು. ಪತಿವ್ರತೆಯನ್ನುಳ್ಳವನಿಗೆ ಸರ್ವಪುಣ್ಯವೂ ಉಂಟಾಗುವುದು. ಅವರಿಗೆ ಪಥ

ಲೋಕ ಸಾಧಕನಾದ ಪುತ್ರನಾಗುವನು. ಸ್ತ್ರೀಯಳು ಹೊರತು ನರನಿಗೆ ಬೇರೆ ಕರ್ಮಗಳಿಲ್ಲ ಪಿತೃ ದೇವ ಕರ್ಮಗಳು ಅವನಿಗಿಲ್ಲ. ಗಂಗಾಸ್ನಾನಕ್ಕಿಂತಲೂ ಪತಿವ್ರತೆಯ ದರ್ಶನವು ಅಧಿಕ ಪುಣ್ಯಕರವು ಪತಿವ್ರತಾದರ್ಶನದಿಂದ ಮಹಾಪಾಪಿಯೂ ಏಳುಜನ್ಮಗಳ ಪಾಪಗಳನ್ನು ಕಳೆದುಕೊಳ್ಳುವನು. ಪತಿವ್ರತೆಯರ ಆಚಾರಗಳನ್ನು ಆ ಪತಿವ್ರತೆಗೆ ಬೃಹಸ್ಪತ್ಯಾಚಾರ್ಯರು ವಿಸ್ತಾರವಾಗಿ ಹೇಳಿದರು ಎಂದು ಸರಸ್ವತೀಗಂಗಾಧರನು ಹೇಳಿದನೆಂಬಲ್ಲಿಗೆ ಪತಿವ್ರತಾಧರ್ಮನಿರೂಪಣೆಯೆಂಬ ಮೂವತ್ತೊಂದನೇ ಅಧ್ಯಾಯವು ಮುಗಿದುದು.

---

## ೩೨ನೆಯ ಅಧ್ಯಾಯ.

---

ಶ್ರೀ ಗಣೇಶಾಯನಮಃ ॥ ದೇವಗುರುವು ಇನ್ನು ವಿಧವೆಯರ ಆಚಾರವನ್ನು ಹೇಳುವನು ಶ್ರೋತೃಗಳಿರಾ, ಇದನ್ನು ಕೇಳಿರಿ — ಕೆಲವರು ಋಷಿಗಳು ಬೃಹಸ್ಪತ್ಯಾಚಾರ್ಯರನ್ನು ಕುರಿತು ಸ್ವಾಮಿ, ಪತಿಯು ಹತ್ತಿರದಲ್ಲಿರಲು ಮೃತನಾದರೆ ಅವನ ಸತಿಯು ಸಹಗಮನ ಮಾಡಬೇಕು ಆಗ್ಗ ಗರ್ಭಿಣಿಯಾಗಿದ್ದರೆ ಏನುಮಾಡಬೇಕು ಎಂದು ಕೇಳಿದರು. ದೇವಗುರುವು ಹೇಳುವನು. ಋಷಿಗಳಿರಾ ಕೇಳಿರಿ! ನಾರಿಯು ಪತಿಯು ಮೃತನಾದರೆ ಸಹಗಮನ ಮಾಡಬೇಕು. ಬಸುರಿಯಾಗಿರಲು ಸಹಗಮನ ಮಾಡಬಾರದು. ಏಕೆಂದರೆ ಮುಂದೆ ಹುಟ್ಟುವ ಮಗನು ಆಕೆಯ ಸ್ತನ್ಯಪಾನ ಮಾಡಬೇಕಾಗುವುದು. ಸಹಗಮನ ಮಾಡಿದರೆ ಆಗ ಮಹಾಪಾಪ ಉಂಟಾಗುವುದು. ಪತಿಯು ದೂರದಲ್ಲಿ ಮೃತನಾದರೆ ಸಹಗಮನ ಮಾಡಕೂಡದು. ವಿಧವಾಧರ್ಮದಂತೆ ನಡೆದರೆ ಸಹಗಮನದ ಫಲವುಂಟಾಗುವುದು. ಪತಿಯು ಮೃತನಾಗಲು ಕೇಶವಪನ ಮಾಡಿಸಿಕೊಳ್ಳಬೇಕು. ಕೂದಲನ್ನು ಇಟ್ಟುಕೊಂಡರೆ ಈಕೆಯ ಕೂದಲಿನಿಂದ ಪತಿಯನ್ನುಕಟ್ಟಿ ನರಕಯಾತನೆ ಮಾಡಿಸುವರು. ಆದುದರಿಂದ ಕೂದಲನ್ನು ತೆಗೆಸಬೇಕು. ನಿತ್ಯವೂ ಸ್ನಾನವಮಾಡಬೇಕು. ದಿನಕ್ಕೊಂದು ಊಟ ಮಾಡಬೇಕು,

ಒಂದು ಧಾನ್ಯದ ಅನ್ನವನ್ನೇ ತಿನ್ನಬೇಕು. ಮೂರುದಿನ ಉಪವಾಸ ಮಾಡಬೇಕು. ಪ್ರತಿಪಕ್ಷದಲ್ಲಿಯೂ ಉಪವಾಸ ಮಾಡಬೇಕು. ಚಾಂದ್ರಾಯಣದಂತೆ ಗ್ರಾಸ ತೆಗೆದುಕೊಳ್ಳಬೇಕು. ಗ್ರಾಸವನ್ನು ಶುಕ್ಲಪಕ್ಷದಲ್ಲಿ ಹುಣ್ಣಿಮೆಯವರೆಗೆ ಏರಿಸಬೇಕು. ಕೃಷ್ಣಪಕ್ಷದಲ್ಲಿ ಇಳಸುತ್ತಾ ಬರಬೇಕು. ಶಕ್ತಿಯಿಲ್ಲದಿರಲು ಏಕಭೋಜನ ಮಾಡಬೇಕು. ಅಥವಾ ಫಲಾಹಾರವನ್ನಾಗಲೀ ಶಾಖಾಹಾರವನ್ನಾಗಲೀ ಗ್ರಹಿಸಬೇಕು. ಅಥವಾ ಪ್ರಾಣಧಾರಣೆಗೆ ಮಾತ್ರ ಹಾಲನ್ನುತೆಗೆದುಕೊಳ್ಳಬೇಕು. ಮಂಚದಮೇಲೆ ಮಲಗಬಾರದು. ಮಲಗಿದರೆ ಪತಿಯನ್ನು ತನ್ನೊಡನೆ ಘೋರವಾದ ರೌರವ ನರಕದಲ್ಲಿ ಬೀಳಸುವರು. ಅಭ್ಯಂಜನ ಮಾಡಬಾರದು. ಕೈ ಕಾಲುಗಳನ್ನು ಹಿಸುಕಿಸಬಾರದು. ಗಂಧ, ಹೂವು, ತಾಂಬೂಲ, ವಾಸನಾದ್ರವ್ಯಗಳು ಇವನ್ನು ಸೇವಿಸಬಾರದು. ಸುತರಿಲ್ಲದ ಸತಿಯು ಸುತನಂತೆಯೇ ಎಳ್ಳುದರ್ಭೆಗಳಿಂದ ಗೋತ್ರವನ್ನುಹೇಳಿ ತರ್ಪಣ ಕೊಡಬೇಕು. ಪತಿಯು ವಿಷ್ಣುಸದೃಶನೆಂದು ತಿಳಿದು ನಿತ್ಯವೂ ವಿಷ್ಣುವನ್ನು ಪೂಜಿಸಬೇಕು. ಗುರುನಿರೂಪದಂತೆ ತೀರ್ಥಯಾತ್ರೆಯನ್ನೂ, ಉಪವಾಸ ವ್ರತವನ್ನೂ ಮಾಡಬೇಕು. ಸುವಾಸಿನಿಯಾಗಿದ್ದಾಗ ಬಯಸುತ್ತಿದ್ದ ವಸ್ತುವನ್ನು ವಿದ್ವಾಂಸರಾದ ವಿಪ್ರರಿಗೆ ದಾನ ಕೊಡಬೇಕು. ವಿಷ್ಣುಸ್ಮರಣೆಯಿಂದ ವೈಶಾಖ ಕಾರ್ತಿಕ ಮಾಘ ಮಾಸಗಳಲ್ಲಿ ಪ್ರಾತಃಸ್ನಾನ ಮಾಡಬೇಕು. ವೈಶಾಖದಲ್ಲಿ ಜಲಕುಂಭದಾನವನ್ನೂ, ಕಾರ್ತಿಕದಲ್ಲಿ ದೀಪದಾನವನ್ನೂ, ದಕ್ಷಿಣೆಯೊಡನೆ ಘೃತದಾನವನ್ನೂ ಮಾಘದಲ್ಲಿ ಘೃತದಾನವನ್ನೂ ಮಾಡಬೇಕು. ವೈಶಾಖದಲ್ಲಿ ಅರವಟ್ಟಿಗೆಯನ್ನಿಟ್ಟು ನಿರ್ಮಲೋದಕವನ್ನು ಕೊಡಬೇಕು. ಶಿವಾಲಯದಲ್ಲಿ ನಿರ್ಮಲೋದಕದಿಂದ ಈಶ್ವರನಿಗೆ ಅಭಿಷೇಕಮಾಡಿ ಗಂಧಪುಷ್ಪಾದಿಗಳಿಂದ ಪೂಜಿಸಲು ಅತಿ ಪುಣ್ಯವುಂಟು. ವಿಪ್ರರ ಮನೆಗಳಲ್ಲಿ ಶಕ್ತಿಗನುಸಾರವಾಗಿ ನೀರನ್ನು ಹಾಕಬೇಕು. ಅತಿಥಿಗಳಿಗೆ ಅನ್ನವನ್ನು ಹಾಕಬೇಕು. ಯಾತ್ರಿಕರಿಗೆ ಛತ್ರ ಪಾದುಕೆಗಳನ್ನು ಕೊಡಬೇಕು. ಯಾತ್ರಿಕರು ಮನೆಗೆಬರಲು ಅವರ ಪಾದಗಳನ್ನು ತೊಳೆದು ಹೊದಿಯಲು ಬಟ್ಟೆಗಳನ್ನು ಕೊಡಬೇಕು. ಗಂಧವನ್ನೂ ಕರ್ಪೂರ ವೀಳಯವನ್ನೂ ಜಲಪಾತ್ರೆಯನ್ನೂ ಪಾನಕವನ್ನೂ, ದ್ರಾಕ್ಷೆ ಬಾಳೆಯ ಹಣ್ಣುಗಳನ್ನೂ ವಿಪ್ರರಿಗೆ ಕೊಡಬೇಕು. ಪತಿಯನ್ನು ನೆನೆದು ವಿಪ್ರರಿಗೆ ದಾನ ಕೊಡ

ಬೇಕು. ಕಾರ್ತೀಕದಲ್ಲಿ ಜವೆಯ ಅನ್ನವನ್ನು ಊಟ ಮಾಡಬೇಕು. ಬದನೆಕಾಯಿ, ಉದ್ದು, ಇಂಗು, ಉಪ್ಪು, ಎಣ್ಣೆ, ಜೇನುತುಪ್ಪ ಇವು ಗಳನ್ನು ಸೇವಿಸಬಾರದು. ಕಂಚಿನಪಾತ್ರೆಯನ್ನೂ ದ್ವಿದಳವನ್ನೂ ಬಿಡ ಬೇಕು. ಏಕಚಿತ್ತದಿಂದಿರಬೇಕು. ಮುತ್ತುಗದೆಲೆಯಲ್ಲಿ ಊಟ ಮಾಡ ಬೇಕು. ವ್ರತೋದ್ಯಾಪನೆಗಳನ್ನು ಮಾಡಬೇಕು. ಕಂಚಿನಪಾತ್ರೆಯಲ್ಲಿ ತುಪ್ಪವನ್ನು ದಾನ ಮಾಡಬೇಕು. ವಿಪ್ರರಿಗೆ ಮಂಚಗಳನ್ನು ಕೊಡ ಬೇಕು. ತಾನು ನೆಲದಲ್ಲಿ ಮಲಗಬೇಕು. ತಾನು ಬಿಟ್ಟ ಉತ್ತಮ ವಸ್ತು ಗಳನ್ನು ದಾನ ಮಾಡಬೇಕು. ರಸದ್ರವ್ಯವನ್ನು ಒಂದು ತಿಂಗಳು ಬಿಡ ಬೇಕು. ಹಾಲು, ಮೊಸರುಗಳನ್ನು ಬಿಟ್ಟು ಉದ್ಯಾಪನೆ ಮಾಡಬೇಕು. ಶಕ್ತಿಯಿದ್ದಷ್ಟು ಗೋದಾನ ಮಾಡಬೇಕು. ವಿಶೇಷ ವ್ರತಗಳನ್ನೂ ದೀಪ ದಾನವನ್ನೂ ಮಾಡಬೇಕು. ಇದರ ಮಹಿಮೆಯು ಅನಂತವಾಗಿದೆ. ಬೇರೆ ಯಾದ ದಾನಗಳು ದೀಪದಾನದ ಹದಿನಾರನೇ ಭಾಗಕ್ಕೆ ಸಮವಾಗದು. ಸೂರ್ಯೋದಯ ಕಾಲದಲ್ಲಿ ಮಾಘಸ್ನಾನ ಮಾಡಬೇಕು. ಲಾಡುಗಳನ್ನೂ ಎಳ್ಳು, ಖರ್ಜೂರಾದಿಗಳಿಂದ ಮಾಡಿದ ಭಕ್ಷ್ಯಗಳನ್ನೂ ದಕ್ಷಿಣೆಯೊಡನೆ ವಿಪ್ರರಿಗೆ ದಾನ ಮಾಡಬೇಕು. ಸಕ್ಕರೆ, ಏಲಕ್ಕಿ, ತುಪ್ಪಗಳಿಂದ ಮಾಡಿದ ಹೋಳಿಗೆಯನ್ನು ಯತಿಗಳಿಗೆ ಭೋಜನಮಾಡಿಸಬೇಕು. ಚಳಿಗಾಲದಲ್ಲಿ ವಿಪ್ರರಿಗೆ ಶೀತ ನಿವಾರಣೆಗಾಗಿ ಬಟ್ಟೆಗಳನ್ನೂ, ಕಟ್ಟಿಗೆಗಳನ್ನೂ ಕೊಡ ಬೇಕು. ಮಂಚ, ಚಿತ್ರಕರವಾದ ಕೆಂಪುಬಟ್ಟೆ, ಕಂಬಳಿಗಳನ್ನು ಕೊಡ ಬೇಕು. ಶೀತನಿವಾರಣೆಗಾಗಿ ಔಷಧಿಯನ್ನೂ, ಏಲಕ್ಕಿ, ಪಚ್ಚಕರ್ಪೂರ ದಿಂದ ಕೂಡಿದ ತಾಂಬೂಲವನ್ನೂ ಕೊಡಬೇಕು. ವರ್ಷಗ್ರಾಸದೊಡನೆ ಮನೆಯನ್ನು ದಾನ ಮಾಡಬೇಕು ಯಾತ್ರಿಕರಿಗೆ ಪಾದರಕ್ಷೆ ಕೊಡ ಬೇಕು. ಗಂಧ ಪುಷ್ಪಾದಿಗಳಿಂದ ಕೇಶವನನ್ನು ಪೂಜಿಸಬೇಕು. ಶಂಕರ ನಿಗೆ ರುದ್ರಾಭಿಷೇಕ ಮಾಡಬೇಕು. ಧೂಪ, ದೀಪ, ನೈವೇದ್ಯಗಳಿಂದ ಷೋಡಶೋಪಚಾರ ಪೂಜೆ ಮಾಡಬೇಕು. ದೀಪಗಳನ್ನು ಹಚ್ಚಿಸಬೇಕು. ಸುಗಂಧದ್ರವ್ಯಗಳನ್ನೂ ಕರ್ಪೂರ ಏಲವಂಗಯುಕ್ತವಾದ ತಾಂಬೂಲವನ್ನೂ ಭಕ್ತಿಯಿಂದರ್ಪಿಸಬೇಕು. ಪತಿಯನ್ನು ಧ್ಯಾನಿಸಿ ನಾರಾಯಣನನ್ನು ಭಕ್ತಿ ಯಿಂದ ಪೂಜಿಸಬೇಕು. ಎಣ್ಣೆನಮೇಲೆ ಕಳ್ಳಿರಬಾರದು. ಕುಪ್ಪಸ ಧರಿಸಬಾರದು. ಬಿಳೀ ವಸ್ತ್ರವನ್ನುಡಬೇಕು. ಕೆಂಪುಸೀರೆಯನ್ನೂ ಚಿತ್ರ

ವಸ್ತ್ರವನ್ನೂ ಉಡಲು ಮಹಾದೋಷವು. ಮಗನ ಮಾತಿನಂತೆ ನಡೆಯಬೇಕು. (आत्मावैपुत्रनमासि) "ಆತ್ಮಾವೈಪುತ್ರನಾಮಾಸಿ" (ತಾನೇ ಪುತ್ರನಾಗಿ ಹುಟ್ಟುವನು) ಎಂದು ವೇದಾಗಮಗಳು ಹೇಳುವುವು. ಪತಿಯು ದೆಸೆಯಿಂದ ಪುತ್ರನು ಹುಟ್ಟುವನು. ಆದುದರಿಂದ ಸುತನಮಾತಿನಂತೆ ವರ್ತಿಸಬೇಕು. ಈ ರೀತಿಯಿಂದ ನಡೆದರೆ ಇಂಥಾ ವಿಧವೆಗೆ ಸಹಗಮನ ಫಲ ಉಂಟಾಗುವುದು. ಪಾಪಿಯಾದ ಪತಿಯು ಮೃತನಾಗಲು ಕೃತಾಂತ ದೂತರು ಅವನನ್ನು ನರಕಕ್ಕೆ ನೂಕುವರು. ಸತಿಯು ತನ್ನ ಧರ್ಮದಲ್ಲಿರಲು ಈಕೆಯು ಮೃತಳಾಗಲು ಪತಿಯನ್ನು ಸ್ವರ್ಗಕ್ಕೊಯ್ಯುವಳು ಎಂದು ದೇವಗುರುವು ಸುರರೆಲ್ಲರನ್ನೂ ಕುರಿತು ಈರೀತಿ ಧರ್ಮವನ್ನು ಬೋಧಿಸಿ ಲೋಪಾಮುದ್ರೆಯನ್ನು ಸ್ತುತಿಸಿದನು. ಪತಿವ್ರತೆಯು ಭಾಗೀರಥಿಗೆ ಸಮಾನಳು. ಈಕೆಯ ಸುತನು ಶಂಕರನಿಗೆ ಸಮಾನನು. ಇವರನ್ನು ಪೂಜಿಸಬೇಕು ಎಂದು ದೇವಗುರುವು ಹೇಳಿದನು.

ಎಲೈ ಬಾಲೆಯೇ, ಈಗ ನೀನು ಯೋಚಿಸಿ ಇಷ್ಟವಾದುದನ್ನು ಮಾಡು. ದುಃಖವನ್ನುಬಿಟ್ಟು ನನ್ನ ಮಾತನ್ನು ಮನದಲ್ಲಿಟ್ಟು ನಡೆದರೆ ಸದ್ಗತಿಯಾಗುವುದು ನಿನಗೆ ಧೈರ್ಯವಿದ್ದರೆ ಪತಿಯೊಡನೆ ಸಹಗಮನ ಮಾಡು ಅಥವಾ ವಿಧವಾ ಧರ್ಮದಿಂದಿರು. ಇದೂ ಪುಣ್ಯಕರವೇ ಸರಿ. ನಿನಗೆ ಯಾವುದರಲ್ಲಿ ಇಷ್ಟವಿದೆ ಎಂದನು.

ಆ ಸತಿಯು ಆತನ ಪಾದಗಳಲ್ಲಿ ತಲೆಯನ್ನಿಟ್ಟು ಭಕ್ತಿಯಿಂದ ಜಯ ಯೋಗೀಶ್ವರನೇ, ನೀನೇ ನನಗೆ ಸಹೋದರನೂ ತಂದೆಯೂ ತಾಯಿಯೂ ಆಗಿದ್ದೀಯೆ. ನಾನು ಪರದೇಶಕ್ಕೆ ಬಂದೆನು. ಇಲ್ಲಿ ನನ್ನ ಬಂಧುಗಳಿಲ್ಲವು. ಈಗ ನೀವು ಪರಮಾರ್ಥಜ್ಞಾನವನ್ನು ಹೇಳಿದಿರಿ. ನೀವು ಹೇಳಿದ ಎರಡು ಧರ್ಮಗಳಲ್ಲಿ ವೈಧವ್ಯಧರ್ಮವು ಅತಿಕಷ್ಟವು. ಅಸಾಧಾರಣವಾದುದು. ನನಗೆ ಸೌಂದರ್ಯವೂ ತಾರುಣ್ಯವೂ ಇರುವುದು. ನನಗೆ ಅಪವಾದ ಬಂದೀತು. ಆನಂದದಿಂದ ಅಪಾರ ಪುಣ್ಯಕರವಾದ ಸಹಗಮನವನ್ನೇ ಮಾಡುವೆನು ಎಂದು ವಂದಿಸಿ ಸ್ವಾಮಿ, ನನ್ನನ್ನು ಸಲಹಿರಿ. ಭವಸಾಗರದಲ್ಲಿ ಮುಳುಗಿರುವೆನು. ರಕ್ಷಿಸಿರಿ ಎಂದು ಬಿನ್ನವಿಸಿದಳು.

ದಯಾನಿಧಿಯಾದ ಆತನು ಬಾಲೆಯೇ, ಲೀಲೆಯಿಂದ ಸಹಗಮನ ಮಾಡು. ನೀನು ಗುರುದರ್ಶನಕ್ಕೆಂದು ಬಂದೆ. ಗುರು ಸಂದರ್ಶನದಿಂದ ಪತಿಗೆ ಆರೋಗ್ಯವಾಗುವುದೆಂದು ನಂಬಿ ಬಂದೆ ಬ್ರಹ್ಮಲಿಪಿಯು ತಪ್ಪದು. ಕಾಲವನ್ನು ಗೆದ್ದವರ್ಯಾರು. ಯಾವುದನ್ನು ಅನುಭವಿಸಬೇಕೋ ಅದು ತಪ್ಪದು. ಇದು ಶ್ರುತಿ ವಚನವಾಗಿದೆ. ಇದಕ್ಕೆ ದುಃಖಿಸಬಾರದು. ಹರಿಶ್ಚಂದ್ರನು ಹೀನನ ಸೇವೆ ಮಾಡಿದನು. ಅಜೇಯನಾದ ಬಲಿಚಕ್ರವರ್ತಿಯು ಪಾತಾಳಕ್ಕೆ ಹೋದನು. ಸಹಸ್ರಕೋಟಿ ವರ್ಷಗಳ ಆಯುಸ್ಸುಳ್ಳ ರಾವಣನ ಗತಿಯು ಏನಾಯಿತು ? ಕೌರವನೇನಾದನು ? ಇಚ್ಛಾಮರಣಿಯಾದ ಭೀಷ್ಮನೂ ರಣಾಂಗಣದಲ್ಲಿ ಬಿದ್ದನು. ಸರ್ಪಭಯದಿಂದ ಪರೀಕ್ಷಿತನು ಅಡಗಿದ್ದರೂ ಬಿಡಲಿಲ್ಲ ಅನಂತಾವತಾರಗಳಾದುವು. ಸಕಲ ದೇವದಾನವಾದಿಗಳೂ ಕಾಲಾಧೀನರಾದರು. ಕಾಲವನ್ನು ಗೆದ್ದವರ್ಯಾರು? ನೀನು ಯಾರನ್ನು ನಂಬಿಬಂದೆಯೋ ಆ ಗುರುವೇ ಕಾಲವನ್ನು ಜಯಿಸಿದವರೆಂದು ತಿಳಿ ನೀನು ಬೇಗ ಸಹಗಮನಮಾಡು ಬಳಿಕ ಗುರುದರ್ಶನವಾಗುವುದು ಎಂದು ಭಸ್ಮವನ್ನು ಲೇಪಿಸಿ ನಾಲ್ಕು ರುದ್ರಾಕ್ಷಿಗಳನ್ನು ಕೊಟ್ಟು ಇದನ್ನು ಪ್ರೇತದ ಕಂಠದಲ್ಲಿಯೂ ಕಿವಿಗಳಲ್ಲಿಯೂ ಕಟ್ಟುವೆಳಾಗಿ ಪ್ರೇತವನ್ನು ದಹನಮಾಡು ನೀನು ಗುರುದರ್ಶನಕ್ಕೆಹೋಗು ವಿಪ್ರರು ರುದ್ರಸೂಕ್ತವನ್ನು ಹೇಳುವರು ಗುರುಚರಣವನ್ನು ತೊಳೆದು ಆ ತೀರ್ಥವನ್ನು ನಿನ್ನ ದೇಹಕ್ಕೂ ಪ್ರೇತಕ್ಕೂ ಪ್ರೋಕ್ಷಿಸು. ಸುವಾಸಿನಿಯರಿಗೆ ಬಾಗಿನವನ್ನು ಕೊಡು ಅನೇಕ ಧನವನ್ನು ವಿಪ್ರರಿಗೆ ಕೊಡುವಳಾಗು. ಬಳಿಕ ಸಹಗಮನಮಾಡು ಎಂದು ಹೇಳಿ ಆ ಸಾಧುವು ಅಂತರ್ಧಾನನಾದನು.

ಆಗ ಆಕೆಯು ಸದ್ವಿಪ್ರರನ್ನು ಕರೆಯಿಸಿ ಷೋಡಶ ಕರ್ಮಗಳನ್ನು ಮಾಡಿ ಪ್ರೇತಕ್ಕೆ ಪ್ರಾಯಶ್ಚಿತ್ತಗೈಗು ಉಪಾಸನ ಮಾಡಿದಳು ಸ್ನಾನ ಮಾಡಿ, ಪೀತಾಂಬರವನ್ನುಟ್ಟು, ಆಭರಣಗಳನ್ನು ಧರಿಸಿ, ಅರಿಶಿನ ಕುಂಕುಮಗಳನ್ನು ಧರಿಸಿ ಆ ಪ್ರೇತವನ್ನು ವಿಧಿಯಿಂದ ಕಟ್ಟಿ ತೆಗೆದುಕೊಂಡು ಗಂಗಾತೀರಕ್ಕೆ ಬಂದಳು. ಹದಿನಾರುವರ್ಷದ ಸುಂದರಿಯಾದ ಈಕೆಯು ಒಡವೆಗಳಿಂದಲಂಕೃತಳಾಗಿ ಲಕ್ಷ್ಮಿಯಂತೆ ಕಾಣುತ್ತಿದ್ದಳು. ಆ ನಗರದ

ನಾಲ್ಕುಸಾವಿರ ಜನರು ಸಹಗಮನವನ್ನು ನೋಡಲು ಬಂದು ಸೇರಿದರು. ಒಬ್ಬರು ಆಹಾ ! ಇದೇನು ? ಪೂರ್ವವಯಸ್ಸಿನ ಈ ಬಾಲೆಯು ಅದೃಷ್ಟ ಹೀನೆಯು ಪೂರ್ವಜನ್ಮದ ಕರ್ಮಫಲದಿಂದ ಈಕೆಗೆ ವೈಧವ್ಯವು ಬಂದಿತು. ಈಕೆಯ ಸಹಗಮನವನ್ನು ನೋಡೋಣ ಎಂದು ತಿಳಿದೂಗುತಿದ್ದರು. ಮತ್ತೊಬ್ಬರು ಈಕೆಯು ಪತಿಯಲ್ಲಿ ಸುಖಪೊಂದದೆ ಸುತನ ಮುಖವನ್ನು ನೋಡದೇ ಇದ್ದರೂ ಆನಂದದಿಂದ ಸಹಗಮನಕ್ಕೆ ಹೋಗುತ್ತಿರುವಳು ಎಂದು ಬಾಲೆಯೇ, ಏಕೆಸಾಯುವಿ ? ತವರುಮನೆಗೆ ಹೋಗಿ ಜನನೀ ಜನಕರ ಹತ್ತಿರದಲ್ಲಿರು ಎಂದರು. ಮತ್ತೊಬ್ಬ ಸ್ತ್ರೀಯು ಆಹಾ ! ಈಕೆಯು ಪತಿವ್ರತೆಯು ನಿಜವು ಸತಿಯರೆಲ್ಲರಿಗೂ ಇಂಥಾ ಬುದ್ಧಿಯನ್ನು ಕೊಡು ಎಂದು ಜಗನ್ನಾಥನನ್ನು ಬೇಡಿದನು.

ಈಕೆಯ ತಂದೆತಾಯಿಗಳು ಧನ್ಯರು. ಈಕೆಯು ನಾಲ್ವತ್ತೆರಡು ಕುಲದವರನ್ನೂ ಉದ್ಧರಿಸುವಳು. ಈಕೆಯು ಸಹಗಮನಕ್ಕೆಂದು ಬಂದೊಂದು ಹೆಜ್ಜೆಯನ್ನಿಡಲು ಹೆಜ್ಜೆ ಹೆಜ್ಜೆಗೆ ಅಶ್ವಮೇಧಫಲ ಉಂಟಾಗುವುದು. ಈಕೆಯು ನದೀತೀರದಲ್ಲಿ ಅಗ್ನಿಗುಂಡವನ್ನು ಮಾಡಿ ಬೆರಣಿ ಕಟ್ಟಿಗೆಗಳನ್ನು ಹಾಕಿ ಆ ಕುಂಡದ ಹತ್ತಿರ ಶವವನ್ನಿಟ್ಟು ಸುವಾಸಿನಿಯರಿಗೆ ಮೊರ, ಕುಪ್ಪಸ, ಕುಂಕುಮ, ಅರಿಶಿನ, ಕಾಡಿಗೆ ಕಾಲುಕಡಗ ಮಂಗಲ ಸೂತ್ರಗಳನಿಟ್ಟು ಬಾಗಿನಗಳನ್ನು ಕೊಟ್ಟು ಸುವಾಸಿನಿಯರನ್ನು ಗಂಧ ಪುಷ್ಪಾದಿಗಳಿಂದರ್ಚಿಸಿ ಅಪಾರ ಧನವನ್ನು ವಿಪ್ರರಿಗೆ ಕೊಟ್ಟು ಎಲ್ಲರನ್ನೂ ವಂದಿಸಿ ನಾನು ಪತಿಯೊಡನೆ ಹೋಗುವೆನು ಎಂದೆಲ್ಲರ ಅನುಜ್ಞೆಯನ್ನೂ ಕೇಳುವವಳಾದಳು. ನನ್ನ ತಂದೆಯು ಶೂಲಪಾಣಿಯು. ತಾಯಿಯು ಗೌರಿ ದೇವಿಯು. ಅಂತಃಕರಣದಿಂದ ಈ ತಾಯಿಯು ಕರೆಯುತ್ತಿರುವಳು. ಶ್ರಾವಣವೂ ದೀಪಾವಳಿಯೂ ಬಂದಿತು. ಪತಿಯೊಡನೆ ನಿರ್ಮಲ ಮನಸ್ಸಿನಿಂದ ಮಾತೆಯ ಹತ್ತಿರಕ್ಕೆ ಹೋಗುವೆನು. ಪ್ರೀತಿ ಇರಲಿ. ತಾವು ಇಲ್ಲಿಗೇಕೆ ಬಂದಿರಿ ? ಊರಿಗೆ ಹೋಗಿರಿ. ಅತ್ತೆ ಮಾವಂದಿರೂ, ತಾಯಿತಂದೆಗಳೂ ನಮ್ಮ ಸಂಗತಿಯನ್ನು ಕೇಳದಿದ್ದರೆ ಈ ಸಂಗತಿಯನ್ನು ಹೇಳದಿರಿ. ಹೇಳಿದರೆ ಅವರು ಪ್ರಾಣಬಿಟ್ಟಾರು. ಅವರನ್ನು ಕೊಂದಪಾತಕವುಂಟಾದೀತು. ಅವರು ಬಂದು ಕೇಳಿದರೆ ಭೀಮಾತೀರದಲ್ಲಿ ಶ್ರೀಗುರುಸನ್ನಿಧಿ

ಯಲ್ಲಿ ನಾವು ಸುಖವಾಗಿರುವೆವೆಂದು ಹೇಳಿರಿ ಗುರುದರ್ಶನದಿಂದ ಪತಿಗೆ ಆರೋಗ್ಯವಾಯಿತೆಂದು ಹೇಳಿರಿ ಆಗ ಅವರು ಸಂತೋಷಿಸುವರು. ಇಷ್ಟಮಿತ್ರರಿಗೂ ನಾವು ಸಂತೋಷವಾಗಿರುವೆವೆಂದು ಹೇಳಿರಿ ಎಂದಳು.

ಈ ಮಾತುಗಳನ್ನು ಕೇಳಿ ಎಲ್ಲರೂ ದುಃಖಿಸಿದರು

ಈಕೆಯು ಶವದ ಹತ್ತಿರದಲ್ಲಿ ನಿಂತಿದ್ದಳು ಅಗ್ನಿಗುಂಡಕ್ಕೆ ಆಗಾಗ್ಯೆ ಕಟ್ಟಿಗೆ ಬೆರಣಿಗಳನ್ನು ಹಾಕಿದಳು. ಆ ಸಾಧುವು ಹೇಳಿದವಾತು ನೆನೆದು ಅವರು ಕೊಟ್ಟ ರುದ್ರಾಕ್ಷಿಗಳಲ್ಲಿ ಎರಡು ಕಿವಿಗಳಿಗೂ, ಕಂಠಕ್ಕೂ ಕಟ್ಟಿ ವಿಪ್ರರೇ, ಶ್ರೀಗುರುಗಳೆಲ್ಲಿರುವರು ? ಅವರನ್ನು ದರ್ಶನಗೈದು ಬಳಿಕ ಅವರನುಜ್ಞೆ ಹೊಂದಿ ಬರುವೆನು ಎಂದಳು

ಈ ಮಾತನ್ನು ಕೇಳಿ ವಿದ್ವಾಂಸರು ಪತಿವ್ರತೆಯೇ, ದಹನವಾದ ಬಳಿಕ ಅಸ್ತಮಾನದೊಳಗಾಗಿ ನಾವು ಮನೆಗೆ ಹೋಗಬೇಕು. ಬೇಗ ಗುರು ಸಂದರ್ಶನಕ್ಕೆ ಹೋಗು ಎಂದರು

ಆ ನಾರಿಯು ಗುರುದರ್ಶನಕ್ಕೆ ಹೋದಳು. ಜನರೆಲ್ಲರೂ ಈ ಕೌತುಕವನ್ನು ನೋಡುತ್ತಿದ್ದರು ಈಕೆಯು ಮನಸ್ಸಿನಲ್ಲಿಯೇ ನಾನು ಅಭಾಗ್ಯಳು ಆದುದರಿಂದ ಹೀಗಾಯಿತು ದಾತಾರನೇ, ಸರ್ವೇಶ್ವರನೇ, ಶರಣಾಗತರಕ್ಷಕನೇ, ಲೀಲೆಯಿಂದ ತ್ರಿಭುವನಗಳನ್ನು ನಿರ್ಮಿಸುವವನೇ, ರಜೋಗುಣದಿಂದ ಸೃಷ್ಟಿಯನ್ನೂ ಸತ್ವಗುಣದಿಂದ ರಕ್ಷಣೆಯನ್ನೂ ತಮೋಗುಣದಿಂದ ಲಯವನ್ನೂ ಮಾಡುತ್ತೀಯೆ ತ್ರಿಮೂರ್ತಿಸ್ವರೂಪನೇ, ಸಕಲ ಸಿದ್ಧಿಯನ್ನು ಕೊಡುವವನೇ, ಬಬ್ಬನಿಂದ ಬಾಧಿತನಾದವನು ರಾಜನ ಹತ್ತಿರ ಹೋಗಿ ದೂರಿಕೊಳ್ಳಲು ರಾಜನು ಅವನಿಗೆ ಸಹಾಯ ಮಾಡುವನು. ವೈದ್ಯನು ರೋಗಿಯನ್ನು ಔಷಧವನ್ನಿತ್ತು ರಕ್ಷಿಸುವನು. ನೀನು ತ್ರಿಮೂರ್ತಿ ರೂಪನೆಂದು ಪ್ರಸಿದ್ಧನಾಗಿದ್ದೀಯೆ ಭಕ್ತಾಧಾರನೆಂದು ಜನರು ನಿನ್ನನ್ನು ಸೇವಿಸುವರು. ನಾನು ಏನುತಪ್ಪುಮಾಡಿದೆನು ? ನಿನ್ನ ದರ್ಶನಕ್ಕೆಂದು ತಾಯಿ ತಂದೆಗಳನ್ನು ಬಿಟ್ಟು ನಿಮ್ಮ ಧ್ಯಾನದಿಂದ ಇಪ್ಪತ್ತು ಗ್ರಾಮಗಳನ್ನು ದಾಟಿ ಬಂದೆನು. ನೀವೇ ತಾಯಿ ತಂದೆ ಎಂದು ಓಡಿ ಬಂದೆನು. ಪತಿಗೆ ಆರೋಗ್ಯವಾದೀತೆಂದು ತಿಳಿದಿದ್ದೆನು. ನನ್ನಂತಿರುವ

ಸ್ತ್ರೀಯರು ಪುತ್ರಪೌತ್ರರಿಂದ ಕೂಡಿ ಆನಂದದಿಂದಿರುವರು. ನಾನು ಕಲ್ಲಿನಂತೆ ಅಪುತ್ರವಂತೆಯಾಗಿರುವೆನು. ಪತಿಯು ಸದಾರೋಗಿಯಾಗಿದ್ದುದರಿಂದ ನನಗೆ ತನಯನೆಲ್ಲಿ ಆದಾನು ? ಪತಿಗೆ ಆರೋಗ್ಯವಾದೀತು ! ನನಗೆ ಮಗನಾದಾನು ! ಎಂದು ಆಶೆಯಿಂದ ಬಂದೆನು. ನನ್ನ ಇಷ್ಟವು ಮುಗಿಯಿತು. ಪತಿಯು ಇನ್ನು ನಿರೋಗಿಯಾದನು. ನನಗೆ ಪುತ್ರರಾದರು. ನನ್ನ ಮನೋರಥವಾದೀತೆಂದು ಬಂದೆನು. ನಿಮ್ಮ ಕೀರ್ತಿಯನ್ನು ತೆಗೆದುಕೊಂಡು ಈಗ ಪರಲೋಕಕ್ಕೆ ಹೋಗುವೆನು ಎಂದು ಯೋಚಿಸುತ್ತಾ ಅಮರಜಾಸಂಗಮಕ್ಕೆ ಬಂದು ಅಶ್ವತ್ಥತರುಮೂಲದಲ್ಲಿರುವ ಗುರುಗಳನ್ನು ನೋಡಿ ಸಾಷ್ಟಾಂಗ ನಮಸ್ಕಾರಮಾಡಿದಳು.

ಆಗ ಅವಸರದಿಂದ ಗುರುಗಳು ಆಕೆಯನ್ನು ಸುವಾಸಿನಿಯಾಗೆಂದು ಆಶೀರ್ವದಿಸಿದರು. ಪುನಃ ಈಕೆಯು ಭಕ್ತಿಯಿಂದ ವಂದಿಸಲು ಶ್ರೇಷ್ಟರಾದ ಅಷ್ಟಪುತ್ರರನ್ನು ಪಡೆಯುವವಳಾಗು ಎಂದು ಹರಸಿದರು.

ಆಗ ಜನರು ಗುರುಗಳನ್ನು ಹಾಸ್ಯಮಾಡಿ ನಕ್ಕರು. ಆಗ ಒಬ್ಬ ವಿಪ್ರನು ಸ್ವಾಮಿಾ, ಗುರುವರ್ಯರೇ ! ಈಕೆಯ ಪತಿಯು ಮೃತನಾಗಿದ್ದಾನೆ. ಆತನ ಹೆಣವನ್ನು ಸ್ಮಶಾನಕ್ಕೆ ತಂದರು. ಈಕೆಯು ಸುವಾಸಿನಿಯಾಗುವುದೆಂತು ? ಈಗ ಈಕೆಯು ಸಹಗಮನಕ್ಕೆ ತಮ್ಮ ಅನುಜ್ಞೆಹೊಂದಲು ಬಂದಳು. ತಮ್ಮ ಆಜ್ಞೆಹೊಂದಿ ಅಗ್ನಿಗುಂಡಕ್ಕೆ ಹೋಗಿ ಸಹಗಮನ ಮಾಡುವಳು ಎಂದನು.

ಗುರುವು ಇದನ್ನು ಕೇಳಿ ನಕ್ಕು ಆ ಶವವನ್ನು ನಮ್ಮ ಹತ್ತಿರಕ್ಕೆ ತನ್ನಿರಿ. ಪ್ರಾಣವೆಂತು ಹೋಗಿದೆ ? ನೋಡೋಣ. ನಮ್ಮ ವಚನವು ಅನೃತವಾಗದು , ಸಂಶಯಬೇಡ. ಈ ಮಾತನ್ನು ಶಂಕರನು ಸತ್ಯವನ್ನಾಗಿ ಮಾಡುವನು. ಪ್ರೇತಸಂಸ್ಕಾರಮಾಡಬೇಡಿರಿ. ಇಲ್ಲಿಗೆ ಹೆಣವನ್ನು ತನ್ನಿರಿ ಎಂದಾದೇಶವಿತ್ತರು.

ಗುರುನಿರೂಪದಂತೆ ಜನರು ಶವವನ್ನು ತರಲು ಹೋದರು. ಜನರು ಈ ಕೌತುಕವನ್ನು ನೋಡಬೇಕೆಂದು ಕುತೂಹಲರಾಗಿದ್ದರು. ಈ ಬಾಲೆಯು ಶ್ರೀಗುರುಚರಣವನ್ನು ರುದ್ರಸೂಕ್ತದಿಂದಭಿಷೇಕ ಮಾಡಿ

ಷೋಡಶೋಪಚಾರ ಪೂಜೆಯನ್ನು ಭಕ್ತಿಯಿಂದ ಮಾಡಿದಳು. ಇಷ್ಟರ ಲ್ಲಿಯೇ ಪ್ರೇತವನ್ನು ತಂದರು

ಗುರುವು ಅದನ್ನು ನೋಡಿ ಶವದ ಒಟ್ಟೆಯನ್ನು ತೆಗೆಯಿಸಿ ಚರಣ ತೀರ್ಥವನ್ನು ಒಬ್ಬ ವಿಪ್ರನ ಕರದಲ್ಲಿತ್ತು ಆ ಪ್ರೇತದ ಸರ್ವಾಂಗಕ್ಕೂ ಸ್ನಾನ ಮಾಡಿಸೆಂದರು. ಅವನು ಆ ರೀತಿಯಿಂದ ಸ್ನಾನಮಾಡಿಸಿದನು. ಗುರುವು ಅಮೃತದೃಷ್ಟಿಯಿಂದ ಹೆಣವನ್ನು ನೋಡುತ್ತಿದ್ದರು

ಆ ಹೆಣವು ಗುರುವಿನ ಸುಧಾದೃಷ್ಟಿಯಿಂದ ಸಂಜೀವನದಂತಾಗಿ ಎದ್ದು ಕೂತುಕೊಂಡು ಮೈಮುರಿಯುತ್ತಿತ್ತು. ತಾನು ಬೆತ್ತಲೆಯಾಗಿರುವೆ ನೆಂದು ನಾಚಿದವನಾಗಿ ಹೊಸಬಟ್ಟೆಯನ್ನುಟ್ಟುಕೊಂಡು ತನ್ನ ಸತಿಯನ್ನು ಕರೆದು ನನ್ನನ್ನಿಲ್ಲಿಗೇಕೆ ಕರೆದು ತಂದೆ ? ಈ ಯತಿಗಳ್ಯಾರು ? ವಿಸ್ತಾರ ವಾಗಿ ಹೇಳು ಎಂದನು. ಮತ್ತೂ ಇಷ್ಟು ಜನರಿರುವಾಗ ನನ್ನನ್ನೇಕೆ ಎಬ್ಬಿಸಲಿಲ್ಲ ? ನನಗೆ ಅತಿ ನಿದ್ರೆಯುಂಟಾಗಿತ್ತು ಎಂದು ಹೇಳಿದನು

ಆ ಸತಿಯು ಪತಿಯು ವಚನವನ್ನು ಕೇಳಿ ಸಂಗತಿಯನ್ನೆಲ್ಲವನ್ನೂ ತಿಳಿಸಿದಳು. ಆಗ ದಂಪತಿಗಳೆದ್ದು ನಿಂತು ಶ್ರೀಗುರುವನ್ನು ವಂದಿಸಿ ಗುರು ಚರಣಂಗಳಲ್ಲಿ ತಲೆಯನ್ನಿಟ್ಟು ಸ್ತುತಿಸಿದರು ಜನರೆಲ್ಲರೂ ಆನಂದಿತ ರಾದರು ಆತನು ಸ್ವಾಮಿ, ನಾನು ಮಹಾ ಪಾಪಿಯು. ಪಾಪಮಾಡಿದೆನು. ದುರ್ಬುದ್ಧಿಯಿಂದ ಪಾಪಸಾಗರದಲ್ಲಿ ಮುಳುಗಿ ನಿಮ್ಮ ಚರಣಗಳನ್ನು ಮರೆತಿದ್ದೆನು. ತ್ರಿಮೂರ್ತಿಸ್ವರೂಪನೇ, ಜಗದ್ಗುರುವೇ, ಸಕಲ ಜೀವಿ ಗಳ ರಕ್ಷಕನೇ, ಶಂಕರನೇ, ಶರಣಾಗತರಕ್ಷಕನೇ, ನಿಮ್ಮ ಖ್ಯಾತಿಯು ತ್ರಿಭುವನಗಳಲ್ಲಿಯೂ ಹರಡಿತು. ವಿಶ್ವಕರ್ತನೇ, ರಕ್ಷಿಸು. ರಕ್ಷಿಸು. ಜಗ ದ್ಭರ್ತನೇ, ಕೃಪಾರ್ಣವನೇ, ಜಗನ್ನಾಥನೇ, ಭಕ್ತಜನವಿಶ್ರಾಮನೇ, ಜಯ ಗುರುಮೂರ್ತಿಯೇ, ಜಟಾಜೂಟನೇ, ಪಶುಪತಿಯೇ, ಭೂಮಿಯಲ್ಲಿ ನರ ರೂಪಿನಿಂದ ಅವತರಿಸಿದ್ದೀರಿ ಪಿನಾಕಿಯೇ, ಭಕ್ತಜನರಕ್ಷಕನೇ, ಸರ್ವ ಭೂತಗಳಲ್ಲಿಯೂ ವಾಸಮಾಡುತ್ತೀಯೆ. ನಿಮ್ಮ ಚರಣಂಗಳಿಗೆ ವಂದಿಸು ವೆವು. ನೀನೇ ತಾಯಿಯೂ ತಂದೆಯೂ ಆಗಿದ್ದೀಯೆ. ನಿಮ್ಮ ಪಾದಗಳಲ್ಲಿ ವಂದಿಸುವೆವು. ಇನ್ನು ನಮಗೆ ಪುನರ್ಜನ್ಮವಿಲ್ಲ. ವಿಶ್ವಕಾರಣನೇ, ಲೀಲೆ

ಯಿಂದ ಸೃಷ್ಟಿಯನ್ನು ಮಾಡುವಿರಿ. ನಿಮ್ಮ ಮಹಿಮೆಯನ್ನು ಕೇಳಿದ್ದರೂ ಕೋಪದಿಂದಲೂ ಅಜ್ಞಾನದಿಂದಲೂ ಮತ್ತನಾಗಿದ್ದೆನು ಈಗ ನೀವು ನಿಷ್ಕಳಂಕರಾಗಿ ತೋರುತ್ತೀರಿ. ನಿಮ್ಮ ಮನದಲ್ಲಿ ಸಿಟ್ಟಿಲ್ಲವು ಆನಂದ ಮೂರ್ತಿಯೇ, ಭಕ್ತರಕ್ಷಕನೇ, ಕರುಣಾಸಾಗರನೇ, ಶರಣಾಗತರಕ್ಷಕನೇ, ಇಹಪರಸುಖದಾತನೇ ಚತುರ್ವಿಧ ಪುರುಷಾರ್ಥಗಳನ್ನು ಕೊಡುವವನೇ, ಚಿತ್ಸ್ವರೂಪನೇ, ಶ್ರೀ ನೃಸಿಂಹ ಸರಸ್ವತಿಯೇ, ನಮ್ಮನ್ನು ಮನ್ನಿಸಿರಿ ಎಂದೀರೀತಿಯಿಂದ ಸ್ತುತಿಸಿದರು

ಶ್ರೀಗುರುವು ಇವರನ್ನು ಸಮಾಧಾನ ಮಾಡಿದರು. ನಿಮಗೆ ಪೂರ್ಣಾಯುಷಿಗಳಾದ ಅಷ್ಟಪುತ್ರರಾಗುವರು ಇದು ಸತ್ಯವು. ಶ್ರೀಮಂತರಾಗಿ ಆನಂದದಿಂದಿರುವಿರಿ. ನಿಮ್ಮ ಪೂರ್ವದ ದೋಷವು ಹೋಯಿತು. ನಿಮಗೆ ಚತುರ್ವಿಧಪುರುಷಾರ್ಥಗಳೂ ಸಿದ್ಧಿಸುವುವು ಸಂಶಯಪಡದಿರಿ. ಸುಖವಾಗಿರಿ ಎಂದು ಹರಸಿದರು.

ಅನೇಕ ನರನಾರಿಯರು ಸೇರಿ ಜಯಜಯವೆಂದು ಕೂಗಿದರು. ವಂದಿಸಿ ಸ್ತುತಿಸಿ ಗಾನ ಮಾಡಿದರು ಆಗ ಒಬ್ಬ ಧೂರ್ತನಾದ ವಿಪ್ರನು ಕುಬುದ್ಧಿಯಿಂದ ಗುರುವನ್ನು ಕುರಿತು ಪ್ರಶ್ನೆಮಾಡಿದನು. ಗುರುವರ್ಯರೇ! ನನಗೊಂದು ಸಂಶಯವುಂಟಾಗಿದೆ ಬ್ರಹ್ಮನು ಬರೆದ ಲಿಖಿತವು ಸತ್ಯವೆಂದು ವೇದಶಾಸ್ತ್ರಪುರಾಣಗಳ ಹೇಳುವುವು ಈ ವಿಪ್ರನಿಗೆ ಅಪಮೃತ್ಯುವುಂಟಾಗಿ ಹಗಲು ಮೃತನಾಗಿದ್ದನು. ಇವನಿಗೆ ಜೀವವು ಹೇಗೆ ಬಂದಿತು ? ಬ್ರಹ್ಮಲಿಖಿತವು ಸತ್ಯವೇ ? ಅಸತ್ಯವೇ ? ಎಂಬುದು ತಿಳಿಯುವುದಿಲ್ಲ ಈ ಸಂಶಯವನ್ನು ನಿವಾರಿಸಿರಿ ಎಂದು ಕೇಳಿದನು

ಆಗ ಗುರುಗಳು ನಕ್ಕು ಅವನಿಗೆ ಹೇಳಿದುದೇನಂದರೆ —ಎಲೈ ವಿಪ್ರನೇ ಕೇಳು. ಇವನ ಮುಂದಿನ ಜನ್ಮದ ಆಯುಷ್ಯದಲ್ಲಿ ಸಾಲವಾಗಿ ಮೂವತ್ತು ವರ್ಷಗಳನ್ನು ಬ್ರಹ್ಮನಲ್ಲಿ ಕೇಳಿದೆವು ಈಗ ಭಕ್ತರನ್ನು ರಕ್ಷಿಸಬೇಕಾಗಿಬಂದಿತು ಎಂದರು

ಸರ್ವರೂ ಸುಮ್ಮನಾದರು ಗುರುಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ತಮ್ಮ ಮನೆಗಳಿಗೆ ಎಲ್ಲರೂ ಹೋದರು ಈ ವಿಷಯವು

ನಾನಾಸ್ಥಳಗಳಲ್ಲಿ ಪ್ರಸಿದ್ಧವಾಯಿತು. ಆ ಪತಿವ್ರತೆಯು ಸಂಗಮದಲ್ಲಿ ಸ್ನಾನಮಾಡಿ ಆನಂದದಿಂದಲೂ ಭಕ್ತಿಯಿಂದಲೂ ಪೂಜಿಸಿದಳು. ಅನೇಕ ಧನವನ್ನು ಬ್ರಾಹ್ಮಣರಿಗೆ ಕೊಟ್ಟು ಭೋಜಿಸಿ ಸಂತೋಷಪಡಿಸಿದಳು. ಸೂರ್ಯಾಸ್ತಮಯವಾದ ಬಳಿಕ ಗುರುಗಳ ಮಠಕ್ಕೆ ಪತಿಯೊಡನೆ ಬಂದಳು. ಈ ದಂಪತಿಗಳು ಗುರುಗಳನ್ನು ಪದೇ ಪದೇ ವಂದಿಸಿ ಪೂಜಿಸಿ ಆರತಿ ಯನ್ನೆತ್ತಿದರು ಎಂದು ಸಿದ್ಧರು ಹೇಳಿದರು. ಇದು ಅಪೂರ್ವವಾದ ಕಥೆ ಎಂದು ಸರಸ್ವತೀಗಂಗಾಧರನು ಗುರುಚರಿತ್ರೆಯನ್ನು ವಿಸ್ತಾರವಾಗಿ ಹೇಳಿದನು ಈ ಕಥೆಯನ್ನು ಕೇಳಲು ಸಕಲೇಷ್ಟಗಳೂ ಉಂಟಾಗು ವುವು ಎಂಬಲ್ಲಿಗೆ ಗುರುಚರಿತ್ರೆಯಲ್ಲಿ ಮೃತನಾದ ವಿಪ್ರನನ್ನು ಬದುಕಿಸಿ ಆ ಪತಿವ್ರತೆಗೆ ಸೌಭಾಗ್ಯವನ್ನುಂಟುಮಾಡಿದರೆಂಬ ೩೩ ನೆಯ ಅಧ್ಯಾಯವು ಮುಗಿದುದು.

---

## ೩೪ ನೆಯ ಅಧ್ಯಾಯವು.

---

ಸಿದ್ಧರು ಮುಂಗಥೆಯನ್ನು ಹೇಳುವರು. ನಾಮಧಾರಕನೇ ಕೇಳು—ಆ ದಂಪತಿಗಳು ಮಾರನೇ ದಿನ ಗುರುಗಳನ್ನು ವಂದಿಸಿದರು ಆ ಪತಿವ್ರತೆಯು ಅಂಜಲಿಬದ್ಧಳಾಗಿ ಸ್ವಾಮಿನಾ ನಾನು ಮೊದಲು ದುಃಖಿ ಸುವಾಗ ಯತಿಗಳೊಬ್ಬರು ಬಂದು ಬುದ್ಧಿವಾದ ಹೇಳಿ ನಾಲ್ಕು ರುದ್ರಾಕ್ಷಿ ಗಳನ್ನು ಕೊಟ್ಟು ಕೊರಳಲ್ಲಿ ಎರಡನ್ನೂ, ಕಿವಿಗಳಲ್ಲೆರಡನ್ನೂ ಕಟ್ಟಿ ಶವ ದಹನಮಾಡೆಂದೂ ರುದ್ರಾಭಿಷೇಕ ತೀರ್ಥವನ್ನು ತಂದು ಪ್ರೇತಕ್ಕೆ ಪ್ರೋಕ್ಷಿಸಿ ನರಸಿಂಹಸರಸ್ವತಿಗಳ ದರ್ಶನಕ್ಕೆ ಹೋಗು ಎಂದು ಹೇಳಿ ಹೋದರು ರುದ್ರಾಕ್ಷಿಗಳು ನನ್ನಲ್ಲಿಯೂ, ಪತಿಯ ಕಿವಿಗಳಲ್ಲಿಯೂ ಇವೆ. ಆ ಯತಿಗಳ್ಯಾರು ? ಎಂದು ಕೇಳಿದಳು

ಆಗ ಗುರುವು ನಕ್ಕು ಬಾಲೆಯೇ, ನಿನ್ನ ಭಕ್ತಿಯನ್ನು ನೋಡಲು ನಾವು ಬಂದು ರುದ್ರಾಕ್ಷಿಗಳನ್ನು ಕೊಟ್ಟೆವು ಭಕ್ತಿಯಿಂದಾಗಲೀ, ಭಕ್ತಿ ಯಿಲ್ಲದೆಯೇ ಆಗಲೀ ರುದ್ರಾಕ್ಷಿಯನ್ನು ಧರಿಸಿದವರಿಗೆ ಪಾತಕ ತಗಲದು.

ಹುಟ್ಟಿನೇ ಆಗಲಿ ನೀಚನೇ ಆಗಲಿ ಪಾಪವಿಲ್ಲ. ರುದ್ರಾಕ್ಷಿಮಹಿಮೆ ಯನ್ನು ಕೇಳು. ರುದ್ರಾಕ್ಷಿಧಾರಣೆಯಿಂದ ಅತಿಪುಣ್ಯವುಂಟು. ಅದನ್ನು ಧರಿಸಿದವನು ಶಿವಸಮನಾಗುವನು ಇದು ಶ್ರುತಿ ಸಮ್ಮತವು. ಸಾವಿರ ರುದ್ರಾಕ್ಷಿಗಳನ್ನು ಧರಿಸಿದ ನರನು ರುದ್ರಸಮನಾಗುವನು. ದೇವತೆಗ ಳಿಂದ ವಂದ್ಯನಾಗುವನು. ತೋಳುಗಳಲ್ಲಿ ಹದಿನಾರು, ಜುಟ್ಟಿನಲ್ಲಿ ಒಂದು, ಎರಡು ಕೈಗಳಲ್ಲಿ ಇಪ್ಪತ್ನಾಲ್ಕು, ಕಂಠದಲ್ಲಿ ಮೂವತ್ತೆರಡು, ತಲೆಯಲ್ಲಿ ೪೦, ಕಿವಿಗಳಲ್ಲಿ ೧೦ನ್ನು ಧರಿಸಬೇಕು. ಕಂಠದಲ್ಲಿ ನೂರೆಂಟು ರುದ್ರಾಕ್ಷಿಗಳ ಸರವನ್ನು ಧರಿಸಬೇಕು. ರುದ್ರ ಪುತ್ರನಿಗೆ ಸಮನಾಗುವನು. ಮುತ್ತು, ಹವಳ, ಸ್ಫಟಿಕ, ಬೆಳ್ಳಿ, ವೈಡೂರ್ಯ, ಚಿನ್ನಗಳನ್ನು ಸೇರಿಸಿ ರುದ್ರಾಕ್ಷಿ ಸರವನ್ನು ಧರಿಸಬೇಕು ಇದರ ಫಲವು ಅಪಾರವಾದುದು. ರುದ್ರಾಕ್ಷಧಾರಕನಿಗೆ ಪಾಪವಿಲ್ಲ. ಆತನಿಗೆ ಸದ್ಗತಿಯಾಗುವುದು. ರುದ್ರ ಲೋಕವುಂಟಾಗುವುದು. ರುದ್ರಾಕ್ಷಿ ಮಾಲೆಯನ್ನು ಧರಿಸಿ ಜಪಾನು ಷ್ಠಾನ ಮಾಡಿದರೆ ಅನಂತ ಫಲವುಂಟಾಗುವುದು ರುದ್ರಾಕ್ಷಿ ಧರಿಸದೆ ತ್ರಿಪುಂಡ್ರವನ್ನು ಧರಿಸಿದವನು ಹುಟ್ಟಿದರೂ ಫಲವಿಲ್ಲ ತಲೆಯಲ್ಲಿಯೂ ಕಿವಿಯಲ್ಲಿಯೂ ರುದ್ರಾಕ್ಷಿಗಳನ್ನು ಧರಿಸಿ ಸ್ನಾನಮಾಡಲು ಗಂಗಾಸ್ನಾನ ಫಲವುಂಟಾಗುವುದು. ರುದ್ರಾಕ್ಷಿಯನ್ನಿಟ್ಟು ಪೂಜಿಸಿ ರುದ್ರಸೂಕ್ತದಿಂದ ಅಭಿಷೇಕ ಮಾಡಲು ಲಿಂಗಪೂಜಾ ಫಲವುಂಟಾಗುವುದು ೧-೫-೧೧-೧೪ ಮುಖಗಳುಳ್ಳ ರುದ್ರಾಕ್ಷಿಗಳಿವೆ. ಇವುಗಳನ್ನು ಧರಿಸಲು ಚತುರ್ವಿಧ ಪುರುಷಾರ್ಥಗಳುಂಟಾಗುವುವು. ಈ ವಿಷಯದಲ್ಲಿ ಒಂದು ಆಖ್ಯಾನವನ್ನು ಕೇಳು , ಇದರಿಂದ ಪಾಪಗಳು ಪರಿಹರಿಸುವುವು ಕಾಶ್ಮೀರ ದೇಶದಲ್ಲಿ ಭದ್ರಸೇನನೆಂಬ ರಾಜನಿದ್ದನು ಇವನಿಗೆ ಸುಧರ್ಮನೆಂಬ ಪ್ರಸಿದ್ಧನಾದ ಪುತ್ರನಿದ್ದನು. ಮಂತ್ರಿಯ ಸುತನಾದ ತಾರಕನೂ ಈ ರಾಜಪುತ್ರನೂ ಜ್ಞಾನಿಗಳಾಗಿ ಮಿತ್ರರಾಗಿದ್ದರು ಒಂದೇ ವಯಸ್ಸಿನವರಾದ ಇವರಿಬ್ಬರೂ ವಿದ್ಯಾಭ್ಯಾಸ ಮಾಡುತ್ತಾ ಆಟವಾಡುತ್ತಾ ಇದ್ದರು ಇವರು ದೇಹದಲ್ಲಿ ರುದ್ರಾಕ್ಷಿಗಳಿಂದಲಂಕೃತರಾಗಿ ಭಸ್ಮ ತ್ರಿಪುಂಡ್ರವನ್ನು ಧರಿಸಿದ್ದರು ರುದ್ರಾಕ್ಷಿಯಲ್ಲದೆ ಇನ್ನಾವ ರತ್ನಾಭರಣಗಳನ್ನೂ ಇವರು ಧರಿಸಲಿಲ್ಲ. ಇವರ ತಾಯಿತಂದೆಗಳು ನವರತ್ನಾಭರಣಗಳನ್ನು ತಂದುಕೊಟ್ಟರು.

ಇವರು ಸಿಟ್ಟಿನಿಂದ ಥಟ್ಟನೆ ಅವನ್ನು ಕಲ್ಲುಗಳಿಂದೂ ಲೋಹಗಳಿಂದೂ ಎಸೆಯುತ್ತಿದ್ದರು. ಹೀಗಿರಲೊಂದುದಿನ ಅಲ್ಲಿಗೆ ಪರಾಶರ ಋಷಿಗಳು ಬಂದರು. ರಾಜನು ಇವರನ್ನು ಕಂಡು ಎದುರಾಗಿ ಬಂದು ಸಾಷ್ಟಾಂಗ ವಂದನೆಗಳನ್ನು ಮಾಡಿ ಸಿಂಹಾಸನದಲ್ಲಿ ಕುಳ್ಳಿರಿಸಿ ಅರ್ಘ್ಯಪಾದ್ಯಾದಿಗಳನ್ನು ಆನಂದ ಸಂದೋಹದಿಂದ ವಿಧಿವತ್ತಾಗಿ ಪೂಜಿಸಿ ಕೈಗಳನ್ನು ಜೋಡಿಸಿ, ಸ್ವಾಮಿ! ಈ ಪುತ್ರರ ವಿಷಯದಲ್ಲಿ ಏನುಮಾಡಬೇಕು? ಈಪುತ್ರರು ರತ್ನಾಭರಣಗಳನ್ನು ಧರಿಸುವುದಿಲ್ಲ. ರುದ್ರಾಕ್ಷಿಯ ಸರಗಳನ್ನು ಧರಿಸುವರು. ರುದ್ರಾಕ್ಷಿಯೇ ಸರ್ವಾಭರಣವಾಗಿದೆ. ಈ ಬುದ್ಧಿಯನ್ನು ಇವರಿಗೆ ಯಾರು ಹೇಳಿದರು ? ಇದು ಎಂಥಾ ಬುದ್ಧಿಯು ? ನೀವು ತ್ರಿಕಾಲ ಜ್ಞಾನಿಗಳಾಗಿದ್ದೀರಿ. ನೀವು ಬುದ್ಧಿ ಹೇಳಿದರೆ ಕೇಳುವರು ಎಂದನು.

ಈ ಮಾತನ್ನು ಕೇಳಿ ಪರಾಶರರು ಸಂತೋಷದಿಂದ ರಾಜನೇ ಕೇಳು. ಇದು ವಿಚಿತ್ರವಾಗಿದೆ. ಪೂರ್ವದಲ್ಲಿ ನಂದಿ ಎಂಬ ನಗರದಲ್ಲಿ ಸುಂದರಿಯಾದ ಸೂಳೆಯು ಇದ್ದಳು. ಈಕೆಯು ಹುಣ್ಣಿಮೆಯ ಚಂದ್ರನಂತೆ ಇರುವವಳಾಗಿಯೂ ಸುವರ್ಣದಂತಿರುವ ಛತ್ರವುಳ್ಳವಳಾಗಿ ಸುವರ್ಣಾಸನದಲ್ಲಿ ಕುಳಿತುಕೊಳ್ಳುತ್ತಿದ್ದಳು ಈಕೆಯ ಮಂದಿರವು ಸುವರ್ಣಮಯವಾದುದು. ಈಕೆಯ ಪಾದುಕೆಗಳು ಚಿನ್ನದಿಂದ ಮಾಡಿದುವುಗಳಾಗಿದ್ದುವು. ವಿಚಿತ್ರಾಭರಣಗಳಿಂದಲಂಕೃತಳಾಗಿಯೂ, ಅನೇಕ ವಸ್ತ್ರಾಭರಣಗಳನ್ನೂ ದಾಸಿಯರನ್ನೂ ಉಳ್ಳವಳಾಗಿಯೂ, ಯೌವನವುಳ್ಳವಳಾಗಿಯೂ ಇಂದುವಿನಂತೆ ಅಂದವಾದ ದೇಹಕಾಂತಿಯುಳ್ಳವಳಾಗಿಯೂ ರತ್ನಖಚಿತವಾದ ಮಂಚವುಳ್ಳವಳಾಗಿಯೂ, ಗಂಧ ಪುಷ್ಪ ಕುಂಕುಮ ಕಸ್ತೂರಿಗಳನ್ನು ಧರಿಸಿದವಳಾಗಿಯೂ, ವಿವಿಧ ಭೋಗಗಳುಳ್ಳವಳಾಗಿಯೂ ಇದ್ದಳು , ಮತ್ತು ಧನ ಧಾನ್ಯ ಸಂಪತ್ತುಳ್ಳುವಳಾಗಿದ್ದಳು ಹೀಗಿರಲು ಈಕೆಯು ತಾನು ಪತಿವ್ರತೆಯೆನ್ನಿಸಿಕೊಳ್ಳಬೇಕೆಂದು ಅನೇಕ ಅನ್ನವಸ್ತ್ರಗಳನ್ನು ವಿಪ್ರರಿಗೆ ದಾನಮಾಡುತ್ತಿದ್ದಳು. ಈಕೆಯ ನಾಟ್ಯಮಂಟಪವು ನಾನಾ ರತ್ನಗಳಿಂದ ಕೆತ್ತಲ್ಪಟ್ಟಿತ್ತು ಅಲ್ಲಿ ನಿತ್ಯವೂ ನರ್ತನ ಮಾಡುತ್ತಿದ್ದಳು. ಈಕೆಯು ತನ್ನ ಗೆಳತಿಯರೊಡನೆ ನಾಟ್ಯವಾಡುತ್ತಾ ಒಂದು ಕಪಿಯನ್ನೂ, ಕೋಳಿಯನ್ನೂ ಸಾಕಿ ನಾಟ್ಯವನ್ನು ಕಲಿಸಿ ರುದ್ರಾಕ್ಷಿಯ ಮಾಲೆಗಳನ್ನು ಹಾಕಿ

ಆ ಮಂಟಪದಲ್ಲಿ ಕಟ್ಟಿದ್ದಳು. ಈ ಕಪಿಗೆ ಸದಾಶಿವನೆಂದು ಹೆಸರಿಟ್ಟಿದ್ದಳು ಹೀಗಿರಲು ಒಂದು ದಿನ ಒಂದು ವಿಚಿತ್ರವು ನಡೆಯಿತು. ಶಿವವ್ರತನೆಂಬ ಧನಿಕನೊಬ್ಬನು ಭಸ್ಮತಿಲಕವುಳ್ಳವನಾಗಿ ಈಕೆಯ ಮನೆಗೆ ಬಂದನು. ಇವನ ಬಲಗೈಯಲ್ಲಿ ರತ್ನಖಚಿತವಾದ ಲಿಂಗವಿತ್ತು. ಇದು ಸೂರ್ಯಚಂದ್ರ ರಂತೆ ಹೊಳೆಯುತ್ತಿತ್ತು ಈ ವೇಶ್ಯೆಯು ಇವನನ್ನು ನೋಡಿ ವಂದಿಸಿ ನಾಟ್ಯಮಂಟಪಕ್ಕೆ ಕರೆದೊಯ್ದು ಕುಳ್ಳಿರಿಸಿ ಅನೇಕೋಪಚಾರಗಳಿಂದ ಸತ್ಕರಿಸಿದಳು. ಈಕೆಯು ಈತನ ಕರದಲ್ಲಿದ್ದ ಲಿಂಗವನ್ನು ನೋಡಿ ವಿಸ್ಮಯದಿಂದ ತನ್ನ ಮಿತ್ರಳನ್ನು ಕುರಿತು ಈ ಲಿಂಗವು ನನಗೆ ಬೇಕು. ಈ ಧನಿಕ ವೈಶ್ಯನು ಇದನ್ನು ಬೆಲೆಗೆ ಕೊಡುವನೇ ? ಅಥವಾ ನಾನು ಇವನಿಗೆ ಮೂರು ದಿನಗಳು ಕುಲಸ್ತ್ರೀಯಾಗಿರುವೆನು, ಕೊಡುವನೇ ಹೇಗೆ ? ಕೇಳೆಂದಳು. ಆ ಸಖಿಯು ಈತನನ್ನು ವಿಚಾರಿಸಿದಳು.

ಆಗ ಆತನು ನಕ್ಕು ಇವಳ ರತಿಸುಖಕ್ಕೆ ಈ ಲಿಂಗವನ್ನು ನಾನು ಕೊಡುವೆನು. ಈಕೆಯು ಮೂರು ದಿನಗಳು ಈ ದಿನದಿಂದ ಪತಿವ್ರತೆ ಯಾಗಿದ್ದರೆ ಕೊಡುವೆನೆಂದನು , ಮತ್ತು ಆ ವೇಶ್ಯೆಯನ್ನು ಕುರಿತು, ಎಲೌ ಸುಂದರಿಯೇ, ನೀನು ವ್ಯಭಿಚಾರಿಣಿಯು ನಿನ್ನನ್ನು ನಂಬುವುದು ಹೇಗೆ ? ನಿನ್ನಲ್ಲಿ ಧರ್ಮವೆಲ್ಲಿದೆ ? ಬಹುಪುರುಷರಲ್ಲಿ ಸುಖಿಸುವ ನೀನು ಪತಿ ವ್ರತೆಯೆಂಬ ಹೆಸರನ್ನು ಹೇಗೆ ಪಡೆದೀಯೆ ? ನಿನ್ನ ಕುಲಾಚಾರವು ವ್ಯಭಿ ಚಾರವು. ಒಬ್ಬ ಪುರುಷನಿಂದ ನಿನ್ನ ಮನಸ್ಸು ತೃಪ್ತಿಯಾಗಿ ಸ್ಥಿರ ಮನಸ್ಸು ಉಂಟಾಗದು ಎಂದನು.

ಆಗ ಆಕೆಯು ನಿನಗೆ ಮೂರು ದಿನಗಳು ಕುಲಸ್ತ್ರೀಯಾಗಿರು ವೆನು. ಇದು ಸತ್ಯವು. ಲಿಂಗವನ್ನು ನನಗೆ ಕೊಡು. ರತಿಸುಖದಲ್ಲಿ ತನು ಮನ ಧನಾದಿಗಳಿಂದ ನಿನ್ನನ್ನು ತೃಪ್ತಿಪಡಿಸುವೆನು ಎಂದಳು.

ಆಗ ವೈಶ್ಯನು ಎಲೈ ವೇಶ್ಯೆಯೇ, ಈ ವಿಷಯದಲ್ಲಿ ನನಗೆ ಪ್ರಮಾಣವಾಗಿ ಹೇಳು. ಮೂರುದಿನಗಳು ದಿವಾರಾತ್ರಿಗಳಲ್ಲಿ ಪತ್ನೀ ಧರ್ಮದಂತಿರಬೇಕು ಎಂದನು.

ಆಗ ಆಕೆಯೂ ಆ ಲಿಂಗವನ್ನು ಮುಟ್ಟಿ ಚಂದ್ರಸೂರ್ಯರ ಸಾಕ್ಷಿಯಾಗಿ ಆ ರೀತಿ ಇರುವೆನು ಎಂದು ಪ್ರಮಾಣ ಮಾಡಿದಳು

ಬಳಿಕ ಆತನು ಆ ಲಿಂಗವನ್ನು ಆಕೆಗೆ ಕೊಟ್ಟನು. ಆಕೆಗೆ ಸಂತೋಷವಾಯಿತು. ಕರದಲ್ಲಿ ಕಂಕಣವನ್ನು ಕಟ್ಟಿಕೊಂಡಳು.

ಆತನು, ಎಲೈ ಸುಂದರಿಯೇ, ಈ ಲಿಂಗವು ಪ್ರಾಣಸಮಾನ ಎಂದು ತಿಳಿ. ಇದನ್ನು ಜೋಕೆಯಾಗಿಡು. ಈ ಲಿಂಗಕ್ಕೆ ಹಾನಿಯಾದರೆ ನನ್ನ ಪ್ರಾಣವನ್ನು ಕೊಡುವೆನು ಎಂದನು.

ಈತನ ಮಾತನ್ನು ಕೇಳಿ ಆಕೆಯು ಅವಕೆಶ್ಯಾಪ್ಪಿ ಪ್ರಾಣಸಮವಾಗಿ ಅದನ್ನು ಜೋಕೆಯಾಗಿ ನೋಡಿಕೊಳ್ಳುತ್ತಿದ್ದಳು ಇಬ್ಬರೂ ಆ ಮಂಟಪದಲ್ಲಿ ಕುಳಿತಿದ್ದರು. ಸಂಗಸಮಯದಲ್ಲಿ ಆ ಲಿಂಗವನ್ನು ಹತ್ತಿರದಲ್ಲಿಡಕೂಡದೆಂದನು. ಈ ಮಾತನ್ನು ಕೇಳಿ ಆಕೆಯು ಆ ಲಿಂಗವನ್ನು ಆ ಮಂಟಪದ ಮಧ್ಯಸ್ತಂಭದಲ್ಲಿಟ್ಟಳು. ಇಬ್ಬರೂ ಅಂತಃಪುರದಲ್ಲಿ ಕ್ರೀಡಿಸುತ್ತಿದ್ದರು. ಆಗ ನಾಟ್ಯಮಂಟಪದಲ್ಲಿ ಅಕಸ್ಮಾತ್ತಾಗಿ ದಾರುಣವಾದ ಅಗ್ನಿಯು ಬಿದ್ದಿತು. ಧೂಪವು ಭಸ್ಮವಾದಂತೆ ಆ ಮಂಟಪವು ಸುಟ್ಟುಹೋಯಿತು. ಇದನ್ನು ನೋಡಿ ಆ ವೈಶ್ಯನು ಪ್ರಲಾಪಿಸುತ್ತಿದ್ದನು. ಪ್ರಾಣಲಿಂಗವು ಹೋಯಿತೆಂದು ದುಃಖಿಸಿದನು ಆ ನಗರದವರೆಲ್ಲರೂ ಸೇರಿ ಬೆಂಕಿಯನ್ನಾರಿಸುತ್ತಿದ್ದರಾದರೂ ಆ ಲಿಂಗವೂ ಕಪಿಯೂ ಕೋಳಿಯೂ ಸುಟ್ಟು ಹೋದುವು. ವೈಶ್ಯನು ಇದನ್ನುನೋಡಿ ಅತಿಶಯಾಗಿ ದುಃಖಿಸಿ ಪ್ರಾಣಲಿಂಗವು ಹೋದುದರಿಂದ ಪ್ರಾಣ ಬಿಡುವೆನೆಂದು ಹೊರಗೆಬಂದು ಕಾಷ್ಠಗಳಿಂದ ಬೆಂಕಿಯನ್ನು ಹತ್ತಿಸಿ ಅಗ್ನಿಪ್ರವೇಶ ಮಾಡಿದನು ಜನರು ಇದನ್ನುನೋಡಿ ಆಶ್ಚರ್ಯ ಹೊಂದಿದರು ಆ ವೇಶ್ಯೆಯು ಅಯ್ಯೋ, ನನಗೆ ಈಗ ಪುರುಷಹತ್ಯಾದೋಷ ಬಂದಿತು. ಮಂಟಪದಲ್ಲಿದ್ದ ಲಿಂಗವು ಸುಟ್ಟುಹೋಯಿತು. ಪ್ರಾಣೇಶ್ವರನಾದ ವೈಶ್ಯನು ಮೃತನಾದನು ಈಗ ನಾನು ಪತಿವ್ರತಾಧರ್ಮದಂತೆ ಬೇಗ ಪ್ರಾಣಬಿಡುವೆನೆಂದು ವಿಪ್ರರನ್ನು ಕರೆಯಿಸಿ ಧನವನ್ನೆಲ್ಲಾ ದಾನಮಾಡಿದಳು. ಒಡವೆ ವಸ್ತ್ರಗಳನ್ನೂ ಭಂಡಾರವನ್ನೂ ದಾನಮಾಡಿದಳು ಚಂದನ ಕಾಷ್ಠಗಳಿಂದ ಅಗ್ನಿಯನ್ನು ಪ್ರಜ್ವಲಿಸಿ ತನ್ನ ನೆಂಟ

ರನ್ನು ವಂದಿಸಿ ನನಗೆ ಸಹಗಮನಕ್ಕೆ ಅನುಜ್ಞೆ ಕೊಡಿರಿ—ಪತಿಯೊಡನೆ ಹೋಗುವೆನು ಎಂದಳು.

ಅವರಲ್ಲಿ ಕೆಲವರು ಆಕೆಯಂ ಕುರಿತು, ಎಲೌ ತರುಣಿಯೇ, ನೀನು ಬುದ್ಧಿಹೀನೆಯು, ನಿನಗೆ ಧರ್ಮವೆಲ್ಲಿಯದು ? ವಾರಸ್ತ್ರೀಯಳ ಮನೆಗೆ ರಸಿಕರಾದ ಪುರುಷರನೇಕರು ಬರುವರು. ಇವರಿಗೆ ಮಿತಿಯೇ ಇಲ್ಲ. ಈತನು ನಿನಗೆ ಯಾವಾಗ ಪತಿಯಾದನು ? ಈ ವೈಶ್ಯ ನೆಲ್ಲಿಯವನು ? ಲಿಂಗವೆಲ್ಲಿಯದು ? ಧರ್ಮವೆಂದು ದೇಹವನ್ನೇಕೆ ಬಿಡುವಿ ? ಹೊಸಬನಾದ ರಸಿಕ ಪತಿಯನ್ನು ಹೊಂದುವುದೇ ಧರ್ಮವು ಇಂಥಾ ವೈಶ್ಯರು ಎಷ್ಟೋ ಮಂದಿಯು ಬರುವರು. ಈತನಿಗೆ ನೀನು ಸತಿಯಾದುದು ಎಂತು ? ಎಂದು ಆಕೆಗೆ ಬುದ್ಧಿಯನ್ನು ಹೇಳಿ ಸಹಗಮನ ಮಾಡಬೇಡವೆಂದು ಈಕೆ ಯನ್ನು ತಡೆದರು.

ಆಗ ಆಕೆಯು ಅವರನ್ನು ಕುರಿತು ಬಂಧುಗಳಿರಾ, ಈತನು ನನಗೆ ಪತಿಯಾದನು. ಚಂದ್ರಸೂರ್ಯರ ಸಾಕ್ಷಿಯಾಗಿ ಮೂರುದಿನಗಳು ಧರ್ಮ ಪತ್ನಿಯಾಗಿರುವೆನೆಂದು ಈತನಿಗೆ ಪ್ರಮಾಣಮಾಡಿ ಹೇಳಿದ್ದೆನು. ಈಗ ಈ ಪತಿಯು ಮೃತನಾದನು. ಪತಿವ್ರತಾಧರ್ಮವು ವೇದಶಾಸ್ತ್ರ ಪುರಾಣಗ ಳಲ್ಲಿ ಉಕ್ತವಾಗಿದ ಸಹಗಮನಕ್ಕಾಗಿ ಒಂದೊಂದು ಹೆಜ್ಜೆಯನ್ನು ಇಡಲು ಹೆಜ್ಜೆಹೆಜ್ಜೆಗೆ ಅಶ್ವಮೇಧಫಲ ಉಂಟಾದೀತು. ಸಹಗಮನ ಮಾಡಿದವಳು ತಂದೆತಾಯಿಗಳ ಇಪ್ಪತ್ತೊಂದು ಕುಲದವರನ್ನೂ, ಪತಿಯ ೨೧ ಕುಲದವ ರನ್ನೂ ಉದ್ಧರಿಸುವಳು. ಈರೀತಿ ಮಾಡದಿದ್ದರೆ ಪಾತಿವ್ರತ್ಯವು ವ್ಯರ್ಥವು. ಇಂಥಾ ಸ್ವರ್ಗ ಮಾರ್ಗವನ್ನು ಯಾವಾಗ ಹೊಂದಬೇಕು ? ಭೂಮಿಯಲ್ಲಿ ವ್ಯರ್ಥವಾಗಿ ಬದುಕಿ ಫಲವೇನು ? ಈ ಸಂಸಾರದಲ್ಲಿ ದುಃಖವು ಅತಿಯಾ ಗಿರುವುದು. ಎಂದಾದರೂ ಸಾಯುವುದೇ ನಿಜವು. ಎಂದೆಲ್ಲರಿಗೂ ವಿಜ್ಞಾ ಪಿಸಿ ನಗರದ ಹೊರಭಾಗದಲ್ಲಿ ಬಂದು ಅಗ್ನಿ ಗುಂಡದ ಹತ್ತಿರ ಹೋಗಿ ನಮಸ್ಕಾರ ಮಾಡಿ ಸರ್ವೇಶ್ವರನನ್ನು ಸ್ಮರಿಸಿ ಸೂರ್ಯನಿಗೆ ನಮಸ್ಕಾರ ಮಾಡಿ ಸಮಸ್ತ ಬ್ರಾಹ್ಮಣರನ್ನೂ ವಂದಿಸಿ ಅಗ್ನಿಗುಂಡಕ್ಕೆ ಧುಮುಕಿದಳು.

ಆಗ ಪಂಚವಕ್ತ್ರನಾದ ಸದಾಶಿವನು ದಶಭುಜಗಳಲ್ಲಿ ನಾನಾ ವಿಧಗ ಳಾದ ಆಯುಧಗಳನ್ನು ಧರಿಸಿ ತ್ರಿಶೂಲ ಡಮರುಗಗಳನ್ನು ಧರಿಸಿ ಭಸ್ಮ

ವನ್ನು ಧರಿಸಿ ಜಟಾಧಾರಿಯಾಗಿ ವೃಷಭವಾಹನನಾಗಿ ಅಗ್ನಿಯಲ್ಲಿ ಪ್ರತ್ಯಕ್ಷ ನಾದನು. ಅಗ್ನಿಯು ಶಾಂತವಾಯಿತು. ಭಕ್ತವತ್ಸಲನಾದ ಶಂಕರನು ಪ್ರಸನ್ನನಾಗಿ ಆ ವೇಶ್ಯೆಯ ಕರವನ್ನು ಪಿಡಿದು ತರುಣಿಯೇ ! ನಿನ್ನನ್ನು ಪರೀಕ್ಷಿಸಲು ನಾನು ಬಂದಿದ್ದೆನು. ನಿನ್ನ ಧರ್ಮವನ್ನೂ ಧೈರ್ಯವನ್ನೂ ಪರೀಕ್ಷಿಸಲು ಈರೀತಿ ಮಾಡಿದೆನು. ಸ್ವಯಂಭುವಿನ ರತ್ನಲಿಂಗವು ನಾಟ್ಯ ಮಂಟಪದಲ್ಲಿ ಸುಟ್ಟುಹೋಗುವಂತೆ ಮಾಡಿದೆನು. ನಿನ್ನ ಮನಸ್ಸನ್ನು ತಿಳಿದೆನು. ನೀನು ಅಗ್ನಿಪ್ರವೇಶ ಮಾಡಿ ಪ್ರತಿವ್ರತೆಯಾದೆ. ಇದು ಸತ್ಯವು. ಸತ್ಯ ವ್ರತವನ್ನು ಮಾಡಿದೆ ನಿನ್ನ ಭಕ್ತಿಗೆ ಮೆಚ್ಚಿದೆನು. ಆಯುರಾರೋಗ್ಯೈಶ್ವರ್ಯಾದಿಗಳಲ್ಲಿ ಯಾವ ವರವನ್ನಾದರೂ ಕೇಳು , ಕೊಡುವೆನು ಎಂದನು.

ಆಗ ಆಕೆಯು, ಚಂದ್ರಮೌಳಿಯೇ ! ತ್ರಿಭುವನಗಳ ಐಶ್ವರ್ಯವೂ ನನಗೆ ಬೇಡ, ಅದನ್ನು ನಾನು ಕೇಳುವುದಿಲ್ಲ. ನಿಮ್ಮ ಚರಣಕಮಲದಲ್ಲಿ ಭ್ರಮರವಾಗಿರುವೆನು ಇದೇ ನನಗೆ ಭಾಗ್ಯತಮವಾಗಿದೆ ನನ್ನ ನೆಂಟ ರಿಷ್ಟರೆಲ್ಲರೂ ನಿನ್ನ ಸನ್ನಿಧಿಯಲ್ಲಿರುವರು ನನ್ನ ಸಕಲ ದಾಸದಾಸಿಯ ರನ್ನೂ ನಿಮ್ಮ ಸನ್ನಿಧಿಗೆ ಕರೆದೊಯ್ಯಬೇಕು. ಶಂಕರನೇ ! ನಮ್ಮನ್ನು ಸಂಸಾರದಿಂದ ಬಿಡುಗಡೆಮಾಡಿರಿ ಎಂದು ಚರಣಂಗಳಿಗೆ ವಂದಿಸಿದಳು.

ಗೌರೀಶನು ಈಕೆಯ ವಚನವನ್ನುಕೇಳಿ ಎಲ್ಲರನ್ನೂ ವಿಮಾನ ವಲ್ಲಿ ಕುಳ್ಳಿರಿಸಿ ಸ್ವರ್ಗಕ್ಕೆ ಕರೆದುಕೊಂಡು ಹೋದನು ಆ ಕಪಿಯು ಆಗ ದೇಹವನ್ನು ಬಿಟ್ಟು ಈಗ ನಿನ್ನ ಮಗನಾಗಿ ಹುಟ್ಟಿದನು. ಆ ಕೋಳಿಯೂ ಅಲ್ಲಿ ದೇಹವನ್ನು ಬಿಟ್ಟು ನಿನ್ನ ಮಂತ್ರಿಸುತನಾಗಿದ್ದಾನೆ. ರುದ್ರಾಕ್ಷಿಧಾರಣದಿಂದ ಇವನು ರಾಜಕುಮಾರನಾದನು. ಪೂರ್ವಜನ್ಮದ ಸಂಸ್ಕಾರದಿಂದ ಈ ಇಬ್ಬರೂ ರುದ್ರಾಕ್ಷಿಗಳನ್ನು ಧರಿಸುವರು. ಇವರು ಕೇವಲ ಈಶ್ವರ ಭಕ್ತರು. ಪೂರ್ವಜನ್ಮದಲ್ಲಿ ನಿತ್ಯವೂ ಅಜ್ಞಾನದಿಂದ ರುದ್ರಾಕ್ಷಿಯನ್ನು ಧರಿಸಿದುದರಿಂದ ಇಷ್ಟು ಪುಣ್ಯವುಂಟಾಯಿತು. ಇದರಿಂದ ನಿನ್ನ ಮಗನಾದನು. ಈಗಲೂ ಜ್ಞಾನಿಗಳಾಗಿ ರುದ್ರಾಕ್ಷಿಯನ್ನು ಧರಿಸು ವರು. ಇವರ ಪುಣ್ಯಕ್ಕೆ ಮಿತಿಯಿಲ್ಲ ಎಂದು ಪರಾಶರರು ಆ ರಾಜನಿಗೆ ಹೇಳಿದರು ಎಂದು ಶ್ರೀ ಗುರುವು ಆ ದಂಪತಿಗಳಿಗೆ ಹೇಳಿದರು.

ಆಗ ರಾಜನು ಕೈಗಳನ್ನು ಜೋಡಿಸಿ ಪ್ರಶ್ನೆಗೈದನು ಎಂದು ಸಿದ್ಧರು ಹೇಳಿದರು. ಶ್ರೋತೃಗಳಿರಾ! ಇದನ್ನು ಕೇಳಲು ಪುರುಷಾರ್ಥಗಳು ಸಿದ್ಧಿಸುವುವು ಎಂಬಲ್ಲಿಗೆ ರುದ್ರಾಕ್ಷಿಮಹಾತ್ಮ್ಯ ಎಂಬ ೩೩ನೆಯ ಅಧ್ಯಾಯವು ಮುಗಿದುದು.

---

**ರಾಗ—ಶಾಳಿ.**

(ಶಂಕರಿದೇಹಿಮೆ ಶುಭಮಂಗಳಂ ಎಂಬಂತೆ.)

ಶ್ರೀಗುರುದೇವನೆ ಜಯಮಂಗಳಂ ‖ ಪಲ್ಲವಿ ‖

ಆ ಅನಸೂಯೆಯ ಸೂನುವೆ ದೇವನೆ |
ಭಾನುಕೋಟಿತೇಜ | ಭವಭಯಹರನೇ ‖ ೧ ‖

ಅತ್ರಿಯ ಪುತ್ರನೆ | ದತ್ತಾತ್ರೇಯನೆ |
ಉತ್ತಮರೂಪನೆ | ಸ್ತುತ್ಯನೆಪೊರೆಯೈ ‖ ೨ ‖

ವರಶ್ರೀಪಾದನೆ | ನರಹರಿರೂಪನೆ |
ಪರಮದಯಾನಿಧೆ | ಪಾಲಿಸು ಸತತಂ ‖ ೩ ‖

---

ಶ್ರೀ ಗಣೇಶಾಯನಮಃ‖ ಶ್ರೀಗುರುವು ಆ ದಂಪತಿಗಳಿಗೆ ಹೇಳುವರು. ಈರೀತಿಯಾಗಿ
ಪರಾಶರರು ಆ ಕಾಶ್ಮೀರ ರಾಜನಿಗೆ ರುದ್ರಾಕ್ಷಿಯ ಮಹಿಮೆಯನ್ನು
ಹೇಳಿದರು. ಬಳಿಕ ಆ ರಾಜಪುತ್ರನ ಪೂರ್ವಜನ್ಮದ ಚರಿತ್ರೆಯನ್ನು
ಹೇಳಿದರು. ಆ ರಾಜನು ಸಂತೋಷಿಸಿ ಅಂಜಲಿಬದ್ಧನಾಗಿ
ವಿಜ್ಞಾಪಿಸಿದನು ಎಂಬಲ್ಲಿಗೆ



